# ಡಿ.ವಿ.ಜಿ. ಅವರ ಬಿಡಿ ಬರಹಗಳು

ಡಿ.ವಿ.ಜಿ.



ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ
ನರಸಿಂಹರಾಜ ಕಾಲೊನಿ, ಬೆಂಗಳೂರು
1988

D. V. G. AVARA BIDI BARAHAGALU—(Occasional Writi
of Dr. D. V. Gundappa). Published by Gokhale Institute
Public Affairs, Bangalore-19. Pages : 160+viii, Price Rs. 10·

First Impression : 1988, 1000 Copies.





ಸಹಾಯ–ಸಹಕಾರ

ಪ್ರೊ॥ ಎಂ. ವಿ. ಸೀತಾರಾಮಯ್ಯ
ಶ್ರೀ ಡಿ. ಆರ್. ವೆಂಕಟರಮಣನ್
ಶ್ರೀ ಎಂ. ವಿ. ಸತ್ಯನಾರಾಯಣ
ಶ್ರೀ ನಾ. ಗೀತಾಚಾರ್ಯ




ಬೆಲೆ : ಹತ್ತು ರೂಪಾಯಿಗಳು

ಮುದ್ರಣ

ದಿ ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ ಲಿ.
ಮೈಸೂರು ರಸ್ತೆ, ಬೆಂಗಳೂರು 18.

# ಮುನ್ನುಡಿ

ಕನ್ನಡ ನಾಡು ನುಡಿಗಳ ಸೇವೆಗೆ ತಮ್ಮ ಇಡಿಯ ಬದುಕನ್ನು ಮುಡುಪಿಟ್ಟು ನಾಡಿನ ದಿಗ್ಗಜಗಳಲ್ಲಿ ಒಬ್ಬರಾದ, ಧೀಮಂತಿಕೆಯಿಂದಲೂ ಆರ್ಜವ ಹೃದಯ ಸಂಪನ್ನತೆಗಳಿಂದಲೂ ಪಂಡಿತ ಪಾಮರರನ್ನು ಸಮಭಾವದಿಂದ ಕಾಣುತ್ತಿದ್ದ ಡಾ॥ ಡಿ.ವಿ.ಜಿ. ಅವರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಂಸ್ಥಾಪಕರೂ ಆಗಿದ್ದಾರೆನ್ನುವುದು ನಾವೆಲ್ಲ ಹೆಮ್ಮೆಪಡಬೇಕಾದ ವಿಷಯ. ಈ ಮಹನೀಯರ ಜನ್ಮ ಶತಮಾನೋತ್ಸವದ ಆಚರಣೆಯನ್ನು ಏರ್ಪಡಿಸಬೇಕಾದದ್ದು ತನ್ನ ಕರ್ತವ್ಯ ಎಂದು ತೀರ್ಮಾನಿಸಿ ಅವರ ಜನ್ಮದಿನವಾದ 1987 ಮಾರ್ಚ್ 17ರಿಂದ ತೊಡಗಿ ಒಂದು ವರ್ಷಪೂರ್ತಿ ಉತ್ಸವವು ನಾಡಿನಾದ್ಯಂತ ನಡೆಯಬೇಕೆಂಬ ನಿರ್ಧಾರವನ್ನು ಸಂಸ್ಥೆ ಕೈಗೊಂಡಿತು. ಉತ್ಸವವನ್ನು ವೈಭವೋಪೇತವಾಗಿ ನೆರವೇರಿಸಲು ಒಂದು ಪ್ರಾತಿನಿಧಿಕವಾದ ಮತ್ತು ಅನೇಕ ಗಣ್ಯವ್ಯಕ್ತಿಗಳನ್ನೊಳಗೊಂಡ ಉತ್ಸವ ಸಮಿತಿಯನ್ನು ನಿಯೋಜಿಸಲಾಯಿತು.

ಉತ್ಸವದ ಉದ್ಘಾಟನೆಯನ್ನು ಡಿ.ವಿ.ಜಿ. ಅವರ ಸ್ವಸ್ಥಳವಾದ ಕೋಲಾರ ಜಿಲ್ಲೆಯ ಮುಳಬಾಗಲಿನಲ್ಲಿ ನಡೆಸತಕ್ಕದೆಂದೂ, ಉತ್ಸವದ ಅಂಗವಾಗಿ ವಿಚಾರಗೋಷ್ಠಿಗಳು, ಸಂಭಾವನಾ ಸಂಪುಟ, ಸಂಸ್ಮರಣ ಸಂಚಿಕೆ ಮತ್ತು ಅವರ ಸಂಕ್ಷಿಪ್ತ ಜೀವನ ಚರಿತ್ರೆ ಇವುಗಳ ಪ್ರಕಟನೆ, ಮುಂತಾದ ಕಾರ್ಯಗಳ ಜೊತೆಗೆ ಡಿ.ವಿ.ಜಿ. ಅವರ ಕೃತಿಗಳ ಪೈಕಿ ಆಯ್ದ ಕೆಲವು ಕೃತಿಗಳನ್ನು ಪ್ರಕಟಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

ಕರ್ನಾಟಕ ಸರ್ಕಾರವು ಡಿ.ವಿ.ಜಿ. ಅವರ ಸಮಗ್ರ ಕೃತಿರಾಶಿಯನ್ನು ಹತ್ತು ಸಂಪುಟಗಳಲ್ಲಿ ಪ್ರಕಟಿಸುವ ಅತ್ಯಂತ ಶ್ಲಾಘ್ಯವಾದ ಯೋಜನೆಯನ್ನು ಕೈಗೊಂಡಿದೆ. ಈ ಸಂಪುಟಗಳ ಬೆಲೆ ಎಷ್ಟೇ ಕಡಿಮೆ ಎಂದರೂ ಜನಸಾಮಾನ್ಯರು ಕೊಳ್ಳುವ ಶಕ್ತಿಗೆ ಎಟುಕುವಂತಿರಲು ಸಾಧ್ಯವಿಲ್ಲ. ಆದ್ದರಿಂದ ಉತ್ಸವಸಮಿತಿಯು ಡಿ.ವಿ.ಜಿ. ಅವರ ಬಹುಮುಖ ಸಾಹಿತ್ಯ ಪ್ರತಿಭೆ ವ್ಯಕ್ತಪಡುವಂತೆಯೂ ಅವರ ಕೃತಿಬಾಹುಳ್ಯವನ್ನು ಪ್ರತಿನಿಧಿಸುವಂತೆಯೂ ಪುಸ್ತಕಗಳನ್ನು ಸಿದ್ಧಪಡಿಸುವ ಆಲೋಚನೆ ಮಾಡಲಾಯಿತು. ಆ ಪುಸ್ತಕಗಳ ಪೈಕಿ 'ಡಿ.ವಿ.ಜಿ. ಅವರ ಬಿಡಿ ಬರಹಗಳು' ಎಂಬ ಪುಸ್ತಕ ಒಂದಾಗಿದೆ. ಈವರೆಗೆ ಎಲ್ಲಿಯೂ ಪುಸ್ತಕ ರೂಪದಲ್ಲಿ ಪ್ರಕಟವಾಗಿಲ್ಲದ ಡಿ.ವಿ.ಜಿ. ಅವರ ಬಿಡಿ ಲೇಖನಗಳನ್ನು ಡಿ.ವಿ.ಜಿ. ಸಂಭಾವನಾ ಸಂಪುಟ "ಧೀಮಂತ"ದಲ್ಲಿ ಪ್ರಕಟಿಸಲಾಗುತ್ತಿದ್ದು ಸಾಮಾನ್ಯಜನಕ್ಕೆ ಅನುಕೂಲವಾಗಲಿ ಎಂಬ ಉದ್ದೇಶದಿಂದ ಪ್ರತ್ಯೇಕ ಪುಸ್ತಕವಾಗಿ ಈ ಮೂಲಕ ಪ್ರಥಮ ಬಾರಿಗೆ ಪ್ರಕಟಿಸುತ್ತಿದ್ದೇವೆ.

ಸಾಮಾನ್ಯ ಜನರೂ ಕೊಳ್ಳಲಾಗುವಂತಿರಬೇಕೆಂಬ ನಮ್ಮ ಆಶಯಕ್ಕೆ ಅನುಗುಣ
ವಾಗಿ ಪುಸ್ತಕಗಳ ಬೆಲೆಯನ್ನು ಕೂಡಿದಮಟ್ಟಿಗೂ ಕಡಿಮೆಯಾಗಿ ನಿಗದಿಮಾಡಿದೆ.
ಈ ಪುಸ್ತಕಗಳ ಆಯ್ಕೆ, ಕರಡುತಿದ್ದುವುದು, ಮುಂತಾದ ಕೆಲಸಗಳ ಹೊಣೆಗಾರಿಕೆ
ಯನ್ನು ಪ್ರಕಟನ ಸಮಿತಿಯ ಮಾನ್ಯಮಿತ್ರರು ಒಪ್ಪಿಕೊಂಡು ಅತ್ಯಂತ ಶ್ರದ್ಧೆ
ಯಿಂದಲೂ ಉತ್ಸಾಹದಿಂದಲೂ ನಿರ್ವಹಿಸಿ ಉಪಕಾರಮಾಡಿದ್ದಾರೆ. ಈ ಸನ್ಮಿತ್ರರಿಗೆ
ಗೋಖಲೆ ಸಂಸ್ಥೆ ಕೃತಜ್ಞವಾಗಿದೆ.

ಬೆಂಗಳೂರು ಪ್ರೆಸ್‌ನ ಮಾನ್ಯ ಮಿತ್ರರು ಇದನ್ನು ಉತ್ತಮವಾಗಿ ಮುದ್ರಿಸಿ
ಕೊಟ್ಟು ಉಪಕರಿಸಿದ್ದಾರೆ.

ದಿನಾಂಕ : 6-3-1988

ಬೆಂಗಳೂರು-19

**ನಿಟ್ಟೂರು ಶ್ರೀನಿವಾಸರಾವ್**
ಕಾರ್ಯದರ್ಶಿ
ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ
ಮತ್ತು
ಅಧ್ಯಕ್ಷ
ಡಿ.ವಿ.ಜಿ. ಜನ್ಮಶತಮಾನೋತ್ಸವ ಸಮಿತಿ.

ಡಿ.ವಿ.ಜಿ. ಅವರ

# ಬಿಡಿ ಬರಹಗಳು

## ಪರಿವಿಡಿ

## ಗಾಂಧಿಯವರ ಗುರು

# ಗೋಪಾಲ ಕೃಷ್ಣ ಗೋಖಲೆ

ನಮ್ಮ ದೇಶದ ಚರಿತ್ರೆಯಲ್ಲಿ ದೇಶಭಕ್ತರ ಹೆಸರುಗಳು ಪ್ರಸಿದ್ಧವಾದುವು ಹತ್ತಾರಿವೆಯಲ್ಲವೆ ? ರಾಜಕೀಯ ಪ್ರಾಜ್ಞತೆಗಾಗಿಯೂ ಸಮಾಜಸೇವೆಯ ಉತ್ಸಾಹಕ್ಕಾಗಿಯೂ ಸ್ವಾರ್ಥತ್ಯಾಗಕ್ಕಾಗಿಯೂ ವೀರಶ್ರದ್ಧೆಗಾಗಿಯೂ ಹೆಸರಾದವರು ಬಹು ಮಂದಿ ಇರುವಲ್ಲಿ ಗೋಖಲೆಯವರನ್ನು ವಿಶೇಷವಾಗಿ ಸ್ಮರಣೆಗೆ ತಂದುಕೊಳ್ಳಲು ಕಾರಣವೇನು ? ಅಂಥ ಅನನ್ಯವಾದ ಗುಣಾತಿಶಯವೇನು ಅವರ ಜೀವಿತಕಥೆಯಲ್ಲಿ ಕಾಣಬರುತ್ತಿದೆ ? ಇದು ನ್ಯಾಯವಾದ ಪ್ರಶ್ನೆ.

### ಅವರ ವೈಶಿಷ್ಟ್ಯ

ಒಂದು ದೃಷ್ಟಿಯಿಂದ ನೋಡಿದರೆ ಗೋಖಲೆಯವರ ಕಥೆ ನಮ್ಮ ಇಂದಿನ ಪರಿಸ್ಥಿತಿಯಲ್ಲಿ ಸ್ವಾರಸ್ಯ ಮಾಸಿದಂತೆ ತೋರುವಂಥಾದ್ದು. ಈ ಹೊತ್ತು ಭಾರತ ದೇಶವು ಸರ್ವಸ್ವತಂತ್ರವಾಗಿದೆ,—ತಾನು ಇಷ್ಟಪಟ್ಟರೆ ಬ್ರಿಟನ್ನಿನ ಸಂಪರ್ಕವನ್ನು ಸಂಪೂರ್ಣವಾಗಿ ತ್ಯಜಿಸಬಹುದಾಗಿದೆ. ಗೋಖಲೆಯವರಾದರೋ ಬ್ರಿಟನ್ನಿಗೂ ಭಾರತಕ್ಕೂ ಸಂಬಂಧವು ದೈವಸಿದ್ಧವಾದದ್ದೆಂದು ನಂಬಿದ್ದ ಗುಂಪಿಗೆ ಸೇರಿದವರು. ಭಾರತದ ಸ್ವಾತಂತ್ರ್ಯಪ್ರಯತ್ನದಲ್ಲಿ ಅವರು ಮಿತವೇಗಿಗಳಾಗಿದ್ದವರು. ತಮ್ಮ ಹೋರಾಟವನ್ನು ಶಾಸನವಿಹಿತ ಕ್ರಮದಲ್ಲಿ ನಡಸಬೇಕೆಂದಿದ್ದವರು. ಅವರಂತೆ ಶೂರ ಪರಾಕ್ರಮ ಲಕ್ಷಣಗಳಿಲ್ಲದ,—ವೀರಾವೇಶ ತಾಳದ,—ಸಾರ್ವಜನಿಕ ಪುರುಷರನ್ನು ನಮ್ಮ ಇಂದಿನ ಉಗ್ರಪಂಥಗಳ ಕಾಲದಲ್ಲಿ ಜನ ಮೆಚ್ಚಿಕೊಳ್ಳದೆ ಇರುವುದು ಯಾರಿಗೂ ಆಶ್ಚರ್ಯವಾಗಲಾರದು. ಈಗಿನ ಮೆಚ್ಚಿಕೆ ಭೀಮಸೇನನ ವಿಷಯದಲ್ಲಿ ; ಧರ್ಮರಾಯನ ಬಗ್ಗೆ ಅಷ್ಟು ಹೆಚ್ಚಾಗಿಲ್ಲ.

ಆದರೆ ಈ ದೃಷ್ಟಿಯು ವಿಷಯದ ಆಳವನ್ನು ಅಳೆದು ತತ್ತ್ವವನ್ನು ಕಾಣಬಲ್ಲದ್ದಲ್ಲ. ಗೋಖಲೆಯವರಂಥ ಮಹನೀಯರ ಜೀವಿತವನ್ನು ಎರಡು ಬೇರೆ ಬೇರೆ ಪಕ್ಕಗಳಿಂದ ಪರೀಕ್ಷಿಸಿ ನೋಡಬಹುದು. ಒಂದು, ಅವರು ಮಾಡಿದ ತಾತ್ಕಾಲಿಕ

ಕಾರ್ಯಗಳ ಪಕ್ಕದ ನೋಟ; ಇನ್ನೊಂದು, ಅವರ ಸಾರ್ವಕಾಲಿಕ ಮನೋ
ಧರ್ಮದ ನೋಟ. ಅವರು ಬದುಕಿದ್ದ ದಿವಸಕ್ಕೆ ಮಾತ್ರ ಉಪಯುಕ್ತವಾದದ್ದು
ಮೊದಲನೆಯದು; ಈ ಹೊತ್ತಿಗೂ ನಾಳೆಗೂ ಉಪಯುಕ್ತವಾಗಬಲ್ಲದ್ದು ಎರಡನೆ
ಯದು. ಈ ಎರಡನೆಯದರ ಕಾರಣದಿಂದಲೇ ಮಹಾತ್ಮಾ ಗಾಂಧಿಯವರು ಗೋಖಲೆ
ಯವರನ್ನು ತಮ್ಮ ಇಷ್ಟಗುರುವೆಂದು ಅಂಗೀಕರಿಸಿದ್ದದ್ದು.

## ರಾಜಕೀಯ ಸ್ವಭಾವ

ರಾಜಕೀಯ ರಂಗದ ಸ್ವಭಾವ ದಿನೇ ದಿನೇ ಬದಲಾಯಿಸುತ್ತಿರುವಂಥಾದ್ದು. ಯಾವೊಬ್ಬ ವ್ಯಕ್ತಿಯ ಆಹಾರ ವಸ್ತ್ರಗಳ ಬಗೆಯೂ, ವಿದ್ಯೆ ಸಂಸ್ಕಾರಗಳ ಕ್ರಮವೂ, ವಯೋವ್ಯತ್ಯಾಸವಾದಂತೆ, ಋತು ಪರಿವರ್ತನೆಯನ್ನನುಸರಿಸಿ, ಬದಲಾಯಿಸುತ್ತ ವಷ್ಟೇ! ಒಂದು ಜನಾಂಗದ ರಾಜ್ಯಾಶಯಗಳೂ ಸಾಮಾಜಿಕ ಆವಶ್ಯಕತೆಗಳೂ ಅ ಜನದ ಮನೋಬುದ್ಧಿಗಳ ವಿಕಾಸವಾದಂತೆಲ್ಲ ಆಗಿಂದಾಗ್ಗೆ ಬೆಳೆದು ಬೇರ್ಪಡುತ್ತಿರು ತ್ತವೆ. ಐದು ವರ್ಷದ ಕೂಸಿಗೆ ಸರಿಹೊಂದುವ ಅಂಗಿ ಹದಿನೈದು ವರ್ಷದ ಹುಡುಗ ನಿಗೆ ಆಗಲಾರದು; ಹಾಗೆಯೇ ಹದಿನೈದು ವರ್ಷದವನದು ಐದು ವರ್ಷದವನಿಗೆ ಹೊಂದಲಾರದು. ಅದರಂತೆಯೇ ರಾಜ್ಯವ್ಯವಸ್ಥೆಯು ನಮ್ಮ ಹೊರಮೈಗೆ ಅಂಗಿ ಯಾಗಿ ಹೊಸ ಹೊಸದಾಗುತ್ತಿರತಕ್ಕದ್ದು. ಪದೇ ಪದೇ ಪುನಃಪರಿಷ್ಕಾರವನ್ನು ಅಪೇಕ್ಷಿಸುತ್ತಿರುವುದೇ ರಾಜ್ಯಸಂಸ್ಥೆಗಳ ಲಕ್ಷಣ. ಆದಕಾರಣದಿಂದ ಗೋಖಲೆಯವರ ಕಾಲಕ್ಕೆ ಸರಿಯೆನಿಸಿದ್ದ ಕಾರ್ಯವಿಧಾನಗಳೂ ಅವರ ಸಮಸಮಯಿಗಳಿಗೆ ಸಾಕೆನಿಸಿದ್ದ ಧ್ಯೇಯಗಳೂ ನಮ್ಮ ದಿವಸಕ್ಕೆ ಸಾಲದೆನಿಸಿರುವುದು ಕಾಲಪ್ರವಾಹ ಧೋರಣೆಯಿಂದ ಆಗಿರುವ ಸಂಗತಿ. ನಿನ್ನೆಯ ಗೋಖಲೆಯವರನ್ನು ಇಂದು ಹಿಂದೆ ಬಿಟ್ಟು ಮುಂದಕ್ಕೆ ಹರಿದು ಬಂದಿರುವ ರಾಜಕೀಯ ವಿಕಾಸದ ಪ್ರವಾಹವು ಇಂದಿನ ನಾಯಕರನ್ನೂ ನಾಳೆ ಹಿಂದಕ್ಕುಳಿಸಿ ತಾನು ಇನ್ನೂ ಮುಂದಕ್ಕೆ ಹರಿಯಬಹುದು. ಬರಿಯ ರಾಜಕೀಯಸ್ಥರು ಮಾತ್ರವೇ ಆದ ದೇಶಸೇವಕರು ಇಂಥ ಹಳಸಿಕೆಗೆ,—ಮುದಿ ಗುದುರೆಯ ಪಾಲಿನ ಮರೆವಿಗೆ—ತುತ್ತಾಗಲು ಸಿದ್ಧರಾಗಿರಲೇಬೇಕು.

ಗೋಖಲೆಯವರು ಅಂಥ ಕಿಂಚಿತ್ಕಾಲಮಾತ್ರದ ರಾಜಕೀಯಸ್ಥರಾಗಿದ್ದವರಲ್ಲ. ಅವರ ರಾಜಕೀಯ ಬರಿಯ ರಾಜಕೀಯವಲ್ಲ; ಅದು ಒಂದು ಶಾಶ್ವತ ಧರ್ಮದ ರೂಪಾಂತರ. ಅವರು ಒಂದು ಹೊಸ ಪಂಥಕ್ಕೆ ಮೂಲಪುರುಷರಾದವರು. ಆ ಪಂಥ ಎಲ್ಲ ಕಾಲಕ್ಕೂ ಎಲ್ಲ ಕಡೆಗೂ ಅಪೇಕ್ಷಣೀಯವಾದದ್ದು. ಅವರು ಚಿರಸ್ಮರಣೀಯ ರಾಗಿರುವುದು ಈ ಕಾರಣದಿಂದ. ಅವರ ಸ್ವರೂಪವೆಂಥದೆಂಬುದನ್ನು ವಿಚಾರ ಮಾಡ ಹೊರಡುವ ಮುನ್ನ, ಅವರ ಜೀವನಚರಿತ್ರೆಯ ಮುಖ್ಯಾಂಶಗಳನ್ನು ಸಂಗ್ರಹವಾಗಿ ಜ್ಞಾಪಕಕ್ಕೆ ತಂದುಕೊಳ್ಳೋಣ.

## ಜೀವಿತ ಸಂಗತಿಗಳು

ಗೋಪಾಲ ಕೃಷ್ಣ ಗೋಖಲೆಯವರು 1866ನೆಯ ಇಸವಿ ಮೇ 9ರಲ್ಲಿ ರತ್ನಗಿರಿ ಜಿಲ್ಲೆಯ ಚಿಪ್ಲೂನ್ ತಾಲ್ಲೂಕಿನ ಒಂದು ಹಳ್ಳಿಯಲ್ಲಿ ಹುಟ್ಟಿದರು. ಅವರ ಮನೆತನ ಚಿತ್ಪಾವನ ಎಂಬ ಮಹಾರಾಷ್ಟ್ರ ಬ್ರಾಹ್ಮಣ ಪಂಗಡದ್ದು. ಗೋಖಲೆಯವರಿಗೆ ಹದಿಮೂರು ವರ್ಷವಾಗಿದ್ದಾಗ ಅವರ ತಂದೆ ಕಾಲಾಧೀನರಾದರು. ಆಮೇಲೆ ಗೋಖಲೆಯವರು ಅಣ್ಣಂದಿರ ಪೋಷಣೆಯಲ್ಲಿ ಬೆಳೆದರು. ಅದು ಬಡತನದ ಜೀವನ; ಆದರೆ ಮಾನ ಮರ್ಯಾದೆಗಳ ವಾತಾವರಣದ ಜೀವನ. ಗೋಖಲೆಯವರು ಅಕ್ಷರಜ್ಞಾನ ಪಡೆದ ಕೆಲವು ಕಾಲದ ಮೇಲೆ ಕೊಲ್ಹಾಪೂರದಲ್ಲಿಯೂ ಬಳಿಕ ಬೊಂಬಾಯಿಯಲ್ಲಿಯೂ ಪ್ರೌಢ ಶಿಕ್ಷಣ ಪಡೆದು, 1884ರಲ್ಲಿ ಬಿ.ಎ. ಪಟ್ಟವನ್ನು ಸಂಪಾದಿಸಿದರು. ಆ ವೇಳೆಗೆ ಪುಣೆ ಪಟ್ಟಣದಲ್ಲಿ ಲೋಕಮಾನ್ಯರಾದ ಶ್ರೀ ಬಾಲ ಗಂಗಾಧರ ತಿಲಕರವರು ಪ್ರಸಿದ್ಧಿಗೆ ಬಂದು ಸಾರ್ವಜನಿಕ ಸಮಾರಂಭಗಳಿಗೆ ಪೀಠಿಕೆ ಹಾಕಿದ್ದರು. ಆ ಸಮಾರಂಭಗಳಲ್ಲಿ ಒಂದು, 'ಡೆಕ್ಕನ್ ಎಜುಕೇಶನ್ ಸೊಸೈಟಿ' ಎಂಬ ವಿದ್ಯಾಪ್ರಚಾರ ಸಂಘದ್ದು. ಗೋಖಲೆಯವರು ಆ ಸಂಘಕ್ಕೆ ಸೇರಿ ಉಪಾಧ್ಯಾಯ ವೃತ್ತಿಯನ್ನು ಸ್ವೀಕರಿಸಿದರು. ಕಾಲಕ್ರಮದಲ್ಲಿ ಅವರು ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಗಣಿತಶಾಸ್ತ್ರದ ಮತ್ತು ಚರಿತ್ರೆ, ಇಂಗ್ಲಿಷ್ ಸಾಹಿತ್ಯಗಳ ಪ್ರೊಫೆಸರ್ ಆಗಿ, ವಿದ್ಯಾರ್ಥಿಗಳ ಪ್ರೀತಿ ಗೌರವಗಳಿಗೆ ಪಾತ್ರರಾದರು. ಆ ವೃತ್ತಿಯ ಜೊತೆಗೆ ರಾಜಕೀಯದ ಅಭ್ಯಾಸವನ್ನೂ ಕೈಕೊಂಡರು. ಆ ಅಭ್ಯಾಸಕ್ಕೆ ತಕ್ಕ ಸನ್ನಿವೇಶವನ್ನು ಶ್ರೀ ಮಹಾದೇವ ಗೋವಿಂದ ರಾನಡೆ ಮೊದಲಾದ ಸಾರ್ವಜನಿಕರು ಸಿದ್ಧಪಡಿಸಿದ್ದರು. ರಾನಡೆಯವರನ್ನು ಗೋಖಲೆಯವರು ಗುರುವಾಗಿ ಅಂಗೀಕರಿಸಿ ತಾವು ಪುಣೆಯ "ಸಾರ್ವಜನಿಕ ಸಭಾ" ಎಂಬ ಸಂಸ್ಥೆಯ ಸದಸ್ಯರಾಗಿಯೂ ಸ್ವಲ್ಪ ಕಾಲಾನಂತರ ಅದರ ಕಾರ್ಯದರ್ಶಿಯಾಗಿಯೂ ಕೆಲವು ದಿನ ಆ ಸಭೆಯ ಪತ್ರಿಕೆಗೆ ಸಂಪಾದಕರಾಗಿಯೂ ಸಹ ಕೆಲಸ ಮಾಡಿದರು. ಹೀಗೆ ಹತ್ತು ವರ್ಷಗಳ ಅಭ್ಯಾಸ ನಡೆದ ತರುವಾಯ 1895ರಲ್ಲಿ, ಕಾಂಗ್ರೆಸ್ ಮಹಾ ಸಭೆಯು ಪುಣೆಯಲ್ಲಿ ಸೇರಿದಾಗ ಆ ಸಭೆಯ ಸ್ವಾಗತ ಮಂಡಲಿಯ ಕಾರ್ಯದರ್ಶಿಯಾಗುವ ಅವಕಾಶ ಗೋಖಲೆಯವರಿಗೆ ದೊರೆಯಿತು. ಈ ಕಾರ್ಯಗಳ ಜೊತೆಗೆ ಪುಣೆಯ ಪೌರಸಭೆಯ ಸದಸ್ಯತ್ವವನ್ನೂ ಗೋಖಲೆಯವರು ವಹಿಸಿಕೊಂಡಿದ್ದರು. ಹೀಗೆ ಒಂದು ಕಡೆ ವಿದ್ಯಾಬೋಧನೆ, ಇನ್ನೊಂದು ಕಡೆ ದೇಶವಿಚಾರ ವ್ಯಾಸಂಗ, ಮತ್ತೊಂದು ಕಡೆ ಲೇಖನಾಭ್ಯಾಸ, ಇನ್ನೊಂದು ಕಡೆ ಸಂಘ ಸಂಸ್ಥೆಗಳಲ್ಲಿ ಕಾರ್ಯಾನುಭವ, ಜನಾನುಭವ—ಈ ರೀತಿ ಬಹುಮುಖವಾಗಿ ಬೆಳೆಯಿತು ಗೋಖಲೆಯವರ ದೇಶಸೇವಾಯೋಗ್ಯತೆ.

1897ರಲ್ಲಿ ಇಂಡಿಯಾ ಸರಕಾರದ ಹಣಕಾಸಿನ ಆಡಳಿತವನ್ನು ಪರಿಶೀಲನೆ ಮಾಡುವ ಬಗ್ಗೆ ಇಂಗ್ಲೆಂಡಿನ ಪಾರ್ಲಿಮೆಂಟು ಲಾರ್ಡ್ ವೆಲ್ಬಿ ಮಹಾಶಯನ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿತು. ಆ ಸಮಿತಿಯ ಆಹ್ವಾನದ ಮೇರೆಗೆ ಸಾಕ್ಷ್ಯ ಕೊಡಲು ಗೋಖಲೆಯವರನ್ನು ಪುಣೆಯ ಸಾರ್ವಜನಿಕ ಸಭೆ ಆರಿಸಿ ಕಳುಹಿಸಿತು.

ಅವರು ಇಂಗ್ಲೆಂಡಿಗೆ ಪ್ರಯಾಣಮಾಡಿ ಸಮಿತಿಯ ಮುಂದೆ ವಿಷಯ ವಿಮರ್ಶ
ಯಲ್ಲಿ ತೋರಿಸಿದ ಪ್ರಜ್ಞೆ ಚತುರತೆಗಳು ಗೋಖಲೆಯವರನ್ನು ಭಾರತದ ಸಾ
ಜನಿಕರಲ್ಲಿ ಅಗ್ರಶ್ರೇಣಿಗೆ ಏರಿಸಿದವು. ಅವರಿಗೆ ಆಗ ಬಂದ ಖ್ಯಾತಿಗೆ ಮೂಲಕಾರ
ತಮ್ಮ ಗುರುಗಳಾದ ರಾನಡೆಯವರು ಕೊಟ್ಟಿದ್ದ ಮಾರ್ಗದರ್ಶನವೇ ಎಂದೂ ಮಿತ
ಹಿರಿಯರಾದ ಜೋಶಿಯವರು ಸಂಗ್ರಹಿಸಿ ಶೋಧಿಸಿ ಕೊಟ್ಟಿದ್ದ ಅಂಕಿ ಅಂಶಗ
ಸಾಮಗ್ರಿಯೇ ಎಂದೂ ಗೋಖಲೆಯವರು ಪದೇ ಪದೇ ಹೇಳುತ್ತಿದ್ದರು. ಆದರ
ವಾಸ್ತವವಾಗಿ ಗೋಖಲೆಯವರ ಪ್ರತಿಪಾದನೆ ಅಷ್ಟು ಪರಿಣಾಮಕಾರಿಯಾದದ್ದ
ಅವರ ಸ್ವಂತ ಪ್ರತಿಭೆ ಸಾಮರ್ಥ್ಯದಿಂದಲೇ ಎಂಬುದರಲ್ಲಿ ಯಾರಿಗೂ ಸಂದೇ
ವಿರಲಿಲ್ಲ.

## ಸೌಜನ್ಯ ಘನತೆ

ಗೋಖಲೆಯವರು ಇಂಗ್ಲೆಂಡಿನಲ್ಲಿದ್ದಾಗ ಭಾರತದಲ್ಲಿ ಒಂದು ವಿಶೇಷ ಘಟ
ನಡೆಯಿತು. 1898ರಲ್ಲಿ ಬೊಂಬಾಯಿ ಪ್ರಾಂತದಲ್ಲಿ ಪ್ಲೇಗ್ ಉಪದ್ರವ ತಲೆದೋ
ಉಲ್ಬಣಿಸಿದ್ದದ್ದು ಇಂದಿನ ಹಳಬರಿಗೆ ಜ್ಞಾಪಕದಲ್ಲಿರಬಹುದು. ಆ ಸಾಂಕ್ರಾಮಿಕ
ವ್ಯಾಪನೆಯನ್ನು ತಡೆಗಟ್ಟಬೇಕೆಂದು ಸರಕಾರದವರು ನಾನಾ ಪ್ರಯತ್ನಗಳನ
ಮಾಡಿದರು. ಇಲಿ ಬಿದ್ದ ಮನೆಗಳನ್ನು ಖಾಲಿ ಮಾಡಿಸುವುದು, ಸೋಂಕಿರುವ ಪ್ರದೇ
ಗಳಲ್ಲಿ ಜನಗಳಿಗೆ (ಇನಾಕ್ಯುಲೇಶನ್) ಚುಚ್ಚುಮದ್ದನ್ನು ಹಾಕಿಸುವುದು, ಇವ
ಮೊದಲಾದ ಏರ್ಪಾಟುಗಳನ್ನು ಸರಕಾರವು ಬಲವಂತದಿಂದ ನಡಸಬೇಕಾಯಿತ
ಅದು ಜನಕ್ಕೆ ಹೊಸ ಅನುಭವವಾದದ್ದರಿಂದ ಅನೇಕರು ಅದಕ್ಕೆ ಒಪ್ಪದವರಾದರ
ಅಂಥವರನ್ನು ನಿರ್ಬಂಧಪಡಿಸಲು ಸರಕಾರದವರು ಪೊಲೀಸ್ ಮಿಲಿಟರಿ ಸಿಬ್ಬಂ
ಗಳನ್ನು ಉಪಯೋಗಿಸಬೇಕಾಯಿತು. ಇದರಿಂದ ಜನಕ್ಕೆ ಮತ್ತಷ್ಟು ಉದ್ರೇ
ವಾಗಿ, ದೊಂಬಿ ದಂಗೆಗಳಿಗೆ ದಾರಿಯಾಯಿತು. ಆ ಸಂದರ್ಭದಲ್ಲಿ ಐರೋಪ್ಯ ಜಾತಿಯ
ಸೋಲ್ಜರುಗಳು ಅತ್ಯಾಚಾರ ನಡಸಿದರೆಂದು ಜನರಲ್ಲಿ ದೂರು ಹೊರಟಿತು. ಆ
ದೂರನ್ನು ಉತ್ಪ್ರೇಕ್ಷೆಮಾಡಿ ಒಬ್ಬಾನೊಬ್ಬ ಮಿತ್ರರು ಗೋಖಲೆಯವರಿಗೆ ಇಂಗ್ಲೆಂಡಿ
ಕಾಗದ ಬರೆದರು. ಗೋಖಲೆಯವರು ಅದನ್ನು ನಂಬಿ ಪುಣೆಯ ಸೋಲ್ಜರುಗ
ವರ್ತನೆಯನ್ನು ಕುರಿತು ಇಂಗ್ಲೆಂಡಿನ ಪತ್ರಿಕೆಗಳಲ್ಲಿ ಉಗ್ರವಾದ ಖಂಡನೆಯನ
ಪ್ರಕಟಿಸಿದರು. ಲಂಡನ್ನಿನಲ್ಲಿ ಸಾರ್ವಭೌಮ ಸರಕಾರವು ಆ ಟೀಕೆಯನ್ನು ನೋಡಿ
ಅದು ವಿಚಾರಾರ್ಹವಾದದ್ದೆಂದು ನಿಶ್ಚಯಿಸಿ, ತಕ್ಕ ಪರೀಕ್ಷೆ ನಡಸುವಂತೆ ಭಾರ
ಸರಕಾರಕ್ಕೆ ಆಜ್ಞೆ ಮಾಡಿತು. ಆಗ ಗೋಖಲೆಯವರು ತಾವು ಮಾಡಿದ್ದ ಟೀಕೆಗಳಿ
ಆಧಾರವನ್ನು ತೋರಿಸಿಕೊಟ್ಟು, ತಮ್ಮ ಖಂಡನೆಯನ್ನು ಸಮರ್ಥನೆ ಮಾಡಿಕೊಳ
ಬೇಕಾಯಿತು. ಆದರೆ ಅವರು ಇಂಗ್ಲೆಂಡಿನಿಂದ ಹಿಂದಿರುಗಿ ಬಂದು ಪುಣೆಯಲ್ಲಿ ತಮ
ಮಿತ್ರರಲ್ಲಿಯೂ ಸಹೋದ್ಯೋಗಿಗಳಲ್ಲಿಯೂ ವಿಚಾರ ಮಾಡ ಹೊರಟಾಗ ಹಿಂ
ತಮಗೆ ಪತ್ರ ಬರೆದಿದ್ದು ಆ ಉಗ್ರ ಟೀಕೆಯನ್ನು ಪ್ರೇರಿಸಿದ್ದವರು ಬರಿಯ ಬೀ
ಮಾತನ್ನು ನಂಬಿಕೊಂಡು ಹಾಗೆ ಮಾಡಿದ್ದರೆಂದೂ ಸೋಲ್ಜರುಗಳ ಮೇಲಣ ದೋಷ

ರೋಪಣೆಗೆ ತಕ್ಕ ರುಜುವಾತುಗಳು ದೊರೆಯುವಂತಿರಲಿಲ್ಲವೆಂದೂ ವ್ಯಕ್ತವಾಯಿತು. ಹೀಗೆ ತಮ್ಮ ಬಾಯಿಂದ ಹೊರಟಿದ್ದ ಮಾತು ಬುಡವಿಲ್ಲದ್ದೆಂದು ಒಪ್ಪಿಕೊಳ್ಳಬೇಕಾದ ಪ್ರಸಂಗ ಬಂತು ಗೋಖಲೆಯವರಿಗೆ. ಆ ವಿಷಮ ಪ್ರಸಂಗದಲ್ಲಿ ಅವರು ತಮ್ಮ ಪಶ್ಚಾತ್ತಾಪವನ್ನು ಸೂಚಿಸಿ ಸೈನ್ಯಾಧಿಕಾರಿಗಳ ಕ್ಷಮೆಯನ್ನು ಬೇಡಿದರು. ಪ್ರಾಮಾಣಿಕತೆಯೂ ಘನತೆಯೂ ಉಳ್ಳ ಸಜ್ಜನರು ನಡೆಯಬೇಕಾಗಿದ್ದ ಇಂಥ ನಡವಳಿಕೆಯನ್ನು ಗೋಖಲೆಯವರು ನಡೆದುಕೊಂಡದ್ದಕ್ಕಾಗಿ ಕೆಲ ಮಂದಿ ಭ್ರಾಂತಿವೀರರು ಗೋಖಲೆಯವರನ್ನು "ಕಚ್ಚಾ ಮನುಷ್ಯ" ಎಂದು ಕರೆದು ಅಪಹಾಸ್ಯ ಮಾಡಿದರು. ಗೋಖಲೆಯವರು ಅದರಿಂದ ನೋವು ತಿಂದರು. ಸ್ವಲ್ಪ ಕಾಲ ಅವರ ಜೀವ ಕುಗ್ಗಿತ್ತು. ಆದರೆ ಅದು ಸ್ವಲ್ಪ ಕಾಲ ಮಾತ್ರ.

1899ರಲ್ಲಿ ಅವರನ್ನು ಮುಂಬಯಿ ಪ್ರಾಂತದ ಪೌರಸಭೆಗಳವರು ಆ ಆಧಿಪತ್ಯದ ಶಾಸನ ಸಭೆಗೆ (ಲೆಜಿಸ್ಲೆಟಿವ್ ಕೌನ್ಸಿಲ್) ಸದಸ್ಯರನ್ನಾಗಿ ಚುನಾಯಿಸಿದರು. ಅಲ್ಲಿಂದ ಮುಂದೆ ಗೋಖಲೆಯವರ ಉನ್ನತಿ ಬೇಗ ಬೇಗ ಬೆಳೆಯುತಕ್ಕದ್ದಾಯಿತು. ಮುಂಬಯಿ ಲೆಜಿಸ್ಲೆಟಿವ್ ಸಭೆಯಲ್ಲಿ ಸಾರ್ವಜನಿಕ ವಿಚಾರ ವಿಮರ್ಶೆಯಲ್ಲಿ ಗೋಖಲೆಯವರು ತೋರಿಸಿದ ಉತ್ಸಾಹ ಸಾಮರ್ಥ್ಯಗಳಿಂದ ಅವರಿಗೆ ಲೋಕದ ಶ್ಲಾಘನೆ ಪ್ರೋತ್ಸಾಹಗಳು ದೊರೆತು ಅವರ ಕೀರ್ತಿ ದೃಢಪಟ್ಟದ್ದಲ್ಲದೆ, ಅವರ ಅಂತರಂಗದಲ್ಲಿಯೇ ಒಂದು ಹೊಸ ಧೈರ್ಯವೂ ಒಂದು ಹೊಸ ಕರ್ತವ್ಯದರ್ಶನವೂ ಉಂಟಾದುವು. ದೇಶದ ರಾಜಕೀಯವನ್ನು ಮುಂದಕ್ಕೊಯ್ಯಲು ತಮಗೆ ಕೊಂಚವಾದರೂ ಶಕ್ತಿಯುಂಟೆಂಬ ಭರವಸೆಯೇ ಆ ಧೈರ್ಯ: ದೇಶ ವಿಚಾರಗಳನ್ನು ಒಳಹೊಕ್ಕು ಪರೀಕ್ಷಿಸಿದಂತೆಲ್ಲಾ ತಮ್ಮಿಂದ ದೇಶಕ್ಕೆ ಆಗಬೇಕಾದ ಸೇವೆಯ ಆವಶ್ಯಕತೆ ಅಪಾರವಾಗಿದೆಯೆಂಬುದೇ ಆ ಕರ್ತವ್ಯದರ್ಶನ. ಈ ಎರಡು ಸಿದ್ಧಾಂತಗಳ ಫಲವಾಗಿ ಗೋಖಲೆಯವರು ತಾವು ಅಲ್ಲಿಂದ ಮುಂದಕ್ಕೆ ತಮ್ಮ ಜೀವಿತವನ್ನೆಲ್ಲ ದೇಶಕ್ಕಾಗಿಯೇ—ವಿಶೇಷವಾಗಿ ರಾಜಕೀಯಕ್ಕಾಗಿಯೇ—ವಿನಿಯೋಗಿಸತಕ್ಕದೆಂದು ಸಂಕಲ್ಪಿಸುವಂತಾಯಿತು.

## ಸೇವಾದೀಕ್ಷೆ

ಆ ಸಂಕಲ್ಪದಂತೆ 1902ರಲ್ಲಿ ಅವರು ಉಪಾಧ್ಯಾಯ ವೃತ್ತಿಯಿಂದ ವಿಶ್ರಾಂತಿ ಪಡೆದರು. ಮತ್ತು ಮುಂಬಯಿ ಶಾಸನಸಭೆಯಿಂದ ಭಾರತ ಸಾಮ್ರಾಜ್ಯ ಶಾಸನ ಸಭೆಗೆ ಚುನಾಯಿಸಲ್ಪಟ್ಟರು. ಅದು ಲಾರ್ಡ್ ಕರ್ಜನ್ ಎಂಬ ಮಹಾ ಪ್ರಸಿದ್ಧನಾದ ವೈಸ್ರಾಯ್ ಇದ್ದ ಕಾಲ. ಆಗ ಕಲ್ಕತ್ತೆ ಭಾರತದ ರಾಜಧಾನಿ. ಗೋಖಲೆಯವರು ವರ್ಷದ ಬಹುಭಾಗವನ್ನು ಅಲ್ಲಿ ಕಳೆಯಬೇಕಾಗಿತ್ತು. ಆ ಸಭೆಯಲ್ಲಿ ಅವರು ತೋರಿಸಿದ ವಿಷಯವಿಮರ್ಶನಕ್ರಮ. ಅರ್ಥವಿಚಾರನೈಪುಣ್ಯ, ವಾಕ್ಪಟುತೆ. ನ್ಯಾಯತತ್ಪರತೆ. ಪ್ರಮಾಣಬದ್ಧತೆ—ಇವುಗಳನ್ನು ಕಂಡು ಕರ್ಜನ್ ಮಹಾಶಯನು ಮೆಚ್ಚಿ ತಲೆದೂಗುವವನಾದನು.

## ಜನನಾಯಕತ್ವ

1905ರಲ್ಲಿ ಗೋಖಲೆಯವರು ಪುಣೆಯ ಪೌರಸಂಸ್ಥೆಯ ಅಧ್ಯಕ್ಷರಾದರು. ಇಂದು ಸಕಲ ಸನ್ಮಾನ್ಯರಾಗಿರುವ ನಮ್ಮ ಶ್ರೀಮಾನ್ ಮೋಕ್ಷಗುಂಡಂ ವಿಶ್ವೇಶ್ವರಯ್ಯ ನವರು ಆಗ ಪುಣೆಯಲ್ಲಿ ಇಂಜಿನಿಯರಾಗಿ, ಗೋಖಲೆಯವರಿಗೆ ಮಿತ್ರರಾಗಿಯೂ ಸಹೋದ್ಯೋಗಿಗಳಾಗಿಯೂ ಇದ್ದರು. ಈ ಎರಡು ಹೆಸರುಗಳನ್ನು ಹೇಳಿದ ಮೇಲೆ ಆಗ ಪುಣೆಯ ಪೌರಕಾರ್ಯಗಳು ಬಹು ವಿಚಕ್ಷಣೆಯಿಂದ ನಡೆದುವೆಂದು ಬೇರೆಯಾಗಿ ಹೇಳಬೇಕಾದದ್ದಿಲ್ಲ.

ಅದೇ ವರ್ಷ ಗೋಖಲೆಯವರು ಕಾಂಗ್ರೆಸ್ ಮಹಾಸಭೆಯ ಅಧ್ಯಕ್ಷರಾದರು. ಕಾಶಿಯಲ್ಲಿ ನಡೆದ ಆ ಮಹಾಸಭೆಯಲ್ಲಿ ಅವರು ಆಗ—ಈಗ್ಗೆ ನಲವತ್ತನಾಲ್ಕು ವರ್ಷಗಳ ಹಿಂದೆ—ಮಾಡಿದ ಅಧ್ಯಕ್ಷೋಪನ್ಯಾಸವು ಈಗಲೂ ನಮಗೆ ಓದಲರ್ಹ ವಾದದ್ದಾಗಿದೆ. ಅಲ್ಲಿಂದ ಮುಂದಕ್ಕೆ ಅವರ ಜನನಾಯಕತ್ವವು ಲೋಕಸಿದ್ಧವಾಯಿತು.

ಅದೇ 1905ರಲ್ಲಿ (ಜೂನ್ 12ರಲ್ಲಿ) ಅವರು ಪುಣೆಯಲ್ಲಿ **ಭಾರತ ಸೇವಕ ಸಂಘ** (Servants of India Society) ವನ್ನು ಸ್ಥಾಪಿಸಿದರು. ಈ ಸಂಘದ ಉದ್ದೇಶ ನಾನಾ ಮುಖದ ದೇಶಸೇವೆಗೆ ಸಾರ್ವಜನಿಕರನ್ನು ತಯಾರು ಮಾಡಿ ಒದಗಿಸುವುದು. ಸಾರ್ವಜನಿಕ ಕಾರ್ಯಗಳು ಸಮರ್ಪಕವಾಗಿ ನಡೆಯಬೇಕಾದರೆ ಅವುಗಳನ್ನು ನಡಸು ವವರು ತದೇಕನಿಷ್ಠರಾದವರಾಗಿರಬೇಕು. ಬರಿಯ ವಿರಾಮಕಾಲದಲ್ಲಿ—ವಿನೋದ ಕಾಲಕ್ಷೇಪದ ರೀತಿಯಲ್ಲಿ—ಬರಿಯ ರಜೆಯ ಹೊತ್ತಿನ ಹವ್ಯಾಸವಾಗಿ—ದೇಶಕಾರ್ಯ ಗಳನ್ನು ಮಾಡುತ್ತೇವೆನ್ನುವವರು ಹರುಕುಮುರುಕಾಗಿ, ಅರ್ಧಮರ್ಧವಾಗಿ, ಒಂದು ಕ್ರಮ, ಒಂದು ಶಿಸ್ತು ಇಲ್ಲದೆ, ಹಾರಾಟ ನಡಸುವವರಾಗಬಹುದೇ ಹೊರತು ನಿಜವಾಗಿ ಕೃತಕಾರ್ಯರಾಗಲಾರರು. ದೇಶಕಾರ್ಯಕ್ಕೆ ಒಂದು ಪೂರ್ವಸಿದ್ಧತೆ ಬೇಕು, ಒಂದು ಶಿಕ್ಷಣ ಪರಿಷ್ಕಾರ ಬೇಕು, ಒಂದು ವ್ರತದೀಕ್ಷೆ ಬೇಕು. ದೇಶಕಾರ್ಯ ವೊಂದರ ವಿನಾ ಮತ್ತಾವ ಚಿಂತೆಯೂ ಸಾರ್ವಜನಿಕನಿಗೆ ಇರಬಾರದು. ಇಂಥ ದೀಕ್ಷಾನಿಯಮವುಳ್ಳ ಜನರನ್ನು ಆಕರ್ಷಿಸಿ, ಅವರಿಗೆ ತಕ್ಕ ತಯಾರಿಯನ್ನು ಒದಗಿ ಸುವುದು ಭಾರತ ಸೇವಕ ಸಂಘದ ಮುಖ್ಯೋದ್ದೇಶ.

1908ರಲ್ಲಿ ಗೋಖಲೆಯವರು ಮತ್ತೆ ಇಂಗ್ಲೆಂಡಿಗೆ ಹೋಗಿ ಮೋರ್ಲೆ ಮಂತ್ರಿ ಮೊದಲಾದ ರಾಜಕೀಯ ಪ್ರಮುಖರೊಡನೆ ಭಾರತ ರಾಜ್ಯ ಸುಧಾರಣೆಗಾಗಿ ಸಂಧಾನ ನಡಸಿದರು. ಅದರ ಫಲಿತಾಂಶವೇ 1909ರಲ್ಲಿ ಆದ ಶಾಸನ ಸಭಾ ಸಂಸ್ಕಾರಗಳು ಮತ್ತು ಭಾರತೀಯರಿಗೆ ಸರಕಾರದ ಅಂಗರಚನೆಯಲ್ಲಿ ದೊರೆತ ಸ್ಥಾನೋನ್ನತಿಗಳು.

1912ರಲ್ಲಿ ಗೋಖಲೆಯವರು ಗಾಂಧಿಯವರಿಂದ ಬಂದಿದ್ದ ಕರೆಯನ್ನು ಮನ್ನಿಸಿ ದಕ್ಷಿಣ ಆಫ್ರಿಕಕ್ಕೆ ಪ್ರಯಾಣ ಮಾಡಿ, ಅಲ್ಲಿಯ ಸರಕಾರದ ಮುಖಂಡರೊಡನೆ ಆ ಭೂಭಾಗದಲ್ಲಿ ಭಾರತೀಯರಿಗೆ ಸಲ್ಲಬೇಕಾಗಿದ್ದ ಸ್ಥಾನಮಾನಗಳನ್ನು ಕುರಿತು ಮಾತುಕಥೆ ನಡೆಸಿದರು.

ಅಲ್ಲಿಂದ ಹಿಂದಿರುಗಿ ಬಂದಮೇಲೆ ದೇಶದ ರಾಜಕೀಯ ಪ್ರಗತಿಯಲ್ಲಿ ಇನ್ನೊಂದು ಹೆಜ್ಜೆ ಮುಂದೆ ಸಾಧಿಸುವ ಪ್ರಯತ್ನಕ್ಕಾಗಿಯೂ ಭಾರತ ಸೇವಕ ಸಂಘವನ್ನು ಸುವ್ಯವಸ್ಥೆಗೆ ತರುವ ಉದ್ದೇಶಕ್ಕಾಗಿಯೂ ತಮ್ಮ ಜೀವಿತವನ್ನು ವಿನಿಯೋಗಿಸ ಬೇಕೆಂದು ಸಂಕಲ್ಪಿಸಿದ್ದರು. 1909 ರಿಂದ ಈಚೆಗೆ ನಡೆದಿದ್ದ ಜನಜಾಗೃತಿಯ ಮತ್ತು ರಾಜಕೀಯಾನುಭವದ ಪರಿಣಾಮವಾಗಿ ದೇಶಕ್ಕೆ ಅವಶ್ಯವಾಗಿದ್ದ ರಾಜಕೀಯ ಸುಧಾರಣೆ ಗಳೇನೇನೆಂಬುದನ್ನು ಸೂಚಿಸಿ ಅವರು ಒಂದು ರೂಪರೇಖೆಯನ್ನು ಗುರುತು ಮಾಡಿಟ್ಟರು. ಆದರೆ ಅವರು ಬಹು ವರ್ಷಗಳಿಂದ ಪಟ್ಟಿದ್ದ ಪ್ರಯಾಸದ ಪರಿಣಾಮ ವಾಗಿ ಅವರ ದೇಹಶಕ್ತಿ ಕುಗ್ಗಿತ್ತು. ಮನಸ್ಸತ್ತ್ವಕ್ಕೆ ತಕ್ಕಾದಷ್ಟು ಶರೀರ ದಾರ್ಢ್ಯ ವಿರಲಿಲ್ಲ. ಸ್ವಲ್ಪಕಾಲ ವ್ಯಾಧಿಗ್ರಸ್ತರಾಗಿದ್ದು 1915ನೆಯ ಇಸವಿ ಫೆಬ್ರುವರಿ 19ರಲ್ಲಿ—

"ಇಷ್ಟು ಕಾಲ ಇಲ್ಲಿಯ ಸಂತೋಷವನ್ನು ನೋಡಿದ್ದಾಯಿತು ;
ಇನ್ನು ಅಲ್ಲಿಯದನ್ನು ನೋಡಹೋಗುತ್ತೇನೆ"

—ಎಂದು ಹೇಳುತ್ತಾ ತಮ್ಮ ಜೀರ್ಣ ಕಳೇಬರವನ್ನು ವಿಸರ್ಜಿಸಿದರು. ಆಗ್ಗೆ ಅವರ ವಯಸ್ಸು 49 ಮಾತ್ರ. ಬುದ್ಧಿ ಬಂದ ದಿನದಿಂದ ಮೃತ್ಯು ಬರುವವರೆಗೂ ದೇಶಕ್ಕಾಗಿ ಚಿಂತಿಸಿ ದುಡಿದದ್ದು ಆ ಜನ್ಮ.

## ತತ್ತ್ವಧ್ಯೇಯಗಳು

ಈ ಮೇಲಣ ಲಘು ಬಾಹ್ಯರೇಖೆಯಲ್ಲಿ ಎಷ್ಟೋ ಮುಖ್ಯಾಂಶಗಳು ಬಿಟ್ಟು ಹೋಗಿವೆ. ಅವುಗಳಲ್ಲಿ ಅತಿ ಮುಖ್ಯವಾದುವುಗಳೆಂದರೆ ಇವು :—

(1) ಪ್ರಾಥಮಿಕ ವಿದ್ಯಾಭ್ಯಾಸವನ್ನು ಜನದಲ್ಲಿ ವಿನಾಶುಲ್ಕವಾಗಿ ನಿರ್ಬಂಧ ದಿಂದ ಪ್ರಚಾರ ಮಾಡಿಸುವ ಶಾಸನ.

(2) ಪಂಚಮರು (ಹರಿಜನರು) ಮೊದಲಾದ ಅವನತ ಜನಾಂಗಗಳ ಉದ್ಧಾರ ಪ್ರಯತ್ನ.

(3) ಸರಕಾರದಲ್ಲಿ ವ್ಯಯವನ್ನು ಮಿತಮಾಡಿಸುವುದು—ಮುಖ್ಯವಾಗಿ ಭಾರಿ ಸಂಬಳಗಳನ್ನು ಇಳಿಸುವುದು.

(4) ಸ್ವದೇಶೀ ಸಮಾರಂಭ.

(5) ಸ್ಥಳೀಯ ಸಂಸ್ಥೆಗಳನ್ನು—ಎಂದರೆ ಪೌರಸಭೆ ಪಂಚಾಯುತಿಗಳನ್ನು— ಕಟ್ಟಿ ನಿಲ್ಲಿಸುವುದು.

(6) ಸಾಮಾಜಿಕ ಪರಿಷ್ಕಾರಗಳನ್ನು—ಎಂದರೆ, ಸ್ತ್ರೀ ವಿದ್ಯಾಭ್ಯಾಸ, ಪ್ರೌಢ ವಿವಾಹ ಮೊದಲಾದ ಪ್ರಕೃತ ಕಾಲೋಚಿತವಾದ ಸಂಪ್ರದಾಯ ಶೋಧನೆಗಳು.

ಈ ಮತ್ತು ಇತರ ಕಾರ್ಯಭಾಗಗಳ ವಿವರಣೆಗಳನ್ನೂ ಹಾಗೆಯೇ ಗೋಖಲೆಯವರು ಸೇರಿದ್ದ ಇತರ ನಾನಾ ಸಮಿತಿ ಸಂಸ್ಥೆಗಳ ವಿವರಗಳನ್ನೂ ಬೇರೆ* ಗ್ರಂಥದಲ್ಲಿ ತಕ್ಕಮಟ್ಟಿಗೆ ಕಾಣಬಹುದು.

ಗೋಖಲೆಯವರು ನೆರವೇರಿಸಿದ ಕಾರ್ಯವಿಸ್ತಾರದಲ್ಲಿ ತಾತ್ಕಾಲಿಕಮಾತ್ರದುವಾದ ಭಾಗದ ಬಹ್ವಂಶಗಳು ಅಂದಿನಿಂದೀಚೆಗೆ ದೇಶದಲ್ಲಿ ನಡೆದಿರುವ ಕಾರ್ಯಗಳ ರಾಶಿಯ ಕೆಳಗಡೆ ಸೇರಿಹೋಗಿವೆ. ಭಾರತವು ಕಳೆದ ಮೂವತ್ತನಾಲ್ಕು ವರ್ಷಗಳಲ್ಲಿ ಎಲ್ಲ ಕ್ಷೇತ್ರಗಳಲ್ಲಿಯೂ ನೂರು ಮೈಲಿಗಳಷ್ಟು ದೂರ ಮುಂಬರಿದಿದೆ. ಆದಕಾರಣ ಗೋಖಲೆಯವರ ಕಾರ್ಯಕರ್ತೃತ್ವದ ಒಂದು ಭಾಗದ ಬೆಲೆ ಈಗ ವಿಶೇಷವಾಗಿರುವುದು ಚರಿತ್ರ ವಿಮರ್ಶಕನಿಗೆ; ಅದರ ಬೆಲೆ ಸಾಮಾನ್ಯರಿಗೆ ಅಷ್ಟು ಹೆಚ್ಚಿನದಲ್ಲ. ಸಮಸ್ತ ಜನರಿಗೂ ಕುತೂಹಲಕಾರಿಯಾದ ಭಾಗವೆಂದರೆ ಗೋಖಲೆಯವರ ತತ್ತ್ವದೃಷ್ಟಿಯದು. ಅದನ್ನು ಕುರಿತು ಈಗ ಸಂಗ್ರಹವಾಗಿ ವಿಚಾರ ಮಾಡೋಣ.

ಸಾರ್ವಕಾಲಿಕವಾಗಿ, ಸರ್ವರಿಗೂ ಅನುಸರಣೀಯವಾಗಿರುವ ನಾಲ್ಕು ಸೂತ್ರಗಳನ್ನು ಗೋಖಲೆಯವರು ತೋರಿಸಿಕೊಟ್ಟಿದ್ದಾರೆ. ಅವುಗಳನ್ನು ಒಂದೊಂದು ಮಾತಿನಲ್ಲಿ ಹೀಗೆ ಸೂಚಿಸಬಹುದು :—

(1) ದೀಕ್ಷಾಶ್ರದ್ಧೆ, (2) ಆತ್ಮಶಿಕ್ಷಣ, (3) ಸಮಷ್ಟಿದೃಷ್ಟಿ, (4) ವೈಜ್ಞಾನಿಕ ಬುದ್ಧಿವೃತ್ತಿ.

## ದೀಕ್ಷಾನಿಯಮ

(1) ದೀಕ್ಷಾಶ್ರದ್ಧೆಯೆಂದರೇನೆಂಬುದನ್ನು ಮೇಲೆ ಕೊಂಚ ಸೂಚಿಸಿದೆ. ದೇಶಕಾರ್ಯವೆಂಬುದು ನಮಗೆ, ಕೇವಲ ಐಚ್ಛಿಕವಾದ—ಎಂದರೆ, ಮಾಡಿದರೆ ಮಾಡಬಹುದಾದ, ಬಿಟ್ಟರೆ ಬಿಡಬಹುದಾದ—ಧರ್ಮಾಂಶವಲ್ಲ. ಅದು ರಾಷ್ಟ್ರೀಕನಾದ ಪ್ರತಿಯೊಬ್ಬನಿಗೂ ಅವಶ್ಯ ಕರ್ತವ್ಯವಾದದ್ದು. ಅದನ್ನು ಮಾಡದಿರುವುದು ಎಂಥವನಲ್ಲಿಯೂ ದೋಷ. ನಾವು ನಮ್ಮ ಮತಾಚಾರ ಕುಲಾಚಾರಗಳನ್ನು ನಿರ್ವಹಿಸುವುದರಲ್ಲಿ ಯಾವ ಭಕ್ತಿ ವಿಶ್ವಾಸಗಳನ್ನು ತೋರಿಸಬೇಕೆಂದು ಗುರುಹಿರಿಯರು ಹೇಳುತ್ತಾರೆಯೋ, ಯಾವ ತೆರದ ಆಸಕ್ತಿಯನ್ನೂ ಉತ್ಸಾಹವನ್ನೂ ಶಿಷ್ಟರಾದವರು ಪೂಜೆ, ವ್ರತ, ಭಜನೆ ಮೊದಲಾದ ದೇವತಾಕಾರ್ಯಗಳಲ್ಲಿ ತೋರಿಸುತ್ತಾರೆಯೋ ಅಂಥಾ ನಿಯಮನಿಷ್ಠೆಯೂ ವ್ರತಶ್ರದ್ಧೆಯೂ ಸಾರ್ವಜನಿಕ ಜೀವನಕ್ಕೂ ಸಲ್ಲತಕ್ಕದ್ದೆಂಬುದು ಗೋಖಲೆಯವರ ಭಾವನೆ. ಆತ್ಮಪರಿಶುದ್ಧತೆ, ಕಾಮ ಕ್ರೋಧವರ್ಜನೆ, ಉನ್ನತ ಧ್ಯೇಯ ಚಿಂತನೆ, ಸರ್ವಸ್ವ ಸಮರ್ಪಣೆ—ಇವು ದೈವಭಕ್ತನಿಗೆ

---

* **ಗೋಪಾಲ ಕೃಷ್ಣ ಗೋಖಲೆ** (ಜೀವನಚರಿತ್ರೆ–ಉಪನ್ಯಾಸಗಳು): ಡಿ. ವಿ. ಗುಂಡಪ್ಪ; ಪುಟ ೧೯೨; ರೂ. ೨—೦—೦.
ಪ್ರಕಾಶಕರು: ಕರ್ಣಾಟಕ ಪ್ರಕಟನಾಲಯ, ಬಸವನಗುಡಿ, ಬೆಂಗಳೂರು–೪.

ಹೇಗೋ ದೇಶಭಕ್ತನಿಗೂ ಹಾಗೆಯೇ ಇರಬೇಕಾದ ಗುಣಗಳು. ದೇಶ ಪ್ರಮುಖರಲ್ಲಿ ಹಲಕೆಲವರಾದರೂ ಇಂಥವರಾಗದೆ ಹೋದಲ್ಲಿ ಆ ದೇಶಕ್ಕೆ ಸುವ್ಯವಸ್ಥೆ ದುರ್ಲಭ ವಾಗುತ್ತದೆ. ಅಂಥ ದೀಕ್ಷಾಬದ್ಧರಾದ ದೇಶಸೇವಕರು ಮಹಾಜನರಲ್ಲಿ ಎಷ್ಟೆಷ್ಟು ಹೆಚ್ಚಾಗಿದ್ದರೆ ದೇಶದ ಕ್ಷೇಮಾಭ್ಯುದಯಗಳು ಅಷ್ಟಷ್ಟು ಚೆನ್ನಾಗಿ ಸಾಧನೆಯಾಗುತ್ತವೆ.

## ನಿತ್ಯ ವಿದ್ಯಾರ್ಥಿತ್ವ

(2) ಆತ್ಮಶಿಕ್ಷಣ—ದೀಕ್ಷೋತ್ಸಾಹಗಳು ಅವಶ್ಯವಾಗಿರುವಂತೆಯೇ ಬುದ್ಧಿ ಶಿಕ್ಷಣವೂ ಅವಶ್ಯವಾದದ್ದು. ಅಡಿಗೆಯ ಕೆಲಸಕ್ಕೂ ಬಡಗಿಯ ಕೆಲಸಕ್ಕೂ ಒಂದು ತಯಾರಿ ಬೇಕೆಂಬುದನ್ನು ಎಲ್ಲರೂ ಕಂಡುಕೊಂಡಿದ್ದಾರೆ. ಆದರೆ ರಾಜಕೀಯಕ್ಕೆ ಮಾತ್ರ ಶುಶ್ರೂಷೆ ಸಂಸ್ಕಾರಗಳ ಪೂರ್ವಸಿದ್ಧತೆ ಬೇಡವೆ ? ರಾಜಕೀಯದಲ್ಲಿ ಸಾಮಾನ್ಯ ಜನಕ್ಕೆ ಸ್ವಾಭಾವಿಕವಾಗಿ ಒಂದು ಆಕರ್ಷಣೆಯಿರುತ್ತದೆ. ಪ್ರಸಿದ್ಧಿಯ ಆಶೆ, ಅಧಿಕಾರದ ಆಶೆ, ಸ್ಥಾನಮಾನಗಳ ಆಶೆ, ನಾಯಕತ್ವದ ಆಶೆ, ಹಣ ಸಂಪಾದನೆಯ ಅವಕಾಶದ ಆಶೆ—ಈ ನಾನಾ ಆಶೆಗಳಿಂದ ಜನರು ರಾಜಕೀಯ ರಂಗಕ್ಕೆ "ನಾನು ಮುಂದೆ". "ತಾನು ಮುಂದೆ" ಎಂದು ನುಗ್ಗುತ್ತಿರುವುದನ್ನು ಈಗ ನಾವು ಕಣ್ಣಾರೆ ಕಾಣುತ್ತಿದ್ದೇವೆ. ಉತ್ಸಾಹಿಗಳಾದ ತರುಣರು ಬಗೆಬಗೆಯ "ಇಸಮ್" (Ism) ಮತ-ವಾದಗಳಿಗೆ ಮನಸೋತು ಹಾರಾಡುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಅಂಥಾ ಯುವಕರು ಅವರವರ "ಇಸಮ್"(ಮತ)ಗಳನ್ನು ತಲಸ್ಪರ್ಶಿಯಾಗಿ ವಿಚಾರಿಸಿ ಶೋಧಿಸಿದ್ದಾರೆಯೆ ? ಎಂದು ಕೇಳಿದರೆ—"ಹೌದು. ಅವರು ಹಾಗೆ ಅರ್ಥವನ್ನು ಪೂರ್ತಿ ವಿಚಾರಮಾಡಿ ರುಜುವಾತು ಕೊಡಬಲ್ಲವರಾಗಿದ್ದಾರೆ"—ಎಂದು ನಮಗೆ ಭರವಸೆ ಕೊಡಬಲ್ಲವರು ಕಣ್ಣಿಗೆ ಕಾಣಬರುತ್ತಿಲ್ಲ. ಹೀಗೆ ಅಪಕ್ವಮತಿಗಳೂ ಅವಿಚಾರೋತ್ಸಾಹಿಗಳೂ ಸಾರ್ವಜನಿಕರಲ್ಲಿ ತುಂಬಿದರೆ ಆಗುವುದು ಅಪಭ್ರಮ, ಅಂತಃಕಲಹಗಳೇ ಹೊರತು ದೇಶಾಭ್ಯುದಯವಲ್ಲವೆಂಬುದು ಎಲ್ಲರ ಮನಸ್ಸಿಗೂ ಸ್ವತಃ ವೇದ್ಯವಾಗುವ ವಿಚಾರ. ದೇಶಕಾರ್ಯವು ಜವಾಬ್ದಾರಿಯುಳ್ಳದ್ದು. ಹತ್ತು ಮಂದಿಗಾಗುವ ಲಾಭನಷ್ಟಗಳ ಹೊಣೆಯನ್ನು ತಾನು ಹೊತ್ತುಕೊಳ್ಳುವೆನೆಂದು ಮುಂದೆ ಬರುವವನು ಮೊದಲು ತಾನು ಕೃತಪರಿಶ್ರಮನಾಗಿರಬೇಕು. ದೇಶದ ಸೇವೆಯು ಬುದ್ಧಿಯ ಶ್ರಮವನ್ನೂ ಅಪೇಕ್ಷಿಸುತ್ತದೆ. ಸೈನಿಕನೂ, ಶಿಲ್ಪಕಾರ್ಮಿಕನೂ, ಗೃಹ ಭೃತ್ಯನೂ ಸಲ್ಲಿಸುವ ಸೇವೆಯಲ್ಲಿ ಮುಖ್ಯವಾದದ್ದು ದೇಹಶ್ರಮ, ರಾಜಕೀಯಸ್ಥನು ಸಲ್ಲಿಸಬೇಕಾದ ಸೇವೆಯ ಮುಖ್ಯಾಂಶ ವಿಚಾರಶ್ರಮ. ಸಂತತವಾದ ಗ್ರಂಥವ್ಯಾಸಂಗ, ಅಭ್ಯಾಸ, ವಿಮರ್ಶೆ, ಜ್ಞಾನಾರ್ಜನೆ, ಸಮಾಲೋಚನೆ—ಇವು ರಾಜಕೀಯಸ್ಥನಿಗೆ ಬೇಕಾದ ಬಂಡವಾಳ. ಇಂಥಾ ಶಿಕ್ಷಣಕ್ಕೆ ಸ್ವತಃ ವಶವಾಗದವನು ಯೋಗ್ಯನಾದ ಸಾರ್ವಜನಿಕನಾಗಲಾರ. ರಾಜ್ಯಸೇವಕನು ನಿಜವಾಗಿ ನಿತ್ಯ ವಿದ್ಯಾರ್ಥಿಯಾಗಿರತಕ್ಕದ್ದೆಂಬುದು ಗೋಖಲೆಯವರು ಕಲಿಸಿರುವ ಎರಡನೆಯ ನೀತಿ.

## ಸಾಕಲ್ಯ ದೃಷ್ಟಿ

(3) ಸಮಷ್ಟಿ ದೃಷ್ಟಿಯೆಂದರೆ ನಾಡೊಟ್ಟಿನ ನೆನಪು. ದೇಶಭಕ್ತಿಯೆಂಬುದು ದೇಶದ ಎಲ್ಲ ಭಾಗಗಳಿಗೂ ಎಲ್ಲ ಮೂಲೆಮೊಡಕುಗಳಿಗೂ ಅದರಲ್ಲಿ ಇರತಕ್ಕ ಎಲ್ಲ ಮತ ಕುಲಗಳಿಗೂ ವ್ಯಾಪಿಸಿರತಕ್ಕ ಪ್ರೀತಿಭಾವ. ದೇಶ ಸಮಗ್ರಕ್ಕಿಂತ ಕಡಮೆಯಾಗಿ—ಎಂದರೆ ಯಾವುದೋ ಒಂದಿಷ್ಟು ಪ್ರದೇಶ ಮಾತ್ರಕ್ಕಾಗಿ ಅಥವಾ ಯಾವುದೋ ಒಂದು ಗುಂಪಿನ ಮಟ್ಟಿಗಾಗಿ ಅನ್ವಯಿಸುವ ಪ್ರೀತಿ ದೇಶಪ್ರೀತಿಯಾಗಲಾರದು. ದೇಶೀಯರಲ್ಲಿ "ಇವರು ನನ್ನವರು, ಇವರು ನನ್ನವರಲ್ಲ" ಎಂಬ ಭೇದಗಣನೆಯು ಸ್ಮರಣೆಯೇ ಇಲ್ಲದೆ, ದೇಶೀಯರೆಲ್ಲ ಸೇರಿ ಏಕೈಕ ವ್ಯಕ್ತಿ ಎಂಬಂತೆ ನಡೆದುಕೊಳ್ಳುವುದು ನಿಜವಾದ ದೇಶಭಕ್ತ ಲಕ್ಷಣ. ಇದನ್ನೇ ನಾವು ಐಕಮತ್ಯವೆಂದು ಕರೆಯುತ್ತೇವೆ. ಗೋಖಲೆಯವರು ಬಹು ಮುಖ್ಯವಾಗಿ ಹಿಡಿದಿದ್ದ ತತ್ತ್ವ ಅದು. ಹಿಂದುಳಿದವರನ್ನು ಮುಂದಕ್ಕೆ ತರುವ ಪ್ರಯತ್ನಕ್ಕೆ ಅವರು ತೋರಿಸಿದ ಉತ್ಸಾಹವನ್ನು ಮೇಲೆ ಪ್ರಸ್ತಾವಿಸಿದ್ದಾಗಿದೆ. ಹಿಂದೂ ಮುಸಲ್ಮಾನ್ ಒಗ್ಗಟ್ಟಿಗೂ ಅವರು ಅದೇ ತೆರದ ಬೆಲೆಯನ್ನು ಕೊಟ್ಟಿದ್ದರು. ಅವರು ಸಾಮ್ರಾಜ್ಯ ಶಾಸನ ಸಭೆಯಲ್ಲಿದ್ದಾಗ ಒಂದು ವಿಶೇಷ ಸಂಗತಿ ನಡೆಯಿತು. ಒಬ್ಬಾನೊಬ್ಬ ಮುಸಲ್ಮಾನ್ ಸದಸ್ಯರು ಅಲ್ಲಿ ಇಂಗ್ಲಿಷಿನಲ್ಲಿ ಭಾಷಣ ಮಾಡಿದಾಗ ಅದರಲ್ಲಿಯ ವ್ಯಾಕರಣ ದೋಷಗಳನ್ನೂ ಶಬ್ದೋಚ್ಚಾರಣೆಯ ತಪ್ಪುಗಳನ್ನೂ ಕೇಳಿದ ಆಂಗ್ಲೇಯ ಸದಸ್ಯರು ಕೊಂಚ ಕೊಂಚ ನಗುತುಟಿಮಾಡಿದ್ದನ್ನು ಕಂಡು, ಅವರ ಸಹಸದಸ್ಯರ ಪೈಕಿ ಇಂಗ್ಲಿಷ್ ಬಲ್ಲ ಹಿಂದೂ ಮಹಾಶಯರು ಗಟ್ಟಿಯಾಗಿ ನಕ್ಕು, ಆ ಮಹಮ್ಮದೀಯ ಸೋದರನಿಗೆ ಮುಖ ಕೆಡುವಂತೆ ನಡೆದರು. ಗೋಖಲೆಯವರು ಇಂಗ್ಲಿಷಿನಲ್ಲಿ ಸೊಗಸಾಗಿ ಭಾಷಣ ಮಾಡಬಲ್ಲವರು. ಅವರ ಇಂಗ್ಲಿಷ್ ವಾಕ್ಪ್ರವಾಹದ ಸೊಬಗನ್ನು ನೋಡಲಿಕ್ಕಾಗಿ ಅನೇಕ ಮಂದಿ ಆಂಗ್ಲೇಯರು ಸಭೆಗೆ ಬಂದಿರುತ್ತಿದ್ದರು. ಹಾಗಿದ್ದರೂ ಗೋಖಲೆಯವರು ಆ ದಿನ ತಮ್ಮ ಹಿಂದೂ ಸಹೋದರರು ನಡೆದುಕೊಂಡ ರೀತಿಯಿಂದ ಅಸಮಾಧಾನಪಟ್ಟವರಾಗಿ, ಸಭೆಯಿಂದ ಹೊರಕ್ಕೆ ಬಂದ ಬಳಿಕ ಆ ಹಿಂದೂ ಸದಸ್ಯರಿಗೆ ಛೀಮಾರಿ ಹಾಕಿದರು :— "ಇಷ್ಟೇನೇ ನಿಮ್ಮ ರಾಷ್ಟ್ರೀಯತೆ! ಇಂಗ್ಲಿಷೇನು ನಿಮಗೆ ಮನೆಯ ಮಾತೆ? ನಿಮ್ಮ ನಮ್ಮ ಇಂಗ್ಲಿಷಿನಲ್ಲಿ ತಪ್ಪಿಲ್ಲವೆ? ನಮ್ಮ ಮಹಮ್ಮದೀಯ ಸಹೋದರನೊಬ್ಬನನ್ನು ಹೀಗೆ ನೀವು ಅಪಹಾಸ್ಯಕ್ಕೆ ಗುರಿಪಡಿಸಿದರೆ ಅದರ ಪರಿಣಾಮ ಹಿಂದೂ-ಮುಸಲ್ಮಾನ್ ಮೈತ್ರಿಯ ಮೇಲೆ ಹೇಗಾದೀತು ಎಂಬುದನ್ನು ನೀವು ಯೋಚಿಸಬೇಡವೆ?" ಎಂದು ಮುಂತಾಗಿ ಗೋಖಲೆಯವರು ಟೀಕೆ ಮಾಡಿದರು. ನಮ್ಮ ಭಾರತ ದೇಶವು ಜಾತಿ ಮತ ಕೋಮುಪಣಗಳ ಕಾರಣದಿಂದ ಒಂದು ದೇಶದಂತಿರದೆ ನೂರಾರು ದೇಶಗಳಂತೆ ಆಗಿದೆ. ಯಾವ ದೇಶ ವಿಷಯವೂ ಈ ಭೇದ ಕಲಹಗಳಿಂದ ತಪ್ಪಿಸಿಕೊಂಡದ್ದಲ್ಲ. ಯಾವ ಕಾರ್ಯವೂ ತಕರಾರಿಲ್ಲದೆ ನಡೆಯುವಂತಿಲ್ಲ. ಹೀಗಿರಲಾಗಿ ಈಗ ನಮಗೆ ಮೊದಲು ಬೇಕಾಗಿರುವುದು ದೇಶದೊಟ್ಟಿನ ದೃಷ್ಟಿ. ಬ್ರಾಹ್ಮಣರಿಗೆಂದು ಹೋರಾಡುವವರೂ, ಬ್ರಾಹ್ಮಣೇ

ತರರಿಗೆಂದು ಕಚ್ಚಾಡುವವರೂ, ಕ್ರಿಸ್ತರಿಗೋಸ್ಕರವೆಂದೂ ಮುಸಲ್ಮಾನರಿಗೋಸ್ಕರವೆಂದೂ ಕೂಗಾಡುವವರೂ, ಕರ್ಣಾಟಕದ ಹೆಸರಿನಲ್ಲಿಯೂ ಆಂಧ್ರದ ಹೆಸರಿನಲ್ಲಿಯೂ ಮಹಾರಾಷ್ಟ್ರದ ಹೆಸರಿನಲ್ಲಿಯೂ ಕುಣಿದಾಡುವವರೂ, ಹಾಗೆಯೇ ನಾವು ಕಾರ್ಮಿಕರು, ನಾವು ಕೃಷಿಕರು, ನಾವು ವರ್ತಕರು, ನಾವು ಜಮೀನ್ದಾರರು ಎಂದು ಬೇರೆ ಬೇರೆ ವರ್ಗಗಳ ಹೆಸರಿನಲ್ಲಿ ಬೊಬ್ಬೆ ಹಾಕುವವರೂ ಎಲ್ಲೆಲ್ಲೂ ಇದ್ದಾರೆ. ಆದರೆ, ಭಾರತ ರಾಷ್ಟ್ರಕ್ಕಾಗಿ—ಸಮಸ್ತ ಭಾರತ ಜನಪದಕ್ಕಾಗಿ—ನಿಂತಿರುವವರು ಯಾರು ? ಅವರೆಲ್ಲಿ ? ಎಲ್ಲರೂ ಎಲ್ಲೆಲ್ಲಿಯವರೂ ಅಂಥವರಾಗಬೇಕೆಂಬುದು ಗೋಖಲೆಯವರ ಉಪದೇಶ. ಈ ಸಮಷ್ಟಿಭಾವವು ಸಮಸ್ತ ಭರತಭೂಮಿಗೂ ಮಾತ್ರವಲ್ಲದೆ ಸಮಸ್ತ ವಿಶ್ವಕ್ಕೂ ವ್ಯಾಪಿಸಿ, ನಾನಾ ಜನಾಂಗ ನಾನಾ ರಾಷ್ಟ್ರಗಳ ಅನ್ಯೋನ್ಯ ಮೈತ್ರಿ ವಿಶ್ವಾಸಗಳಲ್ಲಿ ರೂಪುಗೊಳ್ಳಬೇಕಾದದ್ದು.

## ವೈಜ್ಞಾನಿಕ ದೃಷ್ಟಿ

(4) ವೈಜ್ಞಾನಿಕ ದೃಷ್ಟಿ—ಮನುಷ್ಯ ಸ್ವಭಾವದಲ್ಲಿ ಮುಖ್ಯವಾಗಿ ಎರಡು ತೆರದ ಶಕ್ತಿಗಳು ಮಿಶ್ರಿತವಾಗಿರುತ್ತವೆ. ಒಂದು, ಹೃದಯೋದ್ವೇಗದ್ದು ; ಇನ್ನೊಂದು ಕಾರ್ಯಕಾರಣ ವಿಚಾರದ್ದು. ಈ ಎರಡರ ಪೈಕಿ ಸಾಮಾನ್ಯ ಜನರಲ್ಲಿ ಸಾಮಾನ್ಯವಾಗಿ ಪ್ರಬಲಿಸಿರುವ ಗುಣ ಹೃದಯಾವೇಶದ್ದು. ಆಶೆ, ಕೋಪ, ಅಭಿಮಾನ, ಅತಿ ವಿಶ್ವಾಸ—ಇವುಗಳದೇ ಲೋಕದ ಜೀವನದಲ್ಲಿ ಬಹಳ ಹೆಚ್ಚಾಗಿ ಕಾಣುತ್ತಿರುವ ಭಾಗ. ಈ ಮೂಲಶಕ್ತಿಗಳ ಉದ್ರೇಕವು ಉರವಣಿಸಿ, ಯುಕ್ತಾಯುಕ್ತ ವಿವೇಚನೆಗೆ ಕಾದಿರದೆ ಹುಚ್ಚುಕುರುಡನಂತೆ ನುಗ್ಗುವುದರಿಂದಲೇ ಲೋಕದಲ್ಲಿ ಇಷ್ಟೊಂದು ಅನರ್ಥಪರಂಪರೆ. ಇದು ತಪ್ಪಬೇಕಾದರೆ ನಮ್ಮ ಅಂತರಂಗದಲ್ಲಿರುವ ಇನ್ನೊಂದು ಶಕ್ತಿಯ ಪ್ರಭಾವವನ್ನು ನಾವು ಬೆಳೆಸಬೇಕು. ಅದು ಬುದ್ಧಿಶಕ್ತಿ. ಯಾವ ಒಂದು ಸಂದರ್ಭದಲ್ಲಿಯೂ ಅದರಲ್ಲಿ ಪ್ರಸಕ್ತವಾಗಿರುವ ವಸ್ತುಗಳು ಎಂಥವು, ಬಲಾಬಲಗಳು ಎಷ್ಟರವು, ಅದರಲ್ಲಿಯ ನ್ಯಾಯ ಔಚಿತ್ಯಗಳು ಯಾವ ತೆರನಾಗಿವೆ—ಎಂಬಿವೇ ಮೊದಲಾದ ಪ್ರಶ್ನೆ ಉಪಪ್ರಶ್ನೆಗಳನ್ನು ಹಾಕಿಕೊಂಡು ಆಲೋಚಿಸಿ, ಕಾರಣಪೂರ್ವಕವಾಗಿ ನಿಶ್ಚಯಕ್ಕೆ ಬರುವುದು ಬುದ್ಧಿಯ ಗುಣ. ಇದೇ ವಿವೇಕ. ಹೃದಯ ವೇಗವನ್ನು ಕುದುರೆಗೆ ಹೋಲಿಸಬಹುದಾದರೆ, ಬುದ್ಧಿಯ ವಿವೇಕವನ್ನು ಸವಾರನೆನ್ನಬಹುದು. ಈ ಸವಾರನು ಜಾಗರೂಕನೂ ಸಮರ್ಥನೂ ಆಗಿದ್ದಲ್ಲಿ ಆ ಕುದುರೆಯಿಂದ ಅಪಾಯವಾಗದೆ ಅನುಕೂಲವೇ ಆದೀತು. ಆದರೆ ನಮ್ಮಲ್ಲಿ ಸುಲಭವಾಗಿ ಮೇಲೆದ್ದು ನಿಲ್ಲುವ ಶಕ್ತಿ ಹೃದಯೋದ್ವೇಗ. ಹಂಬಲಿಸುವುದು, ಅಂಗಲಾಚುವುದು, ಆಗ್ರಹಿಸುವುದು, ಆಕ್ರೋಶಿಸುವುದು—ಇಂಥ ಭಾವವಿಕಾರಗಳಿಗೆ ಪ್ರಕೃತಿಯೇ ಪೋಷಕವಾಗಿರುತ್ತದೆ. ಇವನ್ನು ಹದ್ದಿನಲ್ಲಿರಿಸುವ ವಿವೇಕವಾದರೋ ನಮ್ಮಲ್ಲಿ ಅಷ್ಟು ಬೇಗ ಮೇಲಕ್ಕೆ ಬರತಕ್ಕದ್ದಲ್ಲ. ಪ್ರಕೃತಿ ಅದಕ್ಕೆ ಅಷ್ಟಾಗಿ ಸಹಾಯ ಮಾಡುವುದಿಲ್ಲ. ವಿವೇಕವೇನಿದ್ದರೂ ನಮ್ಮ ವಿಶೇಷ ಪ್ರಯತ್ನದಿಂದ ಫಲಿಸತಕ್ಕದ್ದು. ಮಗುವಿಗೆ ರೋಗ ಬಂದಾಗ ಅದರ ತಾಯಿ ಅಳುತ್ತ ನಿಲ್ಲುವುದರಿಂದಲೂ ಅದರ ತಂದೆ ನಿಟ್ಟುಸಿರು ಕರೆಯುವುದರಿಂದಲೂ

ಗುಣವಾದೀತೆ ? ವೈದ್ಯನು ಬಂದು ಪರೀಕ್ಷಿಸಿ ಶಾಸ್ತ್ರಾಧಾರದಿಂದ ಚಿಕಿತ್ಸೆ ಮಾಡಿದಾಗಲೇ ಆ ರೋಗದ ನಿವಾರಣೆ. ನಮ್ಮ ರಾಜಕೀಯದ ಮತ್ತು ಸಾಮಾಜಿಕದ ರೋಗಗಳ ಪಾಡೂ ಅಷ್ಟೆ. "ಭಾರತಾಂಬೆ ! ಕನ್ನಡಮ್ಮ !" ಎಂಬ ಕಕ್ಕುಲಿತೆಯ ಒಕ್ಕಣೆಗಳಿಂದಲೂ ಜಯ ಜಯಕಾರಗಳಿಂದಲೂ ಜಿಂದಾಬಾದ್ ಘೋಷಣೆಗಳಿಂದಲೂ ರಾಷ್ಟ್ರರೋಗಗಳು ಶಮನವಾಗಲಾರವು. ಅವಿಚಾರದ ಚಿಕಿತ್ಸೆಗಳ ಫಲವಾಗಿ ವ್ಯಾಧಿಯು ಒಂದು ಅಂಗದಿಂದ ಇನ್ನೊಂದು ಅಂಗಕ್ಕೆ ಹೋಗಬಹುದು ; ಒಂದಿದ್ದುದು ಎರಡಾಗಬಹುದು. ದೇಶದ ಕಷ್ಟಗಳನ್ನು ಪರಿಹರಿಸಬೇಕೆನ್ನುವವನು ವೈದ್ಯನಂತೆ ತತ್ತ್ವಶೋಧಕನಾಗಿ, ವೈಜ್ಞಾನಿಕನಂತೆ ಪ್ರಯೋಗ ಪರೀಕ್ಷೆಗಳನ್ನು ನಡಸುವವನಾಗಿರಬೇಕು. ವೈದ್ಯನು ರೋಗಿಯ ನಾಡಿಯನ್ನೂ ಶ್ವಾಸಕೋಶವನ್ನೂ ರಕ್ತ ಶ್ಲೇಷ್ಮಗಳನ್ನೂ ಪರೀಕ್ಷಿಸಿ ನೋಡುವ ಕಾಲದಲ್ಲಿ, ಆ ವೈದ್ಯನ ಮನಸ್ಸಿನಲ್ಲಿ ಯಾವ ಪಕ್ಷಪಾತವೂ ಇರಲಾರದು, ಯಾವ ಪೂರ್ವವಿಶ್ವಾಸವೂ ನಿಲ್ಲಲಾರದು. ಟೈಫಾಯಿಡ್ ಎಂಬುದು ಅವನಿಗೇನೂ ಹೆಚ್ಚು ಇಷ್ಟವಲ್ಲ ; ಅಜೀರ್ಣ ಎಂದು ಹೇಳುವುದು ಕಡಮೆ ಇಷ್ಟವಲ್ಲ. ಅವನಿಗೆ ಸ್ವಂತ ಇಷ್ಟಾನಿಷ್ಟಗಳಾವುವೂ ಇಲ್ಲ. ಯಥಾರ್ಥ ದರ್ಶನವೇ ಅವನ ಇಷ್ಟ. ಬಂಧುಮಿತ್ರರಿಗೆ ಸಿಹಿಮದ್ದು ; ಪರಕೀಯರಿಗೆ ಕಹಿಮದ್ದು — ಎಂಬುದೇನೂ ಇಲ್ಲ. ತನ್ನ ಕಣ್ಣಿಗೆ, ತನ್ನ ಕಿವಿಗೆ, ತನ್ನ ಸೂಕ್ಷ್ಮ ವಿಚಾರಶಕ್ತಿಗೆ ಯಾವುದು ಯಥಾರ್ಥವೆಂದು ತೋರುತ್ತದೆಯೋ ಅದನ್ನು ಮಾತ್ರವೇ ವೈದ್ಯನು ಗ್ರಹಿಸಿ ಔಷಧೋಪಚಾರಗಳನ್ನು ವಿಧಿಸುತ್ತಾನೆ. ರಾಜಕೀಯ ವಿಚಾರಿಯೂ ಹಾಗೆಯೇ ತನ್ನ ಪ್ರಶ್ನೆಗೆ ಸಂಬಂಧಪಟ್ಟ ಸಂಗತಿಗಳನ್ನು ಪ್ರಮಾಣಭೂತವಾದ ರೀತಿಯಲ್ಲಿ ಶೇಖರಿಸಿ, ಯಥಾಕ್ರಮವಾಗಿ ವಿಶ್ಲೇಷಿಸಿ, ಕಾರ್ಯಕಾರಣ ಭಾವವರಿತು, ನಾನಾ ಅಂಶಗಳ ಪರಸ್ಪರ ಸಂಬಂಧಗಳನ್ನು ಗೊತ್ತುಮಾಡಿಕೊಳ್ಳುತ್ತಾನೆ. ಈ ತೆರದ ಅಂಕಿ ಅಂಶಗಳ ಶೇಖರಣೆ, ಅವುಗಳ ಅರ್ಥಶೋಧನೆ, ಅವುಗಳಲ್ಲಿ ಅಡಗಿರುವ ತತ್ತ್ವದ ಸಮಾಲೋಚನೆ— ಇವು ರಾಜಕೀಯಸ್ಥನ ಧರ್ಮಕ್ಕೆ ಆಗಬೇಕಾದ ಸಿದ್ಧತೆಗಳು. ಯಾವ ಒಂದು ವಿಚಾರದಲ್ಲಿಯೂ ಅವನು ಜಾತ್ಯಭಿಮಾನ ಕುಲಾಭಿಮಾನಗಳಿಂದಾಗಲಿ ಅಥವಾ ಪ್ರಬಲರೋ ಅಧಿಕಾರಸ್ಥರೋ ಹೇಳಿದ ಮಾತೆಂಬ ಕಾರಣದಿಂದಾಗಲಿ, ಅಥವಾ ಸ್ವಪಕ್ಷಕ್ಕೆ ಅನುಕೂಲವೆಂಬ ಕಾರಣದಿಂದಾಗಲಿ, ಅಥವಾ ಬಹುಕಾಲದಿಂದ ತನ್ನ ಮನಸ್ಸಿನಲ್ಲಿ ನಿಂತು ಬಂದಿರುವ ಅಭಿಪ್ರಾಯವೆಂಬ ಕಾರಣದಿಂದಾಗಲಿ ಸಂಪ್ರದಾಯ ಮರ್ಯಾದೆಗಾಗಲಿ, ಲೋಕರೂಢಿಗಾಗಲಿ ಅವನು ಗುಲಾಮನಾಗತಕ್ಕವನಲ್ಲ. ಯಾವ ಅಭಿಪ್ರಾಯವನ್ನೇ ಆಗಲಿ, ಯಾವ ಭಾವನೆಯನ್ನೇ ಆಗಲಿ, ಯಾವ ಮತವನ್ನೇ ಆಗಲಿ ಅವನು ತನ್ನ ಸ್ವಂತ ವಿಮರ್ಶೆಗೆ ಒಳಪಡಿಸುವುದಕ್ಕೆ ಹಿಂಜರಿಯಲಾರ. ಈ ಸ್ವತಂತ್ರ ವಿಮರ್ಶನೆಯೇ— ಈ ಪುನರ್ವಿಮರ್ಶನ ಸ್ವಾತಂತ್ರ್ಯವೇ— ವೈಜ್ಞಾನಿಕನ ಮುಖ್ಯ ಲಕ್ಷಣ. ಈ ಬಗೆಯ ವಿಜ್ಞಾನ ದೃಷ್ಟಿಯಿಂದ ರಾಜ್ಯಶಾಸ್ತ್ರ ಅರ್ಥಶಾಸ್ತ್ರ ವಿಚಾರಗಳನ್ನು ಶೋಧನೆ ಮಾಡಲಿಕ್ಕೆ ಹೊರಟವರಲ್ಲಿ ಅತಿ ಮುಖ್ಯರು ಗೋಖಲೆಯವರು. ಆ ಕಾಲದ ಸಾರ್ವಜನಿಕರಲ್ಲಿ ಅಂಥ ವಿಚಾರನಿಷ್ಠೆ ದೊಡ್ಡ ಲಕ್ಷಣವಾಗಿತ್ತು. ಗೋಖಲೆಯವರ ಗುರುಗಳಾದ ರಾನಡೆಯವರೂ, ಗುರುಪ್ರಾಯರಾದ ದಾದಾಭಾಯಿ

ನವರೋಜಿಯವರೂ, ಜೋಶಿಯವರೂ, ಗೋಖಲೆಯವರ ಮಿತ್ರರಾದ ಡಿ. ಇ. ವಾಚ್ಛಾ, ಗಣಪತಿ ಸುಬ್ರಹ್ಮಣ್ಯ ಅಯ್ಯರ್ ಮೊದಲಾದವರೂ ಆ ವೈಜ್ಞಾನಿಕ ಮಾರ್ಗವನ್ನೇ ಅವಲಂಬಿಸಿದ್ದರು. ಗೋಖಲೆಯವರು ಆ ಮಾರ್ಗವನ್ನು ಹಿಡಿದು ಕೆಲಸ ಮಾಡಿದ್ದರಿಂದಲೇ ಅವರ ಪ್ರತಿಪಕ್ಷದವರೂ ಸಹ ಅವರ ನ್ಯಾಯವನ್ನು ಒಪ್ಪಿ ಕೊಳ್ಳುವಂತೆ ಆದದ್ದು. ಆ ಪ್ರಮಾಣಪೂರ್ವಕವಾದ ನ್ಯಾಯಾನ್ವೇಷಣೆಯ ದಾರಿ—ಆ ವೈಜ್ಞಾನಿಕ ಮನೋಭಾವದ ದಾರಿ—ಆ ಸ್ವತಂತ್ರ ವಿಮರ್ಶೆಯ ದಾರಿ—ನಮಗೆ ಈಗ—ನಮ್ಮ ವೀರಾವೇಶಗಳ, ಆತುರ ಘೋಷಣೆಗಳ ಗದ್ದಲದ ನಡುವೆ—ಬಹು ಅವಶ್ಯವಾಗಿ ಬೇಕಾಗಿರುವ ಆತ್ಮಪರಿಷ್ಕಾರ.

## ಉಪಸಂಹಾರ

ವಿದೇಶೀಯರನ್ನು ತೊಲಗಿಸುವ ಪ್ರಯತ್ನಕ್ಕೆ ಗೋಖಲೆಯವರಿಂದ ಆದ ಪ್ರತ್ಯಕ್ಷ ಸಹಾಯ ಬಹು ದೊಡ್ಡದಲ್ಲದಿರಬಹುದು. ಆದರೆ ಸ್ವದೇಶೀಯರನ್ನು ಕಟ್ಟಿ ಸಿದ್ಧ ಪಡಿಸುವುದರಲ್ಲಿ ಅವರಿಂದಾಗಿರುವ ಸೇವೆ ಮತ್ತಾರ ಸೇವೆಗಿಂತಲೂ ಕಡಮೆಯಾದದ್ದಲ್ಲ. ಮತ್ತು 1947ನೆಯ ಇಸವಿಯ ಹಿಂದೆ ಅವರ ಮಾರ್ಗದರ್ಶಿತ್ವ ಎಷ್ಟು ಉಪ ಯುಕ್ತವಾಗಿತ್ತೋ ಅದರ ನೂರ್ಮಡಿಯಷ್ಟರ ಬೆಲೆ ಈಗ—ದೇಶಸ್ವಾತಂತ್ರ್ಯ ಬಂದ ಮೇಲೆ—ಅವರ ಆದರ್ಶತ್ವಕ್ಕೆ ಸಲ್ಲತಕ್ಕದ್ದಾಗಿದೆ. ಈಗ ಹೋರಾಟದ ಕಾಲ ಮುಗಿದಿದೆ. ಕುದುರುಪಾಟಿನ ಕಾಲ ಮೊದಲಾಗಿದೆ. ಈಗ ನಮಗೆ ಬೇಕಾದದ್ದು ಗೋಖಲೆ ಯವರು ತೋರಿಸಿದ ರಾಷ್ಟ್ರ ಪುನರುಜ್ಜೀವನದ ನೀತಿ. ದೇಶ ಸ್ವಾತಂತ್ರ್ಯವೆಂದರೆ,—ಪ್ರಜಾಪ್ರಭುತ್ವವೆಂದರೆ—ಸ್ವರಾಜ್ಯವೆಂದರೆ—ಪ್ರಜೆಗಳ ಸ್ವಂತ ಜವಾಬ್ದಾರಿ ಎಂಬು ದಷ್ಟೆ ! ಪ್ರತಿಯೊಬ್ಬ ಭಾರತೀಯನೂ ತನ್ನ ರಾಷ್ಟ್ರಿಕ ಜೀವನದಲ್ಲಿ ಗೋಖಲೆಯವರ ಚತುಸ್ಸೂತ್ರವನ್ನು—ಸಾರ್ವಜನಿಕ ನಿಷ್ಠೆ, ಆತ್ಮಶಿಕ್ಷಣ, ಐಕಮತ್ಯ ಪ್ರತಿಜ್ಞೆ ಮತ್ತು ವೈಜ್ಞಾನಿಕ ದೃಷ್ಟಿ, ಈ ನಾಲ್ಕು ನೀತಿಗಳನ್ನು ಅವಲಂಬಿಸಿ ಬಾಳಿದಂತೆಲ್ಲ ನಮ್ಮ ದೇಶದ ಜೀವನವು ದೇಶೀಯರಿಗೂ—ವಿದೇಶೀಯರಿಗೂ ಸಹ—ಮಂಗಳದಾಯಕ ವಾಗುತ್ತದೆ.

ಗೋಖಲೆಯವರ ಉಪದೇಶವನ್ನೆಲ್ಲ ಒಂದೇ ವಾಕ್ಯದಲ್ಲಿ ಅಡಗಿಸಿ ಹೇಳಬೇಕೆಂದರೆ, ಅಂಥಾ ವಾಕ್ಯವು ಅವರು ತಮ್ಮ " ಭಾರತ ಸೇವಕ ಸಂಘ "ಕ್ಕಾಗಿ ಬರೆದ ನಿಬಂಧನೆ ಯಲ್ಲಿಯೇ ಸಿಕ್ಕುತ್ತದೆ. ಅದು ಹೀಗೆ :—

" Public life must be spiritualised. "

(ಸಾರ್ವಜನಿಕ ಜೀವನವನ್ನು ಧರ್ಮಕಾರ್ಯವನ್ನಾಗಿ ಮಾರ್ಪಡಿಸಬೇಕು.)

ರಾಷ್ಟ್ರಸೇವೆಯೆಂಬುದು ನಾವು ದೇಶದ ವಿಷಯದಲ್ಲಿ ತೋರಿಸುವ ಅನುಗ್ರಹ ವಲ್ಲ ; ಇತರರಿಗೆ ಯಾರಿಗೋ ಮಾಡುವ ಉಪಕಾರವಲ್ಲ ; ಅದು ನಾವು ನಮಗೋಸ್ಕರ ವಾಗಿಯೇ ಮಾಡಿಕೊಳ್ಳುವ ಹಿತಾರ್ಥ ಸಂಪಾದನೆ. ಅದು ಒಂದು ಕಡೆ ಜೀವಿತ

ಸೌಕರ್ಯ ; ಇನ್ನೊಂದು ಕಡೆ ಆತ್ಮಸಂಸ್ಕಾರ. ನಮ್ಮ ಸೇವೆಯ ಫಲವಾಗಿ ದೇಶಕ್ಕೆ ಲಭಿಸುವ ಪ್ರಯೋಜನದಲ್ಲಿ ನಾವೂ ಭಾಗಿಗಳಾಗುತ್ತೇವೆ. ಹಾಗೆಯೇ ಆ ಸೇವಾ ಕಾರಣದಿಂದ ನಮ್ಮ ಅಂತಶ್ಶಕ್ತಿಗಳೇ ಬೆಳೆದು, ನಮ್ಮ ಆತ್ಮವೇ ವಿಸ್ತಾರ ವಿಕಾಸ ವನ್ನು ಪಡೆದುಕೊಳ್ಳುತ್ತದೆ.

ಈ ಎರಡನೆಯ ಪ್ರಯೋಜನವನ್ನು ದೃಷ್ಟಿಯಲ್ಲಿರಿಸಿಕೊಂಡೇ ಶ್ರೀ ವಿದ್ಯಾರಣ್ಯ ಸ್ವಾಮಿಗಳವರು :—

"ಜ್ಞಾನಿನಾ ಚರಿತುಂ ಶಕ್ಯಂ
ಸಮ್ಯಗ್ರಾಜ್ಯಾದಿ ಲೌಕಿಕಂ."

(ಬ್ರಹ್ಮಜ್ಞಾನಿಯಾದವನು ರಾಜಕೀಯ ಮೊದಲಾದ ಎಲ್ಲ ಲೌಕಿಕ ವ್ಯವಹಾರ ಗಳನ್ನೂ ಚೆನ್ನಾಗಿ ನಡಸಲು ಶಕ್ತನಾಗುತ್ತಾನೆ.)
—ಎಂದು ಉಪದೇಶಿಸಿದ್ದಾರೆ.

ಅದೇ ಗಾಂಧಿಯವರು ಅನುಷ್ಠಾನಕ್ಕಿಟ್ಟುಕೊಂಡ ತತ್ತ್ವ. ಅದೇ ಗೋಖಲೆ ಯವರು ನಿದರ್ಶನಮಾಡಿಕೊಟ್ಟ ತತ್ತ್ವ. ಈ ಮಹಾ ಕಾರಣದಿಂದ ಗೋಖಲೆ ಯವರು ನಮಗೆ ಸಂತತ ಸ್ಮರಣೀಯರಾಗಿದ್ದಾರೆ.

# ಗೋಖಲೆ ಸ್ಮರಣೆ

## (91ನೆಯ ಜನ್ಮದಿನದ ನೆನಪು)

ಗೋಖಲೆಯವರು ಬದುಕಿದ್ದಿದ್ದರೆ ಈ ಹೊತ್ತು ಅವರ 91ನೆಯ ಹುಟ್ಟುಹಬ್ಬ. ಅವರು ಕಣ್ಮರೆಯಾಗಿ 41 ವರ್ಷವಾಗಿದೆ. ಈ ಅಂತರದಲ್ಲಿ—ಮುಖ್ಯವಾಗಿ ಈಚೀಚಿನ ವರ್ಷಗಳಲ್ಲಿ,—ದೇಶದ ಪರಿಸ್ಥಿತಿ ಈಗ ಬೇರೊಂದು ಯುಗವೆನಿಸುವಷ್ಟರ ಮಟ್ಟಿಗೆ ಬದಲಾಯಿಸಿದೆ. ಹಿಂದಿನ ಚರಿತ್ರೆಯ ಗುರುತುಗಳು ಜನರ ನೆನಪಿನಿಂದ ಅಳಿಸಿಹೋಗಿವೆ. ಆದರೆ ಗೋಖಲೆಯವರ ಹೆಸರು ಮಾಸದೆ, ಇನ್ನೂ ಜೀವಂತ ವಾಗಿ ನಿಂತಿದೆ. ಅದು ಹಾಗಿರಲು ತಕ್ಕದ್ದು. ಅದು ಹಾಗಿರುವುದು ನಮ್ಮ ಪುಣ್ಯ. ಅದು ಹಾಗಿರುವುದು ನಮ್ಮ ಭವಿಷ್ಯದ ಆಶೆಗೆ ಪ್ರೋತ್ಸಾಹ.

ರಾಜಕೀಯದಲ್ಲಿ ಹೆಸರು ಪಡೆದವನ ಕಾರ್ಯಚರಿತ್ರೆಯನ್ನು ಎರಡು ದೃಷ್ಟಿ ಗಳಿಂದ ನೋಡಬಹುದು. ಒಂದು ತಾತ್ಕಾಲಿಕ ಫಲದ್ದು, ಇನ್ನೊಂದು ಚಿರಕಾಲಿಕ ಪ್ರಭಾವದ್ದು. ಈ ಎರಡು ದೃಷ್ಟಿಗಳಿಂದಲೂ ಗೋಖಲೆಯವರ ಹಿರಿಮೆ ಅತಿಶಯ ವಾದದ್ದು.

ತಮ್ಮ ದಿವಸದ ವಿದ್ಯಮಾನಗಳನ್ನು ಉತ್ತಮಗೊಳಿಸಲು ಅವರು ನಾನಾ ಕ್ಷೇತ್ರ ಗಳಲ್ಲಿ ದುಡಿದರು. ಆ ಕಥೆ ದೊಡ್ಡದು. ವಿದ್ಯಾಪ್ರಚಾರಕರಾಗಿ, ಪತ್ರಿಕಾಲೇಖಕ ರಾಗಿ, ಶಾಸನಸಂಸ್ಥೆಗಳ ಸಭಿಕರಾಗಿ, ಪೌರಸಂಸ್ಥಾಚಾಲಕರಾಗಿ, ಕಾಂಗ್ರೆಸ್ ಪ್ರಮುಖ ರಾಗಿ, ಸಮಾಜ ಸಂಸ್ಕಾರಕರಾಗಿ, ಆರ್ಥಿಕ ವ್ಯವಹಾರ ವಿಮರ್ಶಕರಾಗಿ, ಸರಕಾರಕ್ಕೆ ಶೋಧಕರಾಗಿ, ಜನಕ್ಕೆ ಬೋಧಕರಾಗಿ ಅವರು ಮಾಡಿದ ಸೇವೆ ಎಂಥಾದ್ದೆಂಬುದನ್ನು ಅವರ ಭಾಷಣಗಳೂ, ಲೇಖನಗಳೂ, ಜೀವನಚರಿತ್ರೆಯೂ ತಿಳಿಸುತ್ತವೆ. ಆ ಮಹಾ ಸೇವೆ ಸಾರ್ಥಕಪಟ್ಟಿತು. ಅದರಿಂದ ಜನಕ್ಕೆ ಹಿತಲಾಭವಾಯಿತು, ನಮ್ಮ ಸ್ವರಾಜ್ಯ ವಾದದ ತಳಹದಿ ಗಟ್ಟಿಯಾಯಿತು.

ತನ್ನ ಕಾಲದ ಸ್ಥಿತಿಗಳನ್ನು ನೋಡಿ ಸರಕಾರದ ಕ್ರಮಗಳನ್ನು ತಿದ್ದಿಸುವುದೂ ಪ್ರಗತಿಕಾರ್ಯಗಳಿಗೆ ಪ್ರೇರಣೆ ಕೊಡುವುದೂ ರಾಜಕೀಯಸ್ಥನ ಪ್ರಥಮ ಕರ್ತವ್ಯ. ಅದರಿಂದ ದೇಶಕ್ಕೆ ಸದ್ಯಃಪ್ರಯೋಜನವಾಗುವುದರ ಜೊತೆಗೆ, ಅವನಿಗೆ ಜನಜೀವನದ

ಮರ್ಮಸ್ಥಾನಗಳ ಅರಿವು ಉಂಟಾಗುತ್ತದೆ. ರಾಜಕೀಯದಂಥ ತೊಡಕಿನ ಕಾರ್ಯಕ್ಷೇತ್ರದಲ್ಲಿ ನಮಗೆ ಯಥಾವಸ್ತುವೂ ವಿಶದವೂ ಆದ ಅಂತರ್ಜ್ಞಾನ ದೊರೆಯಬೇಕಾದರೆ ಅದು ಪ್ರಯೋಗ ವಿಮರ್ಶನೆಯಿಂದ. ತಾತ್ಕಾಲಿಕ ಕಾರ್ಯಾನುಭವವೇ ಚಿರಕಾಲಿಕ ತತ್ತ್ವದರ್ಶನಕ್ಕೆ ದಾರಿ. ಗೋಖಲೆಯವರ ರಾಜಕೀಯ ಪ್ರಜ್ಞೆ ಬೆಳೆದದ್ದು ಆ ರೀತಿ.

ಗಾಂಧಿಯವರು ಗೋಖಲೆಯವರನ್ನು ರಾಜಕೀಯದಲ್ಲಿ ತಮ್ಮ ಇಷ್ಟಗುರುವೆಂದು ಹೇಳುತ್ತಿದ್ದದ್ದು ಎಲ್ಲರಿಗೂ ತಿಳಿದಿದೆ. ಗಾಂಧಿಯವರು ಮೊದಲ ಸಲ ಬೆಂಗಳೂರಿಗೆ ಬಂದಿದ್ದಾಗ ಇಂದಿಗೆ ಸರಿಯಾಗಿ 41 ವರ್ಷಗಳ ಹಿಂದೆ—8ನೆಯ ಮೇ 1915—ಆ ಮಾತನ್ನು ಸ್ಪಷ್ಟವಾಗಿ ಹೇಳಿದರು. ಆಮೇಲೆ ಅದನ್ನು ಬರೆದೂ ಸ್ಥಿರಪಡಿಸಿದರು. ಅದೇನು ಉಪಚಾರದ ಮಾತೆ? ಅದಕ್ಕಿಂತ ಹೆಚ್ಚಿನದೆ? ಕೊಂಚ ವಿಚಾರ ಮಾಡೋಣ.

ಗಾಂಧಿಯವರು ತಮ್ಮ ಜೀವಿತದಲ್ಲಿ ಸತ್ಯಕ್ಕೂ ಅಹಿಂಸೆಗೂ ಯಾವ ಜಾಗ ಕೊಟ್ಟಿದ್ದಾರೆಂಬುದನ್ನು ಎಲ್ಲರೂ ಬಲ್ಲರು. ಗೋಖಲೆಯವರು ಆ ಎರಡು ತತ್ತ್ವಗಳಿಗೂ ಅದೇ ಉನ್ನತ ಪದವಿಯನ್ನು ಕೊಟ್ಟಿದ್ದರು. ಅವರು ಬ್ರಿಟಿಷ್ ಆಡಳಿತದ ಮೇಲೆ ಹೊರಿಸಿದ ಎಲ್ಲ ಆಕ್ಷೇಪಣೆಗಳನ್ನೂ ಹೂಡಿದ್ದದ್ದು ಸತ್ಯದ ಆಧಾರದ ಮೇಲೆ; ಮತ್ತು ಬ್ರಿಟಿಷರನ್ನು ತೊಲಗಿಸಲು ದೊಂಬಿ ದಂಗೆಗಳ ದಾರಿ ತಕ್ಕದ್ದಲ್ಲವೆಂದು ಅವರು ವಾದಿಸಿದ್ದೂ ಅಹಿಂಸೆ ಎಲ್ಲಿಯಾದರೂ ತಪ್ಪೀತೇನೋ ಎಂಬ ಶಂಕೆಯಿಂದ.

ಸತ್ಯದ ಲಕ್ಷಣಗಳನ್ನು ಮುಖ್ಯವಾಗಿ ಮೂರೆಂದು ಹೇಳಬಹುದು: (1) ವಸ್ತು ಸ್ವರೂಪ ಶೋಧನೆ, (2) ಪರಪಕ್ಷ ಸಮಾಲೋಚನೆ, (3) ಸಮನ್ವಯ ನ್ಯಾಯ. ನಮ್ಮ ಮುಂದಿರುವ ಪ್ರಶ್ನೆಯ ಎಲ್ಲ ಸಂಗತಿಗಳನ್ನು ಶೇಖರಿಸಿ ಪರೀಕ್ಷಿಸಿ ಗಟ್ಟಿಯಾದ ಅಂಶಗಳನ್ನು ಕಂಡುಕೊಳ್ಳಬೇಕು. ಅದರಿಂದ ನಮ್ಮ ಮನಸ್ಸಿನಲ್ಲಿ ಉತ್ಪನ್ನವಾದ ಅಭಿಪ್ರಾಯಗಳನ್ನು ಇತರ ಮಂದಿಯ ಅಭಿಪ್ರಾಯಗಳೊಡನೆ ಹೋಲಿಸಿ ನೋಡಿ, ಹಾಗೆ ಹೊಸದಾಗಿ ದೊರೆತ ತಿಳಿವಳಿಕೆಯಿಂದ ನಮ್ಮ ಭಾವನೆಗಳನ್ನು ಪರಿಷ್ಕಾರ ಪಡಿಸಬೇಕು. ಅನಂತರ ಕಾರ್ಯರಂಗದಲ್ಲಿ ನಮಗೆ ನ್ಯಾಯವೆಂದು ತೋರಿದ್ದಕ್ಕೂ ಇತರರು ಹೇಳುವ ನ್ಯಾಯಕ್ಕೂ ಇರುವ ವ್ಯತ್ಯಾಸಗಳನ್ನು ಪರಸ್ಪರ ಇಷ್ಟ ಸಮ್ಮತಿಯ ನಯದಿಂದ—ಕೊಟ್ಟು ತೆಗೆದುಕೊಳ್ಳುವ ಮರ್ಯಾದೆಯಿಂದ compromise ರೀತಿಯಲ್ಲಿ ಪರಿಹರಿಸಿಕೊಂಡು, ಕೂಡಿದ ಮಟ್ಟಿಗೂ ಸರ್ವ ಸಮಾಧಾನದ ಮಾರ್ಗದಿಂದ ಮುಂದೆ ನಡೆಯಬೇಕು. ಒಂದು ಹೆಜ್ಜೆಯೂರಿ ಅದು ಗಟ್ಟಿ ನೆಲವೆಂದು ತಿಳಿದ ಮೇಲೆ ಇನ್ನೊಂದು ಹೆಜ್ಜೆಯೂರಬೇಕು.

ಇಂಥಾ ಮನೋಭಾವವುಳ್ಳವನು ದುಡುಕಲಾರ. ಆತನ ಮಾತಿನಲ್ಲಿ ಉಗ್ರತೆಯೂ ಆತುರವೂ ಇರವು. ಆತನ ನಡತೆಯಲ್ಲಿ ಸೌಮ್ಯವೂ ಸ್ನೇಹವೂ ತುಂಬಿರುತ್ತವೆ. ತನ್ನ ವಾಗ್ವೇಗದಲ್ಲಿ ಸತ್ಯಕ್ಕೆ ಎಲ್ಲಿ ಪೆಟ್ಟಾದೀತೋ, ತನ್ನ ವಾದ ರಭಸದಲ್ಲಿ ಯಾರಿಗೆ

ನ್ಯಾಯ ತಪ್ಪಿಹೋದೀತೋ ಎಂದು ಅವನು ಸರ್ವದಾ ಸೂಕ್ಷ್ಮಸ್ಪರ್ಶಿ (Sensitive) ಯಾಗಿರುತ್ತಾನೆ. ಮತ್ತು ಎಲ್ಲರನ್ನೂ ಒಪ್ಪಿಸಿ ಐಕಮತ್ಯದಿಂದ ಮುಂಬರಿಯ ಬೇಕೆಂಬುದು ಅವನ ಆಶಯವಾದದ್ದರಿಂದ, ಅವನು ಎಲ್ಲರೊಡನೆಯೂ ನಯ ವಿನಯಗಳಿಂದ ನಡೆದುಕೊಳ್ಳುತ್ತಾನೆ. ಒರಟಾಟಕ್ಕೆ ಅವನಲ್ಲಿ ಆಸ್ಪದವಿರದು.

ಗೋಖಲೆಯವರ ಸ್ವಭಾವ ಈ ತೆರದ್ದಾದ ಕಾರಣದಿಂದಲೇ ಪ್ರಥಮ ಸಂದರ್ಶನ ದಲ್ಲಿಯೇ ಅವರು ಗಾಂಧಿಯವರಿಗೆ ಪ್ರಿಯರಾದರು.

ವಿಜ್ಞಾನಿಯ ಸತ್ಯಶೋಧನ ಕ್ರಮ, ನ್ಯಾಯದರ್ಶಿಯ ಉಭಯಪಕ್ಷ ಸಮಾ ಲೋಚನೆ, ರಾಯಭಾರಿಯ ಸಂಧಾನಕುಶಲತೆ—ಈ ಮೂರು ಜಾತಿಯ ಗುಣ ಗಳೂ ಗೋಖಲೆಯವರಲ್ಲಿ ಕಲೆತಿದ್ದವು. ಈ ಲೋಕದಲ್ಲಿ ಒಳ್ಳೆಯದ್ಯಾವುದು— ಎಂಬುದೇ ಮನುಷ್ಯನಿಗಿರುವ ದೊಡ್ಡ ಪ್ರಶ್ನೆ. ನೂರಾರು ವಸ್ತುವಿಷಯಗಳು ಅವನಿಗೆ ಬೇಕೆನ್ನಿಸುತ್ತವೆ. ಅವುಗಳಲ್ಲಿ ನಿಜವಾದ ಒಳ್ಳೆಯದ್ಯಾವುದು ? ಮೊದಲಂತಸ್ತಿನದು ಯಾವುದು ? ಅದಾದ ಮೇಲೆ ಯಾವುದು ? ಇದನ್ನು ಗೊತ್ತುಮಾಡಿಕೊಡಲು ನಮಗಿರುವ ಸಾಧನಗಳು ಎರಡು : ಒಂದು ಸ್ವಾನುಭವ ವಿಮರ್ಶೆ, ಇನ್ನೊಂದು ನಮ್ಮೊಡನಿರುವ ಇತರರ ಆಲೋಚನೆಗಳು. ಅವೆರಡೂ ಎರಡು ಕಣ್ಣುಗಳಂತೆ ಒಟ್ಟುಗೂಡಿದಾಗ ನಮಗೆ ನಿಜವಾದ ಹಿತಸ್ವರೂಪದ ದರ್ಶನ. ವ್ಯಕ್ತಿಯ ಸ್ವತಂತ್ರವಿಚಾರ ಸಾರ್ವಜನಿಕ ಚರ್ಚೆ—ಈ ಎರಡೂ ಎಲ್ಲಿ ಸೇರಿಕೊಂಡಿರುತ್ತವೆಯೋ ಅಲ್ಲಿ ಪ್ರಮಾದದೋಷಗಳ ಸಂಭವ ಕಡಮೆ. ಆ ಎರಡು ಬಗೆಯ ಶೋಧನೆಗಳಿಗೂ ಅವಕಾಶ ಕಲ್ಪಿಸುತ್ತದೆಯೆಂಬುದೇ ಪ್ರಜಾಪ್ರಭುತ್ವ ಪದ್ಧತಿಯ ವಿಶೇಷ ಗುಣ. ರಾಷ್ಟ್ರಕ ವ್ಯಕ್ತಿಯು—"ಯಾವ ರಾಜ್ಯಕಾರ್ಯವೂ ತನ್ನನ್ನು ಬಿಟ್ಟು ಆದದ್ದಲ್ಲ, ತನ್ನೊಬ್ಬನಿಂದಲೇ ಆದದ್ದೂ ಅಲ್ಲ. ತಾನೂ ತನ್ನ ಸಮಾಜವೂ ಕೂಡಿಕೊಂಡು ಮಾಡಿದ್ದು ರಾಜ್ಯಕಾರ್ಯ. ಅದು ಮನುಷ್ಯಸಾಧ್ಯ ವಾದ ಸರ್ವಹಿತದ ಬಿಂಬ" ಎಂದು ಸಮಾಧಾನ ಪಟ್ಟುಕೊಳ್ಳಬಹುದಾದದ್ದು ಪ್ರಜಾರಾಜ್ಯದಲ್ಲಿ.

ಗೋಖಲೆಯವರ ರಾಜಕೀಯ ತತ್ತ್ವಗಳನ್ನು ಸಂಗ್ರಹವಾಗಿ ಹೀಗೆ ಹೇಳಬಹುದು ;

(1) ದೇಶ ವಿಚಾರವನ್ನು ಪ್ರತಿಯೊಬ್ಬನೂ ತನ್ನ ನಿತ್ಯಧರ್ಮದ ಒಂದಂಗ ವೆಂದು ಭಾವಿಸಿ ತನ್ನ ರಾಷ್ಟ್ರಕ ಕರ್ತವ್ಯವನ್ನು—ಅಷ್ಟು ಶ್ರದ್ಧೆಯಿಂದ, ಅಷ್ಟೇ ನಿಷ್ಠೆಯಿಂದ—ನಡಸಬೇಕಾದದ್ದು.

(2) ಸರಕಾರವು ಜನಕ್ಕೆ ಸೌಕರ್ಯ ಮಾಡಿಕೊಡುವುದರ ಜೊತೆಗೆ ಅವರ ಶೀಲ ಸ್ವಭಾವಗಳನ್ನೂ ಅಷ್ಟಿಷ್ಟು ರೂಪಾಂತರಗೊಳಿಸುತ್ತದೆ. ಆದದ್ದರಿಂದ ಸರಕಾರದಲ್ಲಿ ಜನಾನುಕೂಲ ದೃಷ್ಟಿ, ಕಾರ್ಯವಿಚಕ್ಷಣೆ, ಜಾಗರೂಕತೆ,

ಮಿತವ್ಯಯ ಬುದ್ಧಿ, ನಿಯಮ ನಿಷ್ಠೆ ಮೊದಲಾದ ಗುಣಗಳಿದ್ದಲ್ಲಿ ಅದು ಜನದ ನೀತಿ ಯೋಗ್ಯತೆಗೂ ಸಹಾಯವಾಗುತ್ತದೆ.

(3) ರಾಜ್ಯನೀತಿಯು ಸತ್ಯದ ಆಧಾರದ ಮೇಲೆ ನ್ಯಾಯಸಾಧಕವಾಗಿ ಇರಬೇಕು. ಆದದ್ದರಿಂದ ರಾಜಕೀಯಸ್ಥನು ಸತ್ಯಾಂಶವನ್ನು ವಿಷಯ ಪರಿಶೋಧನೆಯಿಂದ ಕಂಡುಕೊಂಡು, ಅದನ್ನು ಇತರರಿಗೆ ವಿಶ್ವಾಸ ಸಂಪಾದಕವಾದ ಸೌಮ್ಯ ರೀತಿಯಲ್ಲಿ ತಿಳಿಸಬೇಕು.

(4) ರಾಷ್ಟ್ರಕನು ತನ್ನ ವಿಚಾರ ಸ್ವಾತಂತ್ರ್ಯವನ್ನು ಪಕ್ಷಕ್ಕಾಗಲಿ ಕೋವಿ ಗಾಗಲಿ ಕಸಬಿಗಾಗಲಿ ಒತ್ತೆ ಹಾಕದೆ ಉಪಯೋಗಿಸಬೇಕು. ಅವನಿಗೆ ತನ್ನ ಅಂತಸ್ಸಾಕ್ಷಿಗಿಂತ ಯಾವುದೂ ದೊಡ್ಡದಾಗಬಾರದು.

(5) ರಾಜ್ಯವು ಸರ್ವಜನಹಿತಕ್ಕಾಗಿ ಇರತಕ್ಕದ್ದು. ಆದದ್ದರಿಂದ ರಾಷ್ಟ್ರಕನು ಸಾರ್ವಜನಿಕ ವಿಚಾರಗಳನ್ನು ನಿರ್ಣಯ ಮಾಡುವುದರಲ್ಲಿ ಸಕಲ ಪಕ್ಷ ಸಕಲ ವರ್ಗಗಳ ಇಷ್ಟ ಹಿತಗಳನ್ನೂ ಮನೋಭಾವಗಳನ್ನೂ ಅವರಿಗಿರುವ ಅಪನಂಬಿಕೆ ಅಭಿಮಾನಗಳನ್ನೂ ಸಹ ಗಣನೆಗೆ ತೆಗೆದುಕೊಳ್ಳ ಬೇಕು.

(6) ಕಾರ್ಯ ಪ್ರಸಕ್ತಿಯಲ್ಲಿ ಇತರ ಪಕ್ಷಗಳ ಬಲಾಬಲಗಳನ್ನು ನೋಡಿ ತನ್ನ ಮುಖ್ಯತತ್ತ್ವಗಳಿಗೆ ಭಂಗ ತಂದುಕೊಳ್ಳದ ರೀತಿಯಲ್ಲಿ ಆ ಅನ್ಯ ಪಕ್ಷಗಳೊಡನೆ ಇಷ್ಟಸಮ್ಮತಿ (compromise) ಮಾಡಿಕೊಂಡು ನಿರ್ವೈರ ಮಾರ್ಗದಲ್ಲಿ ಉದ್ದೇಶ ನಿರ್ವಾಹ ಮಾಡತಕ್ಕದ್ದು. ಇತರ ಸಂಪತ್ತನ್ನು ಗಳಿಸುವುದರಲ್ಲಿ ಜನೈಕಮತ್ಯದ ಸಂಪತ್ತನ್ನು ಕಳೆದುಕೊಳ್ಳ ಬಾರದು.

(7) ಹಿಂದಿನಿಂದ ಬಂದಿರುವ ವ್ಯವಸ್ಥೆ ಪದ್ಧತಿಗಳನ್ನು ಬದಲಾಯಿಸಬೇಕಾ ದಾಗ ಜನದ ಸ್ವಭಾವಕ್ಕನುಸಾರವೂ ಅವರ ಅನುಭವಕ್ಕೆ ಯುಕ್ತವೂ ಆದ ಮಾರ್ಪಾಟುಗಳನ್ನು, ಎಷ್ಟು ಅವಶ್ಯವೋ ಅಷ್ಟೇ ಮಟ್ಟಿಗೆ, ಕ್ರಮಿಕ ಪರ್ಯಾಯದಲ್ಲಿ ನಡೆಸತಕ್ಕದ್ದು.

(8) ಎಲ್ಲ ವಿಚಾರಗಳಲ್ಲೂ ಪಕ್ಷಪಾತವನ್ನೂ ಸ್ವಾರ್ಥಚಿಂತನೆಯನ್ನೂ ದೂರ ವಿಟ್ಟು, ದೇಶದೊಟ್ಟಿನ ಹಿತವನ್ನೇ ಲಕ್ಷ್ಯದಲ್ಲಿಡಬೇಕಾದದ್ದು.

(9) ಎಲ್ಲ ಪ್ರಯತ್ನಗಳಲ್ಲೂ ಜನದ ಸಹಜ ವಿವೇಕವೂ ಸ್ವ-ಪ್ರಯತ್ನವೂ ಆತ್ಮಾವಲಂಬನೆಯ ಪ್ರವೃತ್ತಿಯೂ ಬೆಳೆಯುವಂತೆ ನೋಡಬೇಕಾದದ್ದು. ಅವರು ತಾವಾಗಿ ಸಂಪಾದಿಸಿಕೊಂಡದ್ದು ಸರಕಾರ ಅವರಿಗೆ ಮಾಡಿ ಕೊಟ್ಟದ್ದಕ್ಕಿಂತ ಬೆಲೆಯಲ್ಲೂ ಬಾಳಿಕೆಯಲ್ಲೂ ಹೆಚ್ಚಿನದು.

(10) ಸ್ವತಂತ್ರದಲ್ಲಿ ಸಾಧಿಸಿದ ಪ್ರಗತಿ ನಿರ್ಬಂಧದಿಂದ ಕೊಡಿಸಿದ ಪ್ರಗತಿಗಿಂತ ಮೇಲು. ಜನದ ಅಂತಸ್ಸತ್ತ್ವ ಬೆಳೆಯಲು ಅವರು ಸ್ವಾತಂತ್ರ್ಯದ ಗಾಳಿಯನ್ನುಸಿರುತ್ತಿರಬೇಕು. ವಾಕ್‌ಸ್ವಾತಂತ್ರ್ಯ, ಪ್ರಕಟನ ಸ್ವಾತಂತ್ರ್ಯ, ಸಂಘಸಭಾ ಸ್ವಾತಂತ್ರ್ಯಗಳು ಜನಪದದ ಆರೋಗ್ಯಕ್ಕೆ ಇರಬೇಕಾದ ಪೂರ್ವ ಸೌಕರ್ಯಗಳು. ರಾಷ್ಟ್ರಕ ವ್ಯಕ್ತಿಯ ಸ್ವತಂತ್ರ ಶಕ್ತಿಯೇ ಮತ್ತು ಸ್ವ-ಪ್ರಯತ್ನ ಸ್ವಗುಣ ವಿಕಾಸಗಳೇ ದೇಶದ ಸಂಪತ್ತಿನಲ್ಲಿ ಪ್ರಥಮಾಂಶ.

ಈ ಹತ್ತು ತತ್ತ್ವಗಳಲ್ಲಿ ಗಾಂಧಿಯವರು ಒಪ್ಪಲಾಗದಿದ್ದದ್ದು ಒಂದೂ ಕಾಣಬರದು. ಆದರೆ ಕ್ರಮಿಕ ಪರ್ಯಾಯದ ನೀತಿಯನ್ನು ಇಂಡಿಯದ ಸ್ವಾತಂತ್ರ್ಯ ಪ್ರಕರಣಕ್ಕೆ ಗಾಂಧಿಯವರು ಅಂಗೀಕರಿಸುತ್ತಿದ್ದರೆ ? ಎಂದು ಸಂದೇಹ ಬರಬಹುದು. ಆ ಪ್ರಕರಣದಲ್ಲಿ ತಕರಾರಿದ್ದದ್ದು ವಾಸ್ತವವಾಗಿ ಗೋಖಲೆ ಗಾಂಧಿಯವರಿಗಲ್ಲ,—ಗೋಖಲೆ ತಿಲಕರಿಗೆ. ಜನವನ್ನು ಕಟ್ಟಿ ನಿಲ್ಲಿಸಿ ಸರಕಾರಕ್ಕೆ ಅಡಚಣೆಯೊಡ್ಡಬೇಕೆಂಬುದು ತಿಲಕರ ಉಪಾಯ. ಆ ಉಪಾಯದಿಂದ ದೇಶಕ್ಕೆ ಅಪಾಯವೇ ಆದೀತು. ಜನದ ಉದ್ರೇಕದಲ್ಲಿ ದೊಂಬಿ ದಂಗೆಗಳೆದ್ದು ಬ್ರಿಟಿಷ್ ಸರಕಾರ ಮತ್ತಷ್ಟು ದಬ್ಬಾಳಿಕೆ ನಡಸಲು ನೆವ ದೊರೆತೀತು—ಎಂಬುದು ಗೋಖಲೆಯವರ ಭಯ. ಈ ಭಯಕ್ಕಿದ್ದ ಕಾರಣವನ್ನು ನೀಗಿ, ತಿಲಕರ ಜನಕ್ಷೋಭೆಯ ಕಾರ್ಯವಿಧಾನದಲ್ಲಿ ಗೋಖಲೆಯವರ ಸತ್ಯ ಅಹಿಂಸೆಗಳ ನೀತಿಯನ್ನು ಸೇರಿಸಿದ್ದೂ ಗಾಂಧಿಯವರ ಧೈರ್ಯ ಪ್ರಭಾವ.

ಕ್ರಮಿಕ ಪರ್ಯಾಯದಿಂದ ಜನಕ್ಕೆ ಅವಶ್ಯವಾದ ಅನುಭವ ಶಿಕ್ಷಣ ದೊರೆತೀತೆಂಬುದು ಗೋಖಲೆಯವರ ಇನ್ನೊಂದು ತತ್ತ್ವಾಂಶ. ಪ್ರಜಾರಾಜ್ಯ ಪದ್ಧತಿ ನಮ್ಮ ಜನಕ್ಕೆ ಹೊಸದು. ಅದು ಕಷ್ಟ ತೊಡಕುಗಳುಳ್ಳದ್ದು. ಅದಕ್ಕೆ ಬೇಕಾದ ತಯಾರಿ ಇಲ್ಲದಿದ್ದರೆ ಅದು ಸತ್ಫಲಕಾರಿಯಾಗದು. ಅದು ಪೂರ್ವಸಿದ್ಧತೆಯಿಲ್ಲದೆ ಥಟ್ಟನೆ ಒಂದೇ ಬಾರಿ ಸಮಗ್ರವಾಗಿ ಬಂದರೆ ಅನೇಕ ಅನರ್ಥಗಳು ಒದಗಿಯಾವು. ಕ್ರಮಿಕ ಮಾರ್ಗದಿಂದ ಜನಕ್ಕೆ ಅಭ್ಯಾಸ ಸಿದ್ಧತೆ ದೊರೆತು ಎಲ್ಲವೂ ಸುಗಮವಾದೀತು. ನಮ್ಮ ಇಂದಿನ ಅನುಭವದಲ್ಲಿ ಈ ವಾದ ನಿಷ್ಕಾರಣವಾದದ್ದೆಂದು ಪಕ್ಷಾತೀತರು ಯಾರೂ ಹೇಳರು. ಒದಗಿಬಂದ ಸಮಯದಲ್ಲಿ ಸ್ವಾತಂತ್ರ್ಯವನ್ನು ಕೈವಶಮಾಡಿಕೊಳ್ಳದೆ ಇದ್ದಿದ್ದರೆ ಅದು ನಮಗೆ ಎಂದಿಗೂ ಸಿಕ್ಕುತ್ತಿರಲಿಲ್ಲವೆಂಬುದು ಪ್ರತ್ಯೇಕ ವಿಚಾರ.

ಸತ್ಯಾಗ್ರಹವನ್ನು ಗೋಖಲೆಯವರು ಒಪ್ಪಿಕೊಳ್ಳುತ್ತಿದ್ದರೆ ? ದಕ್ಷಿಣ ಆಫ್ರಿಕದ ಬಗೆಗೆ ಅವರು ಒಪ್ಪಿದ್ದರು. ಇಂಡಿಯದಲ್ಲಿ ಆ ಪ್ರಶ್ನೆ ರೂಪಗೊಂಡಾಗಿಗೆ ಅವರು ತೀರಿಕೊಂಡಿದ್ದರು. ಇಷ್ಟನ್ನು ಮಾತ್ರ ನಾವು ಹೇಳಬಹುದು : ಗೋಖಲೆಯವರ ಮಾತಿಗೆ ಗಾಂಧಿಯವರು ಮನ್ನಣೆ ಕೊಡುತ್ತಿದ್ದಂತೆ ಗಾಂಧಿಯವರ ಮಾತಿಗೆ ಗೋಖಲೆಯವರು ಬೆಲೆ ಕೊಡುತ್ತಿದ್ದರು. ಅವರಿಬ್ಬರ ಸ್ನೇಹದಲ್ಲಿ ಯಾರನ್ನು ಯಾರು ಎಷ್ಟು

ಮಾತ್ರ ಮಾರ್ಪಡಿಸುತ್ತಿದ್ದರೋ ಊಹಿಸಲಾಗದು ; ಇಬ್ಬರೂ ವಿರೋಧವಿಲ್ಲದೆ ಏಕೀಭವಿಸಿ ಕೆಲಸ ಮಾಡುತ್ತಿದ್ದರೆಂಬುದು ಖಂಡಿತ.

ಸ್ವಾತಂತ್ರ್ಯ ಸಂಪಾದನೆಯ ಪ್ರಶ್ನೆ ಈಗಿಲ್ಲ. ಈಗ ಉಳಿದಿರುವುದು ಒಳ್ಳೆಯ ಸರಕಾರವನ್ನು ಸಂಪಾದಿಸಿಕೊಳ್ಳುವ ಪ್ರಶ್ನೆ. ಇದನ್ನು ಬಗೆಹರಿಸಲು ಬೇಕಾದದ್ದು ವೀರಾವೇಶವಲ್ಲ, ಸಮಾಧಾನ ವಿವೇಕ. ವಿವೇಕ ಎರಡು ಕೆಲಸಗಳನ್ನು ಮಾಡುತ್ತದೆ. ಮೊದಲನೆಯದಾಗಿ, ದೇಶದಲ್ಲಿ ಎಂಥಾ ಏರ್ಪಾಟುಗಳು ನಡೆದರೆ ನಾನಾ ಜನವರ್ಗಗಳಿಗೂ ವೃತ್ತಿಗಳಿಗೂ ಪ್ರತ್ಯೇಕವಾಗಿ ಸಲ್ಲಬೇಕಾದ ನ್ಯಾಯಾಂಶಗಳಿಗೆ ಬಾಧೆ ಕಡಮೆಯಾಗುತ್ತದೆ—ಎಂಬ ವಿವೇಚನೆ. ಎರಡನೆಯದಾಗಿ, ನಮ್ಮ ಯೋಜನೆಗಳು ಜನದ ಸ್ವಭಾವಕ್ಕೆ ಎಷ್ಟುಮಟ್ಟಿಗೆ ಹೊಂದುತ್ತವೆ ಮತ್ತು ಜನಸ್ವಭಾವವನ್ನು ಹೇಗೆ ಹೇಗೆ ಮಾರ್ಪಡಿಸೀತು—ಎಂಬ ವಿವೇಚನೆ. ರಾಜ್ಯದ ನ್ಯಾಯ ವಿತರಣೆಯಲ್ಲಿ ಯಾರಿಗೂ ಹೆಚ್ಚು ದೊರೆಯಬೇಕಾದದ್ದಿಲ್ಲ, ಯಾರಿಗೂ ಕಡಮೆ ಬೀಳಬಾರದು. ನಮ್ಮ ಪ್ರಕೃತ ಯೋಜನೆ ಪೂರ್ವಾಪರ ಸಂದರ್ಭಗಳೆರಡಕ್ಕೂ ಸೇತುವೆಯಂತಿರಬೇಕು. ಈ ಎರಡು ತೆರದ ವಿವೇಕವನ್ನು ಹಿಂದುಗೂಡಿರಬೇಕಾದದ್ದು ಉತ್ಸಾಹ. ವಿವೇಕವನ್ನು ಮಿಂಚಿದ ಉತ್ಸಾಹ ಕುರುಡು ಕುದುರೆಯ ಓಟ. ಉತ್ಸಾಹವು ಸಹಜ ಪ್ರವೃತ್ತಿ. ವಿವೇಕವಾದರೋ ಪ್ರಯತ್ನಲಭ್ಯವಾದದ್ದು. ಅದರ ದಾರಿಯನ್ನು ಗೋಖಲೆಯವರು ತೋರಿಸಿದ್ದಾರೆ.

ಇಂಡಿಯದ ರಾಜಕೀಯ ಈ ಹೊತ್ತು ತೊಡಕುತಕರಾರುಗಳ ಕಾಡಾಗಿದೆ. ನಾನಾ ಪಕ್ಷ ನಾನಾ ಕಕ್ಷಿಗಳು ಜನದ ಮನಸ್ಸನ್ನು ಹರಿದು ಹತ್ತೂ ಕಡೆ ಚದರಿಸಿವೆ. ಈ ಒಂದು ದಿನದ ವಾದವಿವಾದಗಳ ಗದ್ದಲದಲ್ಲಿ ನಾವು ಶಾಶ್ವತವಾದ ದೇಶವನ್ನು ಮರೆಯಲಾಗದು. ರಾಜ್ಯದ ರೂಪರಚನೆ ಹೇಗಾದರಿರಲಿ, ಜನ ಬದುಕಬೇಕೆಂಬುದು ಖಂಡಿತ. ಜನವನ್ನು ಕಾಪಾಡುವುದು ಸತ್ಯ, ವಿಧೇಯತೆ ಮತ್ತು ನ್ಯಾಯ ವಿಚಕ್ಷಣೆ. ಸತ್ಯದರ್ಶನದ ಮಾರ್ಗ ಹೇಗೆ, ನ್ಯಾಯಸಾಧನೆಯ ಮಾರ್ಗ ಹೇಗೆ ಎಂದು ಕೇಳುವಷ್ಟು ಧರ್ಮಶ್ರದ್ಧೆ ನಮ್ಮಲ್ಲಿ ಯಾರಿಗಾದರೂ ಇದ್ದರೆ ಅವರಿಗೆ ಗೋಖಲೆಯವರ ಸ್ಮರಣೆ ಕೈದೀವಿಗೆಯಾಗುತ್ತದೆ. (1951)

# ಶ್ರೀನಿವಾಸಶಾಸ್ತ್ರಿಗಳು*

ಗಾಂಧಿಯುಗದ ಚರಿತ್ರಕಾರನು ಶ್ರೀನಿವಾಸಶಾಸ್ತ್ರಿಗಳನ್ನು ಮರೆಯಲಾರ. ಅವರಿಬ್ಬರೂ ಅಷ್ಟುಮಟ್ಟಿನ ಆಪ್ತಸ್ನೇಹಿತರು. ಇಬ್ಬರೂ ಸಮವಯಸ್ಕರು, ಬಹುಮಟ್ಟಿಗೆ ಸಮಾನ ಧರ್ಮಿಗಳು ; ಒಬ್ಬರ ಬೆಲೆಯನ್ನು ಇನ್ನೊಬ್ಬರು ಅರಿತು ಕೊಂಡಿದ್ದವರು ; ಕಿಂಚಿತ್ತಾದ ಗುಣಭೇದದಿಂದ ಪರಸ್ಪರ ಪರಿಪೂರಕರಾಗಿದ್ದವರು. ಪ್ರಸಕ್ತವಾದ ಅಭಿಪ್ರಾಯವನ್ನು ನಾನಾ ದೃಷ್ಟಿಕೋನಗಳಿಂದ ಹಿಡಿದು ನೋಡಿ ಪರೀಕ್ಷಿಸುವುದರಲ್ಲಿಯೂ, ತಮ್ಮ ಬುದ್ಧಿ ಕಂಡದ್ದನ್ನು ಇತರರಿಗೆ ಸ್ಪಷ್ಟಪಡಿಸುವುದರಲ್ಲಿಯೂ ಶಾಸ್ತ್ರಿಗಳು ನಿಪುಣರು. ಈ ವಿಚಾರನಿಪುಣತೆಯ ಪ್ರಯೋಜನವನ್ನು ಬಹುಮತಿಸಿದ್ದವರು ಗಾಂಧಿಯವರು.

ಶಾಸ್ತ್ರಿಗಳವರ ಜೀವಿತ ಕಾಲ 1869 ರಿಂದ 1946ರವರೆಗೆ. ಆ ಎಪ್ಪತ್ತೇಳು ವರ್ಷಗಳ ಜೀವಿತವನ್ನು ನಾಲ್ಕು ಪಕ್ಕಗಳಿಂದ ನೋಡಬಹುದು. ಉಪಾಧ್ಯಾಯತನ, ರಾಜಕೀಯ, ಸಾಹಿತ್ಯ ಸರಸತೆ, ಸ್ನೇಹ ಸೌಜನ್ಯ—ಇವು ಆ ನಾಲ್ಕು ಪಕ್ಕಗಳು.

ಶಾಸ್ತ್ರಿಗಳು ತಮ್ಮ 18ನೆಯ ವರ್ಷದಲ್ಲಿ ಬಿ.ಎ. ಪಟ್ಟ ಪಡೆದರು—ಮೊದಲನೆಯ ತರಗತಿಯಲ್ಲಿ. ಇಂಗ್ಲಿಷು ಸಂಸ್ಕೃತ ಭಾಷೆಗಳಲ್ಲಿ ಪ್ರಥಮ ಸ್ಥಾನಕ್ಕೆ ಹತ್ತಿ. ಸಂಸ್ಕೃತ ಪಾಂಡಿತ್ಯಕ್ಕಾಗಿ ಗೊತ್ತಾದ ಚಿನ್ನದ ಪದಕವನ್ನು ಗೆದ್ದರು.

ಶಾಸ್ತ್ರಿಗಳ ತಂದೆ ಶಂಕರನಾರಾಯಣ ಶಾಸ್ತ್ರಿಗಳು ತಮ್ಮ ಮಗ ಸಂಸ್ಕೃತದಲ್ಲಿ ಗಣ್ಯತೆ ಸಂಪಾದಿಸಿದ ಸಂತೋಷಕ್ಕಾಗಿ ಒಂದು ಮಿತ್ರ ಸಂತರ್ಪಣೆಯನ್ನು ಏರ್ಪಡಿಸಿದರು. ಅದಕ್ಕೆ ಬಂದಿದ್ದ ಅತಿಥಿಗಳು ವಿದ್ವಾಂಸರು. ಅವರಲ್ಲೊಬ್ಬರು ಭೋಜನ ಕಾಲದಲ್ಲಿ ಒಂದು ಶ್ಲೋಕ ಹೇಳಿದರು :

---

* 22-9-1956 ರಂದು ಬೆಂಗಳೂರು 'ಆಕಾಶವಾಣಿ'ಯಿಂದ ಪ್ರಸಾರವಾದ ಭಾಷಣ. (ಪ್ರಸಾರ ಭಾಷಣದ ಕಾಲಾವಧಿಯ ನಿಬಂಧನೆಗೆ ಒಳಪಟ್ಟು ಮೂಲಲಿಖಿತದಲ್ಲಿ ಬಿಟ್ಟುಬಿಟ್ಟಿದ್ದ ಭಾಗಗಳನ್ನು ಇಲ್ಲಿ ಉಳಿಸಿಕೊಂಡಿದೆ.)

ಯದ್ದ್ವ್ಯಕ್ಷರಂ ನಾಮ ಗಿರೇರಿತಂ ನೃಣಾಮ್ ।
ಸಕೃತ್ಪ್ರಸಂಗಾದಘಮಾಶು ಹಂತಿ ತತ್ ॥
ಜಗತ್ಪ್ರಭುಂ ದೇವಮಲಂಘ್ಯ ಶಾಸನಂ ।
ಭವಾನಹೋ ದ್ವೇಷ್ಟಿ ಶಿವಂ ಶಿವೇತರಃ ॥

ಇದು ಒಂದು ಪುರಾಣ ಶ್ಲೋಕ, ದಕ್ಷನನ್ನು ಕುರಿತು ದಾಕ್ಷಾಯಿಣಿ ಆಡಿ ಮಾತಂತೆ !

ಶ್ರೀನಿವಾಸಶಾಸ್ತ್ರಿಗಳು ಆ ಶ್ಲೋಕವನ್ನು ಕೇಳಿ, ಅದನ್ನು ಮತ್ತೊಮ್ಮೆ ಹೇ ಬೇಕೆಂದರು. ಹಾಗೆ ಹೇಳಿದ್ದಾದಮೇಲೆ ಅದರಲ್ಲಿ 'ನಾಮ' ಎಂಬುದಕ್ಕೂ 'ಶಿವಂ ಎಂಬುದಕ್ಕೂ ಅನ್ವಯ ಹೇಗೆ ಎಂದು ಪ್ರಶ್ನೆ ಮಾಡಿದರು. ಶ್ಲೋಕ ಹೇಳಿದವರ ಹೇಳಿದ ಸಮಾಧಾನವನ್ನು ಹುಡುಗ ಶಾಸ್ತ್ರಿಗಳು ಒಪ್ಪಲಿಲ್ಲ. ವಾದ ಕೊಂಚ ಬೆಳೆಯಿತು ಅದು ಹಿರಿಯ ಶಾಸ್ತ್ರಿಗಳಿಗೆ ತಪ್ಪಾಯಿತು. ಅವರು ಮಗನನ್ನು ಕುರಿತು— "ಬ್ರಾಹ್ಮಣರಿಗೆ ತೇಜೋವಧೆ ಮಾಡುವುದೆಂಥಾ ಪಾಂಡಿತ್ಯ ?" ಎಂದು ಕೋಪದಿಂ ನುಡಿದರು. ಶ್ರೀನಿವಾಸಶಾಸ್ತ್ರಿಗಳು ಈ ಕಥೆಯನ್ನು ನನಗೆ ಹೇಳಿ,—"ಅಂದಿನಿಂ ನಾನು ಇನ್ನೊಬ್ಬರ ವ್ಯಾಕರಣದ ಗೋಜಿಗೆ ಹೋಗುವುದಿಲ್ಲ" ಎಂದು ಪಶ್ಚಾತ್ತಾಪ ಮಾತನ್ನಾಡಿದರು. ನಾನು—"ಹಾಗಾದರೆ ನೀವು ಮೊನ್ನೆತಾನೆ ಗಾಂಧಿಯವರ ಬರವಣಿ ಯನ್ನು ತಿದ್ದಿದ್ದೇನು ?" ಎಂದೆ. ಅವರು—"ನನ್ನ ಕಸಬು ಉಪಾಧ್ಯಾಯತನವಲ್ಲವೆ ? ಎಂದರು. ಹೌದು. ಅವರು ಹುಟ್ಟಿನಿಂದ ಉಪಾಧ್ಯಾಯರು ; ಎಲ್ಲರ ವ್ಯಾಕರ ಗಳನ್ನೂ ತಿದ್ದುತ್ತಿದ್ದವರು. ವ್ಯಾಕರಣವೆಂದರೆ ಮೊದಲು ಮನಸ್ಸು ಬುದ್ಧಿಗ ಕಾರ್ಯವನ್ನು ಪರಿಷ್ಕಾರಪಡಿಸುವ ಕ್ರಮ. ಎರಡನೆಯದಾಗಿ ಆ ಮನೋಬುದ್ ಕಾರ್ಯಗಳಿಗೆ ತಕ್ಕಂತೆ ಮಾತನ್ನೂ ನಡವಳಿಕೆಯನ್ನೂ ಜೋಡಿಸುವ ಕ್ರಮ. ಮನೋ ವಾಕ್ಕರ್ಮಗಳ ಶೋಧನೆ ಯೋಜನೆಗಳೇ ವ್ಯಾಕರಣ. ಅದು ಶಾಸ್ತ್ರಿಗಳಿಗೆ ದೇವರ ಕೊಟ್ಟಿದ್ದ ವರ.

ಶ್ರೀನಿವಾಸಶಾಸ್ತ್ರಿಗಳು ಇಪ್ಪತ್ತು ವರ್ಷ ಉಪಾಧ್ಯಾಯವೃತ್ತಿಯಲ್ಲಿದ್ದರು. ಕಾಲದಲ್ಲಿ ದಕ್ಷಿಣ ದೇಶದಲ್ಲಿ ಸರಕಾರದ ವಿದ್ಯಾಶಾಲೆಗಳು ಅಪರೂಪ. ಇದ್ದ ಶಾಲೆಗಳ ಬಹುಮಟ್ಟಿಗೆ ಖಾಸಗಿಯವು. ಅವು ಪ್ರಾಯಶಃ ಟೀಚರ್-ಮ್ಯಾನೇಜರ್ ಪದ್ಧ ಯವು—ಎಂದರೆ, ಉಪಾಧ್ಯಾಯನೇ ಪಾಠಶಾಲೆಯ ಮಾಲೀಕನೂ ಆಗಿದ್ದುಕೊಂಡ ವಿದ್ಯಾರ್ಥಿಗಳಿಂದ ಬಂದ ವರಮಾನವನ್ನು ತನ್ನ ಸ್ವಂತಕ್ಕೆ ಉಪಯೋಗಿಸಿಕೊಳ್ಳುವುದ ಸಹಾಯೋಪಾಧ್ಯಾಯರಿಗೆ ಸರಿಯಾದ ಸಂಬಳ ಸಲ್ಲಿಸದೆ ಕಾಟವಿಟ್ಟು ಅವರು ಬಿಟ್ ಹೋಗದಿರುವಂತೆ ಚೌಕಾಶಿಮಾಡಿ ಒಂದಿಷ್ಟು ಕೂಲಿ ಕೊಡುವುದು. ಈ ಪದ್ಧತಿಯನ ಶ್ರೀನಿವಾಸಶಾಸ್ತ್ರಿಗಳು ರಂಗುರಂಗಾಗಿ ವರ್ಣಿಸುತ್ತಿದ್ದರು. ಒಂದಾನೊಂದೂರಿನಲ್ಲಿ ಬಡ ಉಪಾಧ್ಯಾಯರು ಶಾಲಾ ಮಾಲೀಕನ ಅನ್ಯಾಯಗಳನ್ನು ಸಹಿಸಲಾರ ಕೊತ್ತುಕಾರ ಪಂಜು ಎಂಬ ಪುಂಡನಾಯಕನನ್ನು ಮರೆಹೊಕ್ಕರಂತೆ. ಕೊತ್ತುಕಾ ಎಂದರೆ ಹೆಣ ಹೊರುವವ. ಆ ಪಂಜುವೆಂಬಾತನು ಪುಂಡುಪಡೆ ಕಟ್ಟಿಕೊಂಡ

ಶಾಲೆಯ ಮಾಲೀಕನ ಬಳಿಗೆ ಹೋಗಿ ಹೆದರಿಸುವವರೆಗೂ ಆ ದೊಡ್ಡಮನುಷ್ಯ ನ್ಯಾಯದ ದಾರಿಗೆ ಬಾರದೆ ಹೋದನಂತೆ! ಅಂಥಾ ಕಾಲದಲ್ಲಿ ಉದ್ಯೋಗ ಪ್ರಾರಂಭ ಮಾಡಿದವರು ಶ್ರೀನಿವಾಸಶಾಸ್ತ್ರಿಗಳು. ಹನ್ನೆರಡು ವರ್ಷ ಅವರು ತಮ್ಮ ಜನ್ಮಸ್ಥಳ ವಾದ ಕುಂಭಕೋಣದಲ್ಲಿಯೂ, ಮಾಯವರ, ಶಾಲ್ಯ ಮುಂತಾದ ಕಡೆಗಳಲ್ಲಿಯೂ ಬೋಧಕರಾಗಿ ಕೆಲಸಮಾಡಿ ಸಮರ್ಥರೆಂದು ಹೆಸರಾದರು. ಅವರು ಪಾಠ ಹೇಳು ತ್ತಿದ್ದ ಭಾಗ ವಿಶೇಷವಾಗಿ ಇಂಗ್ಲಿಷ್ ಭಾಷೆ ಸಾಹಿತ್ಯಗಳು.

ಅವರ ಕೀರ್ತಿ ಚಿರಸ್ಥಾಯಿಯಾದದ್ದು ಮದ್ರಾಸಿನ ತಿರುವಳ್ಳಿಕೇಣಿಯಲ್ಲಿರುವ ಹಿಂದೂ ಹೈಸ್ಕೂಲಿನಲ್ಲಿ. ಅಲ್ಲಿ ಅವರು ಮುಖ್ಯೋಪಾಧ್ಯಾಯರಾಗಿದ್ದದ್ದು ಎಂಟು ವರ್ಷ. ಆಗ ಅವರ ಶಿಷ್ಯರಾಗಿದ್ದವರಲ್ಲಿ ಬಹುಮಂದಿ ಆ ತರುವಾಯ ಅವರವರ ಜೀವನಕ್ಷೇತ್ರಗಳಲ್ಲಿ ಪ್ರಸಿದ್ಧರಾಗಿ, ಶಾಸ್ತ್ರಿಗಳ ಯಶೋಮಂಟಪಕ್ಕೆ ಸ್ತಂಭದಂತಿ ದ್ದಾರೆ. ಪಾಠಪ್ರವಚನ ಮತ್ತು ಸಂಸ್ಥಾನಿರ್ವಾಹ—ಈ ಎರಡು ಭಾಗಗಳಲ್ಲಿಯೂ ಶಾಸ್ತ್ರಿಗಳು ಸಮಾನವಾದ ದಕ್ಷತೆಯುಳ್ಳವರು.

ಅವರು ತಮ್ಮ ಶಾಲೆಗೆ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುದರಲ್ಲಿ ವಿಚಕ್ಷಣೆ ತೋರುತ್ತಿದ್ದರು. ಬಂದ ಹುಡುಗನನ್ನು ಮೊದಲು ಪರೀಕ್ಷಿಸಿ ಯೋಗ್ಯತೆ ಕಂಡು ಹಿಡಿಯದೆ ಅವನಿಗೆ ಪ್ರವೇಶ ಕೊಡುತ್ತಿರಲಿಲ್ಲ. ಒಂದು ಸಾರಿ ಆಂಧ್ರದಿಂದ ಒಬ್ಬ ಹುಡುಗ— "ಫೋರ್ತ್ ಫಾರಂ" ಎಂಬ ನಾಲ್ಕನೆಯ ಇಯತ್ತೆಗೆ ಸೇರಲು ಬಂದನಂತೆ. ಶಾಸ್ತ್ರಿಗಳು ಅವನನ್ನು ಕುರಿತು ಇಂಗ್ಲಿಷಿನಲ್ಲಿ—"ನೀವು ದಯಮಾಡಿ 'Had it not been' ಎಂಬ ಪದಸಂಧಿಯನ್ನು ಒಂದು ವಾಕ್ಯದಲ್ಲಿ ಜೋಡಿಸಿ ಹೇಳುವಿರಾ?" ಎಂದು ಕೇಳಿದರು. ಅವನು ಒಡನೆಯೆ—"Had it not been that you are the Headmaster here, I would not have come to this school"—"ತಾವು ಇಲ್ಲಿ ಮುಖ್ಯೋಪಾಧ್ಯಾಯ ರೆಂಬುದಿಲ್ಲದೆ ಹೋಗಿದ್ದಿದ್ದರೆ ನಾನು ಈ ಶಾಲೆಗೆ ಬರುತ್ತಿರಲಿಲ್ಲ" ಎಂದು ಉತ್ತರ ಕೊಟ್ಟನಂತೆ. ಶಾಸ್ತ್ರಿಗಳು ನಸುನಕ್ಕು ತಮ್ಮ ಸಹಾಯೋಪಾಧ್ಯಾಯ ರನ್ನು ಕರೆದು— "ಅಯ್ಯಾ, ಇವನಿಗೆ ಮೊದಲು ಜಾಗ ಕೊಡಿ. ಇಂಥವನನ್ನು ನಾವು ಬಿಡಬಾರದು" ಎಂದರಂತೆ.

ಬೆಂಗಳೂರಿನಲ್ಲಿ ಒಬ್ಬ ದೊಡ್ಡ ವಕೀಲರು ಶಾಸ್ತ್ರಿಗಳ ಬಳಿ ಬಂದು—"ಸ್ವಾಮಿ, ನನ್ನ ಅಳಿಯ ತಮ್ಮ ಶಿಷ್ಯ. ಆತನ ಮಗಳಿಗೆ ನಾಳೆ ಮದುವೆ. ತಾವು ಬಂದು ಆಶೀರ್ವದಿಸಬೇಕು" ಎಂದು ಬೇಡಿದರು. ಅದರಂತೆ ಶಾಸ್ತ್ರಿಗಳು ಮದುವೆಯ ಮನೆಗೆ ಹೋದರು. ಅಲ್ಲಿ ಮದುಮಗಳ ತಂದೆ—ಆತನೂ ವಕೀಲ—ಶಾಸ್ತ್ರಿಗಳನ್ನು ಮರ್ಯಾದೆಯಿಂದ ಬರಮಾಡಿಕೊಂಡು ಮಾತನಾಡಿಸಿದ. ಶಾಸ್ತ್ರಿಗಳು—"ನೀವು ಹಿಂದೂ ಹೈಸ್ಕೂಲಿನಲ್ಲಿದ್ದಿರಾ?" ಎಂದರು. ಆತ—"ಹೌದು, ಇಪ್ಪತ್ತೈದು ವರ್ಷಗಳ ಹಿಂದೆ ನಾನು ತಮ್ಮ ಕ್ಲಾಸಿನಲ್ಲಿದ್ದೆ. ಇಂಗ್ಲಿಷ್ ಉಚ್ಚಾರಣೆ ತಪ್ಪಿದ್ದಕ್ಕಾಗಿ ಕಿವಿ ಹಿಂಡಿಸಿಕೊಂಡದ್ದು ಇನ್ನೂ ಜ್ಞಾಪಕವಿದೆ" ಎಂದ. ಶಾಸ್ತ್ರಿಗಳು— "ಹೌದಂ

ಸಾರ್, ಆಗ ನನಗೆ ಈಗಿನಷ್ಟು ತಾಳ್ಮೆಯಿರಲಿಲ್ಲ. ಅಂಥಾ ಅಪರಾಧಗಳನ್ನು ಎಷ್ಟು ಮಾಡಿದ್ದೇನೋ ! ಅದರ ಪರಿಹಾರಕ್ಕೆ ಈಗ ಏನು ಮಾಡಿದರಾದೀತು ? ನಿಮ್ಮ ಮಗಳಮದುವೆಯಲ್ಲಿ ನಿಮ್ಮ ಕ್ಷಮೆಯನ್ನು ನನಗೆ ಗುರುದಕ್ಷಿಣೆಯಾಗಿ ಕೊಡ ಲಾರಿರಾ ? " ಎಂದು ಲಘುಹಾಸ್ಯದಲ್ಲಿ ಬೇಳಾಡಿದರು.

ಶಾಸ್ತ್ರಿಗಳು ಶಿಷ್ಯರಿಗೆ ಬೆತ್ತ ತೋರಿಸುತ್ತಿದ್ದದ್ದೂ ಉಂಟಂತೆ— ಆದರೆ ಅಪರೂಪವಾಗಿ. ಹಾಗೆಯೇ ಅವರೊಡನೆ ಆಟವಾಡುತ್ತಿದ್ದದ್ದೂ ಉಂಟು. ಕಾವ್ಯ ಪಾಠದಿಂದ ಶಿಷ್ಯರನ್ನು ಕುಣಿಸುತ್ತಿದ್ದರು. ಅವರೂ ಮೈಸೂರಿನಲ್ಲಿ ವಿದ್ಯಾಇಲಾಖೆ ಯಲ್ಲಿ ಸರ್ಕಲ್ ಇನ್‌ಸ್ಪೆಕ್ಟರಾಗಿದ್ದು ಕೀರ್ತಿಪಡೆದ ಡಿ. ವೆಂಕಟರಾಮಯ್ಯನವರೂ ಎಲ್. ಟಿ. ಎಂಬ ಶಿಕ್ಷಣ ವಿದ್ಯಾವ್ಯಾಸಂಗದಲ್ಲಿ ಸಹಾಧ್ಯಾಯಿಗಳಾಗಿದ್ದರು. ಆಗ ಇಬ್ಬರಿಗೂ ಸ್ನೇಹ ಮೊಳೆತು, ಕಡೆಯವರೆಗೂ ಬೆಳೆದು ಬಂತು.

ಆ ದಿನಗಳಲ್ಲಿ ಒಬ್ಬ ಪ್ರಸಿದ್ಧ ಇಂಗ್ಲಿಷ್ ನಟನು ಮದ್ರಾಸಿಗೆ ಬಂದು ಷೇಕ್ಸ್‌ಪಿಯರ್‌ನ ನಾಟಕಗಳನ್ನಾಡಿ ತೋರಿಸುತ್ತಿದ್ದ. ಶ್ರೀನಿವಾಸಶಾಸ್ತ್ರಿಗಳು ಆತನ ವಾಗಭಿನಯಗಳ ರೀತಿಯನ್ನು ಕುತೂಹಲದಿಂದ ವ್ಯಾಸಂಗಮಾಡಿ, ಬಳಿಕ ತಮ್ಮ ಶಿಷ್ಯ ರಿಂದ ಒಂದೆರಡು ಷೇಕ್ಸ್‌ಪಿಯರ್ ನಾಟಕಗಳನ್ನಾಡಿಸಿದರು. ಹೀಗೆ ಪರೀಕ್ಷೆ ಶಿಕ್ಷೆ ಗಳಲ್ಲಿ ಚುರುಕಾಗಿದ್ದರೂ ವಾತ್ಸಲ್ಯ ವಿನೋದಗಳಲ್ಲಿ ಶಿಷ್ಯರಿಗೆ ಒಡನಾಡಿಯಾಗಿದ್ದವರು ಶ್ರೀನಿವಾಸಶಾಸ್ತ್ರಿಗಳು.

1900ರ ಸುಮಾರಿನಲ್ಲಿ ಶಾಸ್ತ್ರಿಗಳು "ಎಜ್ಯುಕೇಷನಲ್ ರೆವ್ಯೂ" ಎಂಬ ವಿದ್ಯಾವಿಷಯಕ ಮಾಸಪತ್ರಿಕೆಯ ಸಂಪಾದಕರಾಗಿದ್ದರು. ಆಗ ನೆಸ್‌ಫೀಲ್ಡ್ ಎಂಬ ಇಂಗ್ಲಿಷ್ ವೈಯಾಕರಣಿ ಬರೆದ ಇಂಗ್ಲಿಷ್ ವ್ಯಾಕರಣ ಗ್ರಂಥವನ್ನು ಮ್ಯಾಕ್‌ಮಿಲನ್ ಕಂಪನಿಯವರು ಪ್ರಕಟಿಸಿದ್ದರು. ಆ ಗ್ರಂಥ ಪಾಠಾನುಕ್ರಮವಾದ ನಾಲ್ಕು ಸಂಪುಟ ಗಳುಳ್ಳದ್ದು. ಅದನ್ನು ಶಾಸ್ತ್ರಿಗಳ ಪತ್ರಿಕೆ ವಿಮರ್ಶೆಮಾಡಿ, ಅದರಲ್ಲಿಯ ಅಸಂಬದ್ಧ ಗಳನ್ನು ತೋರಿಸಿತು. ಮುಖ್ಯವಾಗಿ "ಷಲ್" "ವಿಲ್" ಎಂಬ ಆಖ್ಯಾತ ಪ್ರತ್ಯಯಗಳ ರೂಪಾಂತರಗಳ ಪ್ರಯೋಗದಲ್ಲಿ ನೆಸ್‌ಫೀಲ್ಡ್‌ನು ಎಡವಿದ್ದದ್ದು ಹೊರಕ್ಕೆ ಬಂತು. ಅದರ ಮೇಲೆ ಚರ್ಚೆ ಎದ್ದಿತು. ನೆಸ್‌ಫೀಲ್ಡ್‌ನ ಪರವಾಗಿ ಒಬ್ಬರಿಬ್ಬರು ಇಂಗ್ಲಿಷ್ ಪ್ರೊಫೆಸರುಗಳು ನಿಂತರು. ಶಾಸ್ತ್ರಿಗಳು, ಪಚ್ಚೆಯಪ್ಪ ಕಾಲೇಜಿನ ಕೆ. ಬಿ. ರಾಮ ನಾಥಯ್ಯರವರು, ಪುದುಕೋಟೆಯ ಬಿ. ವಿ. ಕಾಮೇಶ್ವರಯ್ಯರವರು, ಕಾಮಾಕ್ಷಿ ನಟರಾಜನ್ ಅವರು ಎದುರುಸಾಲಿನಲ್ಲಿ ನಿಂತರು. ಇಂಗ್ಲಿಷ್ ವ್ಯಾಕರಣ ಪ್ರಕ್ರಿಯಾ ಪ್ರಯೋಗದ ವಿಚಾರದಲ್ಲಿ ಇಂಗ್ಲೆಂಡಿನ ಇಂಗ್ಲಿಷ್ ಪಂಡಿತರೊಡನೆ ಮದ್ರಾಸಿನ ಇಂಗ್ಲಿಷ್ ಅಯ್ಯರ್ ಪಂಡಿತರು ಕುಸ್ತಿಯಾಡಿದ್ದು ಜನಕ್ಕೆ ಒಳ್ಳೆಯ ವಿಸ್ಮಯ ಪ್ರಕರಣವಾಯಿತು.

ಶಾಸ್ತ್ರಿಗಳ ರಾಜಕೀಯವನ್ನು ಕುರಿತು ಇಲ್ಲಿ ಈಗ ಹೆಚ್ಚಾಗಿ ಹೇಳಬೇಕಾಗಿಲ್ಲ. ಅವರು ಮದ್ರಾಸಿನಲ್ಲಿ ನೆಲಸುವ ವೇಳೆಗೆ ಕಾಂಗ್ರೆಸ್ ಸಂಸ್ಥೆ ದೇಶದಲ್ಲಿ ಬೇರೂರಿತ್ತು.

ಅವರ ವಾರ್ಷಿಕ ಪರಿಷತ್ತುಗಳಲ್ಲಿಯೂ ಸ್ಥಳೀಯ ಶಾಖೆಗಳಲ್ಲಿಯೂ ಶಾಸ್ತ್ರಿಗಳು ಭಾಗವಹಿಸುತ್ತಿದ್ದರು. ಕಾಂಗ್ರೆಸ್ ಸ್ವಯಂಸೇವಕ ದಳಕ್ಕೆ ನಾಯಕರಾಗಿರುತ್ತಿದ್ದರು. ಅವರು 1907ರಲ್ಲಿ ಉಪಾಧ್ಯಾಯತ್ವದಿಂದ ನಿವೃತ್ತರಾಗಿ ಗೋಖಲೆಯವರ ದೇಶ ಸೇವಕ ಸಂಘವನ್ನು ಸೇರಿದರು. ದೇಶದಾದ್ಯಂತ ಸಂಚಾರಮಾಡಿ, ಸ್ವರಾಜ್ಯತತ್ತ್ವಕ್ಕಾಗಿ ಪ್ರಚಾರ ನಡಸಿದರು. 1915ರಲ್ಲಿ ಗಾಂಧಿಯವರು ಇಂಡಿಯಕ್ಕೆ ಬಂದಾಗ ಗೋಖಲೆಯವರು ಶಾಸ್ತ್ರಿಗಳನ್ನು ಗಾಂಧಿಯವರಿಗೆ ಕಾರ್ಯದರ್ಶಿಯಂತೆ ಇರಲು ನಿಯಮಿಸಿದರು. ಆಗ ಶಾಸ್ತ್ರಿ ಗಾಂಧಿಗಳಿಗೆ ಪರಸ್ಪರ ಪರಿಜ್ಞಾನವೂ ಬಳಕೆಯೂ ಬೆಳೆದವು. 1918ರಲ್ಲಿ ಮಾಂಟೆಗು ಸುಧಾರಣೆಗಳ ವಿಚಾರದಲ್ಲಿ ಅಭಿಪ್ರಾಯ ಭೇದದ ಕಾರಣದಿಂದ ಶಾಸ್ತ್ರಿಗಳು ಕಾಂಗ್ರೆಸನ್ನು ಬಿಟ್ಟರು. ಆದರೆ ಶಾಸ್ತ್ರಿ ಗಾಂಧಿಗಳು ಒಬ್ಬರನ್ನೊಬ್ಬರು ಎಂದೂ ಬಿಡಲಿಲ್ಲ.

ಶಾಸ್ತ್ರಿಗಳಿಗೂ ಗಾಂಧಿಯವರಿಗೂ ದೇಶ ಸ್ವಾತಂತ್ರ್ಯದ ಆವಶ್ಯಕತೆಯನ್ನು ಕುರಿತು ಅಭಿಪ್ರಾಯ ಬೇರೆಯಾಗಿರಲಿಲ್ಲ. ಅವರಿಗೆ ತಕರಾರಿದ್ದದ್ದು ಸತ್ಯಾಗ್ರಹ ಮಾರ್ಗದ ಉಪಯುಕ್ತತೆಯ ವಿಷಯದಲ್ಲಿ. ಶಾಸ್ತ್ರಿಗಳ ಪ್ರತಿವಾದದ ಮುಖ್ಯಾಂಶಗಳು ಮೂರು.

(1) ಹಟದ ಪ್ರಯತ್ನ ಜನತೆಯನ್ನು ಉದ್ರೇಕಪಡಿಸುತ್ತದೆ. ಅದು ದೊಂಬಿ ದಂಗೆಗೆ ದಾರಿಮಾಡುತ್ತದೆ. ಹಾಗೆ ಅದು ಸರಕಾರದ ಆಗ್ರಹಕ್ಕೆ ನೆವವಾಗುತ್ತದೆ. ಸರಕಾರದ ತಂತ್ರ ಜನವನ್ನು ಇಬ್ಭಾಗವಾಗಿ ಒಡೆಯುತ್ತದೆ. ಈ ರೀತಿಯಲ್ಲಿ ಉದ್ದೇಶಭಂಗವಾಗಿ ಅನಿಷ್ಟ ಒದಗುತ್ತದೆ.

(2) ಕಾನೂನು ಮುರಿಯುವ ಯೋಚನೆಯಿಂದ ಜನಕ್ಕೆ ಶಾಸನ ವಿಧೇಯತೆಯ ಅಭ್ಯಾಸ ತಪ್ಪಿಹೋಗುತ್ತದೆ. ಶಾಸನ ವಿಧೇಯತೆಯೇ ರಾಜ್ಯಕ್ಕೂ ಸಮಾಜಕ್ಕೂ ಇರುವ ಮೊದಲನೆಯ ಬಲ. ಅದನ್ನು ದೇಶ ಕಳೆದುಕೊಂಡರೆ ಮತ್ತೆ ಅದನ್ನು ಸ್ಥಾಪಿಸುವುದು ಕಷ್ಟ. ಎಲ್ಲ ಪ್ರಸಂಗಗಳಿಗೂ ಜನ ಮುಷ್ಕರದ ಶಪಥವನ್ನೇ ಹೊಡಿ ರಗಳೆ ಮಾಡಿಯಾರು. ಅದರಿಂದ ಪ್ರಜಾಜೀವನದ ನೆಮ್ಮದಿಗೆ ಭಂಗ ಬರುತ್ತದೆ.

(3) ಸ್ವಾತಂತ್ರ್ಯಕ್ಕೆ ಒಂದು ತಯಾರಿ ಅವಶ್ಯ. ನಮ್ಮ ಜನತೆ ಅಂಥಾ ಸಿದ್ಧತೆಯನ್ನು ಮಾಡಿಕೊಂಡಿಲ್ಲ. ರಾಜಕೀಯಕ್ಕೆ ಬೇಕಾಗಿರುವ ಶಿಕ್ಷಣವು ಕ್ರಮ ಕ್ರಮವಾದ ಅಭ್ಯಾಸದಿಂದಲೇ ಬರತಕ್ಕದ್ದು, ಆತುರದಿಂದ ನೆನಸಿಕೊಂಡಾಗ ಹುಟ್ಟತಕ್ಕದ್ದಲ್ಲ. ಪ್ರಜಾಸಂಸ್ಥೆಗಳು ನಮಗೆ ರೂಢಿಯಾಗುವುದಕ್ಕೂ ಪ್ರಜಾರಾಜ್ಯ ಪದ್ಧತಿಯ ಮರ್ಯಾದೆಗಳನ್ನು ನಾವು ಕಲಿತುಕೊಳ್ಳುವುದಕ್ಕೂ ಕಾಲಾವಕಾಶ ಬೇಕು. ನಾವು ಅಂತಸ್ತಂತಸ್ತಾಗಿ ಬೆಳೆಯಬೇಕು. ಆ ಆತ್ಮಶಿಕ್ಷಣದಿಂದ ನಮ್ಮ ಒಳ ಸತ್ತ್ವ ಬೆಳೆಯಿತೆಂದರೆ, ಆಗ ಸ್ವಾತಂತ್ರ್ಯ ತಾನಾಗಿ ನಮ್ಮದಾಗುತ್ತದೆ. ಹಾಗಲ್ಲದೆ ಹಠಾತ್ತಾಗಿ ಬಂದ ಸ್ವಾತಂತ್ರ್ಯ ನೆಲಸಿ ನಿಲ್ಲುವುದೂ ಫಲಕ್ಕೆ ಬರುವುದೂ ಕಷ್ಟ.

ಈ ಬಗೆಯದು ಶಾಸ್ತ್ರಿಗಳ ಆಲೋಚನೆ. ಅದರಲ್ಲಿ ತಥ್ಯಾಂಶವಿಲ್ಲದಿಲ್ಲವೆಂಬುದು ನಮ್ಮ ಈಚೀಚಿನ ಅನುಭವದಿಂದ ಸ್ಪಷ್ಟಪಡುತ್ತಿದೆ.

ಶಾಸ್ತ್ರಿಗಳು ಬೀದಿಕೂಗನ್ನು ಭಗವದ್ವಾಣಿಯೆಂದಿದ್ದವರಲ್ಲ. ಜನ ಭ್ರಾಂತಿ ಹೋಗುವುದುಂಟು, ಆವೇಶಾಂಧರಾಗುವುದುಂಟು, ಪ್ರಮಾದವಶರಾಗುವುದುಂಟು. ಆದದ್ದರಿಂದ ಪ್ರಜಾಸಂಖ್ಯೆಯೇ ಪ್ರಮಾಣಶಾಸ್ತ್ರವಾಗಲಾರದು. ನಮಗೆ ಒಂದು ಮೂಲೆಯಿಂದ ಕಾಣಬಂದದ್ದನ್ನು ನಾವು ಇನ್ನೊಂದು ಮೂಲೆಯಿಂದ, ಮತ್ತೊಂದು ಮೂಲೆಯಿಂದ ನೋಡಿ ಪರಿಶೀಲಿಸಬೇಕು. ವಿಮರ್ಶನೆ ಪುನರ್ವಿಮರ್ಶನೆಗಳಿಂದಲೇ ಸತ್ಯಪ್ರಾಪ್ತಿ—ಹೀಗೆಂಬುದು ಶಾಸ್ತ್ರಿಗಳ ಮತ. ಆದಕಾರಣ ಅವರು ಎಲ್ಲವನ್ನೂ ತಳಮುಟ್ಟಿ ಶೋಧಿಸುತ್ತಿದ್ದರು. ಸ್ವಪಕ್ಷ ಪ್ರತಿಪಾದನೆಗೆ ಮುಂಚೆ ಅನ್ಯಪಕ್ಷ ಪರ್ಯಾಲೋಚನೆ ಕರ್ತವ್ಯ ; ಪ್ರತಿಕಕ್ಷಿಯ ವಾದದಲ್ಲಿ ಗುಣವೆಷ್ಟಿದೆ, ಬಲವೆಷ್ಟಿದೆ ಎಂದು ವಿಚಾರ ಮಾಡದೆ ಇರುವ ಕಕ್ಷಿ ಅಪಾಯಕರವೆಂದು ಅವರ ನಂಬಿಕೆ. ಶಾಸ್ತ್ರಿಗಳ ವಿಚಾರಶ್ರದ್ಧೆ ಹೀಗಿದ್ದದ್ದರಿಂದ ಅವರ ಅಭಿಪ್ರಾಯಕ್ಕೆ ಗಾಂಧಿಯವರು ತುಂಬ ಬೆಲೆ ಕೊಡುತ್ತಿದ್ದರು. ಅವರನ್ನು ಕೇಳದೆ ಮಹಾತ್ಮರು ಯಾವ ದೊಡ್ಡ ಪ್ರಯತ್ನಕ್ಕೂ ಮನಸ್ಸು ಮಾಡುತ್ತಿರಲಿಲ್ಲ. ಅವರು ಹೇಳಿದ್ದನ್ನೆಲ್ಲ ಒಪ್ಪಿಕೊಂಡರೋ ?—ಎಂಬ ಪ್ರಶ್ನೆ ತಕ್ಕದ್ದಲ್ಲ. ಇತರರ ಅಭಿಪ್ರಾಯವನ್ನು ಆಲೋಚಿಸಬೇಕೆಂಬುದು ಸಂಗತವೇ ಹೊರತು ಅಂಗೀಕರಿಸಬೇಕೆಂಬುದಲ್ಲ. ಅಂಗೀಕಾರ ಅಂತಸ್ಸಾಕ್ಷಿಯ ತೀರ್ಮಾನದಂತೆ. ಆದರೆ ಆಲೋಚನೆಯಿಲ್ಲದ ತೀರ್ಮಾನ ಕುರುಡು ಹೆಜ್ಜೆಯೇ ಸರಿ. ಗಾಂಧಿಯವರ ಸತ್ಯಪ್ರೀತಿ ಅಂಥಾ ವಿಚಾರಶೂನ್ಯತೆಯನ್ನು ಸಹಿಸುತ್ತಿರಲ್ಲಿಲ್ಲ.

ಸ್ವತಂತ್ರ ವಿಚಾರದ ಜೊತೆಗೆ ವಾಗ್ವಿಶದತೆ ಶಾಸ್ತ್ರಿಗಳಲ್ಲಿ ಸೇರಿತ್ತು. ಪ್ರಶ್ನೆ ಎಷ್ಟು ತೊಡಕಿನದಾಗಿದ್ದರೂ ಅದರ ಗಂಟುಗಳನ್ನು ಸಡಲಿಸಿ ನೂಲಿನ ಎಳೆಗಳನ್ನು ಬಿಡಿಸಿ ತೋರಿಸುವ ಸಾಮರ್ಥ್ಯ ಅವರ ಟೀಕೆಯದು. ನೂಲಿನ ಹೊಕ್ಕುಕೊಂಕುಗಳನ್ನು ತೋರಿಸಿದರೆ ಗಂಟನ್ನು ಬಿಡಿಸುವ ದಾರಿಯನ್ನು ತೋರಿಸಿದಂತೆಯೇ ಅಲ್ಲವೆ ? ಹಾಗೆ ಒಂದು ವಿಷಯದ ಅಂತಸ್ಸ್ವರೂಪವನ್ನು ತೋರಿಸಿಕೊಡಲು ಸೂಕ್ಷ್ಮವಾದ ಬುದ್ಧಿದೃಷ್ಟಿಯ ಜೊತೆಗೆ ವಿವರಣಪಟುವಾದ ವಾಕ್ಸಂಪತ್ತೂ ಸೇರಿರಬೇಕು. ಈ ಸ್ಫುಟೀಕರಣಶಕ್ತಿ ಶಾಸ್ತ್ರಿಗಳ ಪಾಲಿಗೆ ಯಥೇಷ್ಟವಾಗಿ ಬಂದಿತ್ತು. ವಿವಿಧ ಪದಪ್ರಯೋಗದಿಂದಲೂ ವಾಕ್ಯರಚನೆಯ ಕುಶಲತೆಯಿಂದಲೂ ಅವರು ಒಳಗೆ ಗೂಢವಾಗಿ ಅಡಗಿಕೊಂಡಿದ್ದ ಅರ್ಥ ಭಾವಗಳನ್ನು ಹೊರಕ್ಕೆ ತರುತ್ತಿದ್ದರು. ರಾತ್ರಿ ಮಲಗುವ ಕೋಣೆಯಲ್ಲಿ ಮಂಚದ ಕೆಳಗಡೆ ಹಾವಿದೆಯೆಂದು ಭೀತಿ ತೋರಿದಾಗ ನಮಗೆ ಬೇಕಾದ ಉಪಕಾರಿ ದೊಣ್ಣೆ ಹಿಡಿದವನು ಮಾತ್ರವಲ್ಲ, ದೀಪ ಹಿಡಿದವನು ಕೂಡ. ಹಾಗೆ ಬೆಳಕು ಬೀರುತ್ತಿದ್ದವರು ಶಾಸ್ತ್ರಿಗಳು. ಮನುಷ್ಯವ್ಯವಹಾರಗಳಲ್ಲಿ ಪ್ರತಿಯೊಂದು ವಾದಕ್ಕೂ ಇನ್ನೊಂದು ಪಕ್ಕವುಂಟೆಂದು ಹೇಳಿ ಆ ಉಪೇಕ್ಷಿತಾಂಶವನ್ನು ಎತ್ತಿಹಿಡಿಯುತ್ತಿದ್ದದ್ದು ಶಾಸ್ತ್ರಿಗಳ ವಿಶೇಷ ಗುಣ. ಅಂಥಾ ಮನೋಭಾವವನ್ನು "ಕ್ರಾಸ್–ಬೆಂಚ್ ಮೈಂಡ್",—ಅಡ್ಡಪಂಕ್ತಿಯ ಮನಸ್ಸು,—ಎಂದು ಇಂಗ್ಲಿಷಿನಲ್ಲಿ ಕರೆಯುವುದುಂಟು. ಅದು ಪಕ್ಷಾಭಿಮಾನವಿಲ್ಲದ ಮನಸ್ಸು, ನ್ಯಾಯೈಕ ನಿಷ್ಠವಾದ ಮನಸ್ಸು, ಸಕಲ ಪಕ್ಷದರ್ಶಿಯಾದ ಮನಸ್ಸು.

ಶಾಸ್ತ್ರಿಗಳು ಮಂದಗಾಮಿ, ಭೀರು, ಬ್ರಿಟಿಷ್ ಪಕ್ಷಪಾತಿ ಎಂದು ಸ್ವಜನ ಅಪಭಾವನೆ ಮಾಡಿಕೊಂಡು ಉದಾಸೀನರಾದರೆ, ಬ್ರಿಟಿಷರು ಅವರನ್ನು ಕ್ರಯದುರ್ಲಭ, ಸ್ವತಂತ್ರಪಂಥಿ, ಭೇತಾಳೋತ್ಥಾಪಕ—ಎಂದು ಕೈಬಿಟ್ಟರು. ರೌಂಡ್ ಟೇಬಲ್ ಕಾನ್ಫರೆನ್ಸ್ ಎಂಬ ಸರ್ವಪಕ್ಷ ಸಮ್ಮೇಲನದ ಎರಡನೆಯ ಮೂರನೆಯ ಅಧಿವೇಶನಗಳಿಗೆ ಶಾಸ್ತ್ರಿಗಳನ್ನು ಬ್ರಿಟಿಷ್ ಸರಕಾರ ಕರೆಯಲಿಲ್ಲ ; ಅವರಿಗೆ ಆರೋಗ್ಯವಿಲ್ಲದ್ದರಿಂದ ಅವರಿಗೆ ತೊಂದರೆ ಕೊಡತಕ್ಕದ್ದಲ್ಲವೆಂದು ಕುಂಟು ನೆವ ಹೇಳಿತು. ಜನಬಲವಿಲ್ಲದ ರಾಜಕೀಯಸ್ಥನನ್ನು ಸರಕಾರ ಏಕೆ ಒಲಿಸಿಕೊಳ್ಳಬೇಕು ? ಅಂಥವನಿಂದ ಏನು ಪ್ರಯೋಜನವಾದೀತು ? ಶಾಸ್ತ್ರಿಗಳು ಕುಟಿಲವನ್ನು ಭೇದಿಸಿ ತೋರಿಸುವುದರಲ್ಲಿ ಚತುರರು. ಅವರೂ ಗಾಂಧಿಯವರೂ ಒಂದಾಗಿ ಕೈಗೂಡಿಸಿದರೆ ಗತಿಯೇನು ? ಹೀಗೆ ನಡೆಯಿತು ಬ್ರಿಟಿಷರ ಆಲೋಚನೆ.

ಶ್ರೀನಿವಾಸಶಾಸ್ತ್ರಿಗಳು ಸಾಹಿತ್ಯದಲ್ಲಿರಬೇಕಾಗಿದ್ದವರು, ಮರೆವಿನಲ್ಲಿ ರಾಜಕೀಯಕ್ಕೆ ಕಾಲಿಟ್ಟರು—ಎಂದು ಅವರ ಸ್ನೇಹಿತರನೇಕರು ಹೇಳುತ್ತಿದ್ದದ್ದುಂಟು. ಎಂದರೆ, ಶಾಸ್ತ್ರಿಗಳ ಸ್ವಭಾವದಲ್ಲಿ ಪ್ರಧಾನಾಂಶ ಕಾವ್ಯದ್ದು ಎಂದು ತಾತ್ಪರ್ಯ. ಅವರ ಮನಸ್ಸಿನ ಸೈಜವಾದ ಅಭಿರುಚಿ ರಾಮಾಯಣದಲ್ಲಿ, ಭಾರತದಲ್ಲಿ, ವಿಶ್ವಸಾಹಿತ್ಯದಲ್ಲಿ. ಅವರು ಒಂದು ಸಾರಿ ಕಾಯಿಲೆ ಬಿದ್ದು ಬೆಂಗಳೂರಿಗೆ ಬಂದಾಗ ಹೊತ್ತುಕಳೆಯಲು ಓದುವುದಕ್ಕೆ ಯಾವುದಾದರೂ ಪುಸ್ತಕ ಬೇಕೆಂದರು. ನಾನು ಆಗ ಓದುತ್ತಿದ್ದ ನಾಟಕ ಕಥೆ ಚರಿತ್ರೆಗಳನ್ನು ಅವರ ಮುಂದಿರಿಸಿದೆ. ಅವರು “ಇದೆಲ್ಲಾ ನನಗೆ ಬೇಡ ಸಾರ್, ಒಂದು ಷೇಕ್ಸ್‌ಪಿಯರ್ ಸಂಪುಟ, ಒಂದು ಕಾಳಿದಾಸ ಸಂಪುಟ—ಇವೆರಡಿದ್ದರೆ ಸಾಕು” ಎಂದರು. ಶ್ರೀಮದ್ರಾಮಾಯಣ ಅವರು ಪದೇ ಪದೇ ಓದುತ್ತಿದ್ದ ಗ್ರಂಥ. ಅವರ ತಂದೆಗಳು ರಾಮಾಯಣ ಪುರಾಣ ಹೇಳಿ ಪ್ರಸಿದ್ಧರಾಗಿದ್ದವರು. ರಾಮಾಯಣದ ಬಹುಭಾಗ ಶ್ರೀನಿವಾಸಶಾಸ್ತ್ರಿಗಳಿಗೆ ಮುಖಸ್ಥವಾಗಿತ್ತು. ರಾಜಕೀಯದಲ್ಲಿ ಅವರ ಕೀರ್ತಿ ಹೇಗಾದರಿರಲಿ, ಅವರು 1944ರಲ್ಲಿ—ಸಾವಿಗೆ ಎರಡು ವರ್ಷ ಮುಂಚೆ—ರಾಮಾಯಣದ ವ್ಯಕ್ತಿವಿಭೂತಿಗಳನ್ನು ಕುರಿತು ಕೊಟ್ಟ (ಇಂಗ್ಲಿಷ್) ಉಪನ್ಯಾಸಗಳು ಅವರ ಹೆಸರಿಗೆ ಸಾಹಿತ್ಯ ಸೀಮೆಯಲ್ಲಿ ಉನ್ನತವೂ ಸ್ಥಿರವೂ ಆದ ಸ್ಥಾನವನ್ನು ಸಂಪಾದಿಸಿವೆ. ಅಷ್ಟು ಹೃದಯರಂಜಕವಾಗಿ, ಮರ್ಮದ್ಯೋತಕವಾಗಿ, ಸ್ಫೂರ್ತಿಪ್ರದವಾಗಿ ಇದೆ ಅವರ ವ್ಯಾಖ್ಯಾನ ಸರಣಿ.

ಅವರ ಸಂಸ್ಕೃತ ಕಾವ್ಯಪರಿಚಯು ವಿಸ್ತಾರವಾದದ್ದು. ವಿದ್ವದೌಷಧವೆನಿಸಿದ ನೈಷಧದಿಂದ ರಸಿಕ ರಸಾಯನವಾದ ಕೃಷ್ಣಕರ್ಣಾಮೃತದವರೆಗೆ ನಾನಾ ಅಂತಸ್ತುಗಳ ಕಾವ್ಯರಸವನ್ನೂ ಅವರು ಸವಿದಿದ್ದರು. ಬೆಳಗಿನ ವ್ಯಾಯಾಮ ಸಂಚಾರದಲ್ಲಿ, ಸಂಜೆಯ ಹಗುರದ ಹರಟೆಯಲ್ಲಿ, ಬೆಳ್ದಿಂಗಳಿನ ಭೋಜನ ವಿಹಾರದಲ್ಲಿ ಇಷ್ಟಮಿತ್ರರಿಗೆ ಕಾವ್ಯರಸಪಾನ ಮಾಡಿಸುತ್ತಿದ್ದರು. ಲಾಲ್‌ಬಾಗ್ ಉದ್ಯಾನವನದಲ್ಲಿ ತಿರುಗಾಡುವಾಗ ಜಿಂಕೆಗಳ ರೋಮಂಥ, ಅಶೋಕಮರದಿಂದಾಗುವ ಸಶೋಕತ್ವ, ಮಾಧ್ವೀಲತೆಯ ಲಲಿತಗರ್ವ—ಇವುಗಳನ್ನು ವರ್ಣಿಸುವ ಪದ್ಯಗಳನ್ನು ಜ್ಞಾಪಕಕ್ಕೆ ತಂದುಕೊಡುತ್ತಿದ್ದರು.

ಒಂದು ದಿನ (30–1–1930) ಸಾರ್ವಜನಿಕ ಜೀವನದ ಮರ್ಯಾದೆಗಳನ್ನು ಕುರಿತು ಪ್ರಸ್ತಾವ ಬಂತು. ಸಾಮಾನ್ಯವಾಗಿ ಬಹು ಮಂದಿ ಸ್ವಾನುಕೂಲಕ್ಕಾಗಿ ಆಗಾಗ ಬದಲಾಯಿಸುವವರೇ. ಒಂದು ವ್ರತದಲ್ಲಿ ನಿಶ್ಚಲವಾಗಿ ನಿಲ್ಲುವವರು ಅಲ್ಲೊಬ್ಬರು ಇಲ್ಲೊಬ್ಬರು. ಈ ದೃಢವ್ರತರೇ ಆದರ್ಶಪುರುಷರು. ಈ ರೀತಿ ಮಾತು ಬಂದಾಗ ಶಾಸ್ತ್ರಿಗಳು ಭವಭೂತಿಯ—

ಪುರಾ ಯತ್ರ ಸ್ರೋತಃ ಪುಲಿನಮಧುನಾ ತತ್ರ ಸರಿತಾಂ।
ವಿಪರ್ಯಾಸಂ ಯಾತೇ ಘನವಿರಲಭಾವಃ ಕ್ಷಿತಿರುಹಾಮ್॥
ಬಹೋರ್ದೃಷ್ಟಂ ಕಾಲಾದಪರಮಿವ ಮನ್ಯೇ ವನಮಿದಂ।
ನಿವೇಶಶ್ಶೈಲಾನಾಂ ತದಿದಮಿತಿ ಬುದ್ಧಿಂ ದ್ರಢಯತಿ॥

ಮಣಲೀಗಳ್ ಪರಪಿರ್ಪುದಂದು ನದಿಸಾಗಿರ್ದತ್ತ ಮತ್ತಾ ತರಂ-।
ಗಿಣಿ ಪೋಯ್ತೆತ್ತಲೊ ತೆಳ್ಪುದಟ್ಟ ಬನದೊಳ್ ಮಾರಿರ್ಪುವಿಂತೀ ವಿವ॥
ರ್ತನೆಯಿಂದೀಯೆಡೆ ದೀರ್ಘಕಾಲಗತಿಯಿಂ ಕಣ್ಗೇನೊ ಬೇರೆನ್ನಿಸಲ್।
ಮನಕೀ ದೇಶಮದೆಂಬುದಂ ಸ್ಥಿರಗೊಳಿಕ್ಕುಂ ಶೈಲಪಂಕ್ತಿಧ್ರುವಂ॥

ಪದ್ಯವನ್ನುದಾಹರಿಸಿ, ಪಂಡಿತಧೋರಣೆಯಲ್ಲಿ ವ್ಯಾಖ್ಯಾನಕ್ಕಿಳಿದರು.

ಸಂಸ್ಕೃತದಲ್ಲಿ ಹತ್ತುನಿಮಿಷ ವಾಕ್ಯಾರ್ಥವಾಯಿತು. ಸಮಾಸೋಕ್ತಿಯೇ ಕಾವ್ಯದಲ್ಲಿ ಧ್ವನಿಯ ಉತ್ತಮ ಪ್ರಕಾರವೆಂದು ಸಿದ್ಧಾಂತ ಮಾಡಿದರು.

ಭವಭೂತಿ ಸಾಮಾನ್ಯವಾಗಿ ಬರಿಯ ಪಂಡಿತ ; ನಿಘಂಟು ವ್ಯಾಕರಣಗಳಲ್ಲಿ ನಿಸ್ಸೀಮ. ಆದರೆ ಒಂದೊಂದು ಸಲ—ಪ್ರಕೃತ ಪದ್ಯದಲ್ಲಿ ತೋರುವಂತೆ—ಆತ ತನ್ನ ಸಣ್ಣ ಸೀಮೆಯನ್ನು ದಾಟಿ ಉನ್ನತವಾದ ಕಾವ್ಯರಾಜ್ಯದ ಸೀಮೆಯೊಳಕ್ಕೆ ಕಾಲಿಡುತ್ತಾನೆ. ಅದರ ಸೊಗಸೇ ಸೊಗಸು. ಹೀಗೆ ಅರ್ಧಘಂಟೆ ಕಾವ್ಯತತ್ತ್ವ ನಿರೂಪಣೆಯಾದ ಮೇಲೆ, ವ್ರತನಿಷ್ಠರಾದ ಧೀರರೇ ಸಮಾಜದ ಸತ್ತ್ವನಿಧಿ ; ಅವರ ಪ್ರಭಾವದಿಂದ ಜನತೆಗೆ ಸಂಪತ್ತು ಸಮಾಧಾನಗಳು ; ನ್ಯಾಯನಡೆಯುವರು ಅಂಥಾ ಮಹಾಪುರುಷರು—ಎಂದು ಸಿದ್ಧಾಂತವಾಯಿತು.

ಇನ್ನೊಂದು ದಿವಸ ವಿರೋಧಾಭಾಸವೆಂಬ ಅಲಂಕಾರದ ಸ್ವರೂಪ, ಅದರ ಪ್ರಭೇದಗಳಿಗೆ ಉದಾಹರಣೆಗಳು ; ಮತ್ತೊಂದು ದಿನ ಅಪ್ರಸ್ತುತ ಪ್ರಶಂಸೆಗೂ ಅಪಹ್ನುತಿಗೂ ಇರುವ ವ್ಯತ್ಯಾಸಗಳು ; ಮಗುದೊಂದು ದಿನ ಅಪ್ಪಯ್ಯ ದೀಕ್ಷಿತರಿಗೂ ಜಗನ್ನಾಥ ಪಂಡಿತರಿಗೂ ಇದ್ದ ಮತಭೇದ ; ಬಳಿಕೊಂದು ದಿನ ಆಖ್ಯಾಶತಕ ದಲ್ಲಿಯ ಅಪೂರ್ವ ವ್ಯಾಕರಣ ಪ್ರಯೋಗಗಳು—ಹೀಗೆ ಸಾಗುತ್ತಿತ್ತು ಆ ಉಪನ್ಯಾಸ ಧಾರೆ. ಶಾಸ್ತ್ರಿಗಳಿಗೆ ಕಾಳಿದಾಸನ ಅರ್ಥಾಂತರನ್ಯಾಸದಲ್ಲಿ ಹೆಚ್ಚು ಸಂತೋಷ. ಸಂದರ್ಭ ಬಂದಾಗಲೆಲ್ಲ ಕಾಳಿದಾಸೋಕ್ತಿಯನ್ನೋ ರಾಮಾಯಣ ಭಾರತಗಳ ಪ್ರಸಂಗಗಳನ್ನೋ ನೆನಪಿಗೆ ತರುತ್ತಿದ್ದರು. ಮತ್ತು ಸಂಸ್ಕೃತ ಕಾವ್ಯದಲ್ಲಿ ಹೇಗೋ

ಇಂಗ್ಲಿಷ್ ಕಾವ್ಯದಲ್ಲಿಯೂ ಹಾಗೆಯೇ ಉತ್ಸಾಹ. ಈಚೀಚಿನ ಕವಿಗಳಾದ ಮೆರೆಡಿತ್, ಹಾರ್ಡೀಗಳ ಪದ್ಯ ಕಥಾಕೃತಿಗಳ ರುಚಿಯನ್ನು ಸಹ ಅವರು ಸವಿದು ಸಂತೋಷಿಸಿದ್ದರು. ಒಂದು ದಿನ ಒಬ್ಬ ಸ್ನೇಹಿತರ ಮನೆಯಲ್ಲಿ ಔತಣ; ಊಟಕ್ಕಾಗಿ ಕೊಂಚ ಹೊತ್ತು ಕಾಯಬೇಕಾಯಿತು. ಅಲ್ಲಿದ್ದ ಪುಸ್ತಕದ ಕಪಾಟಿನಿಂದ ಒಂದನ್ನು ನಾನು ಈಚೆಗೆ ಸೆಳೆದೆ. ಅದು ವರ್ಡ್ಸ್‌ವರ್ತ್ ಕವಿಯ ಕಾವ್ಯಸಂಗ್ರಹ. ಶಾಸ್ತ್ರಿಗಳು ಆ ಸಂಗ್ರಹದಲ್ಲಿ Happy Warrior ಇದೆಯೆ? ಎಂದು ವಿಚಾರಿಸಿದರು. ನಾನು "ನೋಡಿ ಹೇಳುತ್ತೇನೆ" ಎಂದೆ. ಅವರು "Happy Warrior ಇಲ್ಲದ್ದು ಎಂಥ ಸಂಗ್ರಹ?" ಎಂದರು. ಒಬ್ಬ ಮಿತ್ರರು—"ಅದು ಅಷ್ಟು ಸ್ವಾರಸ್ಯವೆ?" ಎಂದು ಕೇಳಿದರು. ಶಾಸ್ತ್ರಿಗಳು ಜ್ಞಾಪಕದಿಂದಲೇ ಪದ್ಯವನ್ನು ನುಡಿಯಲಾರಂಭಿಸಿದರು. ಪುಸ್ತಕ ನನ್ನ ಕೈಯಲ್ಲೇ ಇತ್ತು. ಅವರ ಅಕ್ಷರೋಚ್ಚಾರಣೆ, ಅವರ ಸ್ವರಗೌರವದ ಹಂಚಿಕೆ, ಅವರ ಧ್ವನಿಯ ಏರಿಳಿತ, ಆ ವಾಕ್ಯಧಾರೆಯ ಧೋರಣೆ—ಇವುಗಳಿಂದ ಕಾವ್ಯಭಾವ ನಮ್ಮ ಮನಸ್ಸಿಗೆ ತಾನಾಗಿ ಸ್ಫುರಿಸಿ, ಎಲ್ಲರೂ ಒಂದು ಘಳಿಗೆ ಮೂಕರಾಗಿದ್ದೆವು.

ಶಾಸ್ತ್ರಿಗಳ ಕಥನ ವಿಧಾನ, ಅವರ ವರ್ಣನ ಕುಶಲತೆ, ಅವರ ಶಬ್ದಾಚಿತ್ಯ ಮತ್ತು ಅವರ ವಾಕ್ಯಬಂಧ—ಇವು ಮೋಹಕವಾದವು. ಭಾಷಣಕಾಲದಲ್ಲಿ ಅವರು ಅಂಗವಿಕಾರ ಮಾಡುತ್ತಿದ್ದವರಲ್ಲ. ಒಂದು ಸಂಗತಿಯನ್ನು ಒತ್ತಿ ಹೇಳಬೇಕೆನಿಸಿದಾಗ ಅಪರೂಪವಾಗಿ ತರ್ಜನೀ ಬೆರಳನ್ನು ಎತ್ತಿಹಿಡಿಯುತ್ತಿದ್ದರು, ಅಷ್ಟೆ. ಅವರ ಮನಸ್ಸಿನ ವೇಗವನ್ನು ಕಣ್ಣಿನ ಹೊಳಪು, ಹುಬ್ಬಿನ ಗಂಟು, ಒಂದೊಂದು ಸಲ ತಲೆ-ಕೊಂಕು—ಇವು ತೋರಿಸುತ್ತಿದ್ದವು. ವಾಕ್ಯಪ್ರವಾಹದಲ್ಲಿ ವಿಷಯದ ಗಾಂಭೀರ್ಯವೇ ದೊಡ್ಡದಾಗಿ ಚಿತ್ತವನ್ನು ಸ್ವಾಧೀನಪಡಿಸಿಕೊಳ್ಳುತ್ತಿತ್ತು. ನಡುನಡುವೆ ಧ್ವನಿತ ಮಾತ್ರವಾದ ಮೃದು ಹಾಸ್ಯ ಇಣಿಕಿ ಕಾಣಿಸಿಕೊಳ್ಳುತ್ತಿದ್ದದ್ದು ಚಿತ್ತದ ಪ್ರಯಾಸವನ್ನು ಮರೆಯಿಸಿ ಉತ್ಸಾಹವನ್ನು ಬೆಳಸಲು ಸಾಧಕವಾಗುತ್ತಿತ್ತು.

ಇಂಗ್ಲಿಷಿನಲ್ಲಿ ಹೇಗೋ, ತಮಿಳಿನಲ್ಲಿಯೂ ಹಾಗೆಯೇ ಶಾಸ್ತ್ರಿಗಳ ಭಾಷಣ ಲೇಖನಗಳು ಆಕರ್ಷಕವಾಗಿದ್ದವೆಂದು ಕೇಳಿದ್ದೇನೆ. ಅವರು ತಮಿಳಿನಲ್ಲಿ ಉಪನ್ಯಾಸ ಕೊಡಲು ಮೊದಲು ಮಾಡಿದ್ದು ಕಡೆಯ 8–10 ವರ್ಷಗಳಿಂದೀಚೆಗೆ. ಅದೂ ಆಗ ಒಂದು ಸಲ ಈಗ ಒಂದು ಸಲ. ಅವರು ತಮಿಳಿನಲ್ಲಿ ಕೆಲವು ಸಣ್ಣ ಕಥೆಗಳನ್ನೂ ಪ್ರವಾಸ ದೃಶ್ಯಗಳನ್ನೂ ಬರೆದಿದ್ದಾರೆ. ಬಂಗಾಳದಲ್ಲಿ ದೇಶಪರ್ಯಟನ ಮಾಡಿದಾಗ ತಮಗಾದ ಅನುಭವಗಳನ್ನೂ ತಾವು ಅಲ್ಲಿ ನೋಡಿದ ಮಹನೀಯರ ರೂಪರೇಖೆಗಳನ್ನೂ ಓದುಗರಿಗೆ ಪ್ರತ್ಯಕ್ಷವೆನಿಸುವಂತೆ ಚಿತ್ರಿಸಿದ್ದಾರೆ.

ಶಾಸ್ತ್ರಿಗಳು ಸಂಗೀತದಲ್ಲಿ ಭಾವಪಕ್ಷಪಾತಿ. ತಾಳಗತಿ ಸ್ವರಸಂಗತಿಗಳಿಗಿಂತ ರಾಗದ ವಿನ್ಯಾಸ ಅವರಿಗೆ ಹೆಚ್ಚು ಇಷ್ಟವಾದದ್ದು. ಸಾವೇರಿ, ಧನ್ಯಾಸಿ, ದರ್ಬಾರು, ಮೋಹನ, ಯದುಕುಲ ಕಾಂಭೋಜಿ—ಇವು ಅವರಿಗೆ ಪ್ರಿಯವಾದ ಕೆಲವು. ಅವರು ಅಣ್ಣಾಮಲೆ ನಗರದಲ್ಲಿ ವೈಸ್‌ಚಾನ್ಸೆಲರಾಗಿದ್ದಾಗ ಒಂದು ಸಾರಿ ಹೃದಯ ಶೂಲೆ ಜೋರಾಗಿ

ಬಂತು. ವೈದ್ಯರು ಅಲ್ಲಿಗೆ 4–5 ಮೈಲಿ ದೂರದಲ್ಲಿದ್ದರು. ಅವರನ್ನು ಕರೆತರಲು ಮೋಟಾರು ಕಾರನ್ನು ಕಳುಹಿಸಿ ನಾನು ಶಾಸ್ತ್ರಿಗಳ ಬಳಿ ನಿಂತು, ಬೇರೇನು ಮಾಡಲೂ ತಿಳಿಯದೆ, ಕೈಕಾಲು ಸವರುತ್ತಿದ್ದೆ. ಅವರಿಗೆ ಪ್ರಜ್ಞೆಯಿದ್ದಂತೆಯೇ ತೋರಲಿಲ್ಲ. ಕಡೆಯ ಘಳಿಗೆ ಬಂತೇನೋ ಎಂದು ನನ್ನ ಮನಸ್ಸಿನಲ್ಲಿ ಭೀತಿಯಾಗಿತ್ತು. ಶಾಸ್ತ್ರಿಗಳು ಗಾನಪ್ರಿಯರು ; ಅದರಿಂದಲಾದರೂ ಅವರನ್ನು ಬದುಕಿಸಲಾದೀತೇನೋ ಎಂದು ಕೊಂಡು, ನಾನು ಅಲ್ಲಿದ್ದ ಅನಸೂಯಮ್ಮನವರನ್ನು ಕರೆದು—"ಒಂದೆರಡು ಗ್ರಾಮಾಫೋನ್ ರಿಕಾರ್ಡ್ ಹಾಕಿ, ನೋಡೋಣ" ಎಂದೆ. ಆಕೆ ಹಾಗೆ ಮಾಡಿದರು. ಎರಡು ಪ್ಲೇಟು ಮುಗಿದ ಮೇಲೆ ಮೂರನೆಯದು—

"ಪಾಹಿ ರಾಮಚಂದ್ರ ರಾಘವಾ"

ಅದು ಮುಸುರಿ ಸುಬ್ರಹ್ಮಣ್ಯಯ್ಯರು ಹಾಡಿದ್ದದ್ದು, ತ್ಯಾಗರಾಜ ಕೀರ್ತನೆ, ಯದುಕುಲ ಕಾಂಭೋಜಿ ರಾಗ. ಯಂತ್ರದಿಂದ ಹಾಡಿಕೆ ಸಾಗುತ್ತಿದ್ದಾಗ ನಾನು ಶಾಸ್ತ್ರಿಗಳ ಮುಖದ ಮೇಲೆಯೇ ದೃಷ್ಟಿ ನಿಲ್ಲಿಸಿದ್ದೆ. ಹಾಡಿನ ಕಡೆಯ ಚರಣ—

"ರಾಜರಾಜ ಪೂಜಿತ ಪ್ರಭೋ—ಹರೇ ತ್ಯಾಗ-
ರಾಜ ರಾಜ ರಾಘವಪ್ರಭೋ"

ಇದು ಮುಗಿಯುವ ವೇಳೆಗೆ ಶಾಸ್ತ್ರಿಗಳ ತುಟಿಯಿಂದ ಏನೋ ಮಾತು ಹೊರಟಂತೆ ತೋರಿತು. ಕಿವಿಗೊಟ್ಟು ಆಲಿಸಿದೆ. "ಅದೇ ಇನ್ನೊಂದು ಸಲ ಬೇಕು". —ಎಂದುಸಿರಿದರು. ಅದೇ ಹಾಡನ್ನೇ ಮತ್ತೊಮ್ಮೆ ಹಾಕಿದರು ಅನಸೂಯಮ್ಮ. ಮತ್ತೆ ಕಡೆಯ ಚರಣ ಬರುವ ವೇಳೆಗೆ ಕಣ್ಣಲ್ಲಿ ಹನಿಗೂಡಿದ್ದದ್ದು ನಮಗೆ ಮಾತ್ರವಲ್ಲ, ಅವರಿಗೂ. ಮೂರನೆಯ ಸಾರಿ ಕಡೆಯ ನುಡಿ ಬಂದಾಗ ಶಾಸ್ತ್ರಿಗಳು—"ಸಾರ್, ನನ್ನ ಕೊನೆಯ ಘಳಿಗೆ ಬಂದಾಗ ಇದೇ ನನ್ನ ಕಿವಿಯಲ್ಲಿರಬೇಕು" ಎಂದರು. ಆ ವೇಳೆಗೆ ಡಾಕ್ಟರು ಬಂದರು. ಶಾಸ್ತ್ರಿಗಳು ಚೇತರಿಸಿಕೊಂಡರು.

ಒಂದು ಸಾರಿ—ಬಹುಶಃ 1929ರಲ್ಲಿ—ಶಾಸ್ತ್ರಿಗಳು ಬೆಂಗಳೂರಿನಲ್ಲಿ ಎರಡು ಮೂರು ತಿಂಗಳು ವಾಸಮಾಡುವ ಉದ್ದೇಶದಿಂದ ಮನೆಯೊಂದನ್ನು ಗೊತ್ತು ಮಾಡಬೇಕೆಂದು ನನಗೆ ಕಾಗದ ಬರೆದರು. ನಾನು 4–5 ಮನೆಗಳ ಬೀದಿಯ ಹೆಗ್ಗುರುತು ಗಳನ್ನೂ, ಬಾಡಿಗೆ ಮೊದಲಾದ ವಿವರ ಸಂಗತಿಗಳನ್ನೂ ತಿಳಿಸಿ, ಅವರ ತೀರ್ಮಾನ ವನ್ನು ಕೇಳಿ ಕಾಗದ ಬರೆದೆ. ಅವರ ಪ್ರತ್ಯುತ್ತರದ ಸರಣಿ ಇದು :—

"ನಿನ್ನ ಪಟ್ಟಿಯಲ್ಲಿ ನಾಲ್ಕನೆಯ ಮನೆ ಲಾಲ್‌ಬಾಗಿಗೆ ಹತ್ತಿರವಿದೆ ಎನ್ನುತ್ತಿ. ಇನ್ನು ಬೇಕಾದದ್ದೇನು ? ಆ ಮನೆಗೆ ಕೆಟ್ಟ ಹೆಸರು ಬಂದಿದೆ ಎನ್ನುತ್ತಿ. (ಅದನ್ನು ಕಟ್ಟಿಸಿದಾತ ಅದು ಹೊಸದಾಗಿದ್ದಾಗಲೇ ಅದರ ಬಾವಿಯಿಂದ ನೀರು ಸೇದ ಹೊರಟು ಕಾಲೆಡವಿಯೋ ತಲೆತಿರುಗಿಯೋ ಒಳಕ್ಕೆ ಉರುಳಿ ಮುಳುಗಿಹೋದ.) ನಾನು ರೋಗಿಯೆಂಬುದು ಲೋಕಕ್ಕೇ ಗೊತ್ತಿದೆ. ನಾನು ಅದರಲ್ಲಿ ಸತ್ತರೆ ನನ್ನ ರೋಗಕ್ಕೆ

ಇನ್ನಷ್ಟು ಅಪಕೀರ್ತಿ. ನಾನು ಅಲ್ಲಿ ಬದುಕಿದರೆ ಆ ಮನೆಯ ಅಪಕೀರ್ತಿ ತೊಲಗಿ ಅದಕ್ಕೆ ಒಳ್ಳೆಯ ಕೀರ್ತಿ ಬರುತ್ತದೆ. ಇದಕ್ಕಿಂತ ಯುಕ್ತವಾದ ಯೋಚನೆಯೊಂದಿದೆ. ಆ ಮನೆಯ ಸೊತ್ತುಗಾತಿ ತೀರಾ ಕಷ್ಟದಲ್ಲಿದ್ದಾರೆಂದು ಹೇಳುತ್ತಿ. (ಆ ಮನೆ ಕಟ್ಟಿದಾತ ದೊಡ್ಡ ಸರಕಾರೀ ಚಾಕರಿಯಲ್ಲಿದ್ದವ. ಅದು ಚೆನ್ನಾಗಿ ಬಾಳಿದ ಕುಟುಂಬ. ಆತ ಸತ್ತ ಮೇಲೆ ಆತನ ಹೆಂಡತಿ ಮೂವರು ಚಿಕ್ಕ ಹುಡುಗರು ಉಳಿದಿದ್ದರು.) ಮನೆಯ ಬಾಡಿಗೆಯೊಂದೇ ಅವರಿಗೆ ಇರುವ ಜೀವಿಕೆ ಎನ್ನುತ್ತಿ. ಅದೇ ಧ್ವನಿಯಲ್ಲಿಯೇ ಆ ಮನೆ ಯಾವುದೋ ಬ್ಯಾಂಕಿಗೆ ಅಡಮಾನವಾಗಿದೆಯೆಂದೂ ಬ್ಯಾಂಕಿನ ಅಧಿಕಾರಿಗೆ ಶಿಫಾರಸು ಹೇಳಿಸಿದರೆ ಬಾಡಿಗೆ ಇಳಿಸಲಾದೀತೆಂದೂ ಸಲಹೆ ಕೊಡುತ್ತಿ. ಅಂಥಾ ಕುಟುಂಬಕ್ಕೆ ನಮ್ಮಿಂದಾದಷ್ಟು ಸಹಾಯ ಮಾಡಬೇಕಲ್ಲವೆ ? ಬಾಡಿಗೆ ಇಳಿಸುವ ಮಾತು ಬೇಡ. ಬಾಡಿಗೆಯ ಒಂದು ಭಾಗ ಮನೆಯ ಮಾಲೀಕಳಿಗೆ ಸೇರುತ್ತದೆ ಯಲ್ಲವೆ ? ಆ ಭಾಗ ಹೆಚ್ಚಾಗಿರಲಿ. ಆ ಕುಟುಂಬಕ್ಕೆ ಊಟ ಸಿಕ್ಕಲಿ. ಅದೇ ಮನೆಯನ್ನು ಗೊತ್ತುಮಾಡು."

ಇದು ಶಾಸ್ತ್ರಿಗಳ ಹೃದಯ. ಅದರ ಮೂಲಗುಣ ಮಾನವ ಸಹಾನುಭೂತಿ—ಪುಣ್ಯಕರ್ಮಿಗೆ ಮೆಚ್ಚಿಕೆ, ಪಾಪಿಗೆ ಮರುಕ. ಶಾಸ್ತ್ರಿಗಳ ಶಿಷ್ಯಾಭಿಮಾನ, ಮಿತ್ರಪ್ರೀತಿ, ಕುಟುಂಬ ವಾತ್ಸಲ್ಯ, ಕಾವ್ಯೋತ್ಸಾಹ, ದೇಶಭಕ್ತಿ, ನೀತಿನಿಷ್ಠೆ, ಧರ್ಮಚಿಂತನೆ—ಇವೆಲ್ಲ ಆ ಮಾನವ ಸಹಾನುಭೂತಿಯ ನಾನಾ ರೂಪಗಳು. ಅವರಿಗೆ ಅತ್ಯಂತ ಪ್ರಿಯವಾಗಿದ್ದ ಶ್ಲೋಕ ಇದು :

**ಯಂ ಪಾಲಯಸಿ ಧರ್ಮಂ ತ್ವಂ ।**
**ಧೃತ್ಯಾ ಚ ನಿಯಮೇನ ಚ ॥**
**ಸ ವೈ ರಾಘವಶಾರ್ದೂಲ ।**
**ಧರ್ಮಸ್ತ್ವಾಮಭಿರಕ್ಷತು ॥**

# ದಾದಾಭಾಯಿ ನವರೋಜಿ*

ನಿಮ್ಮಲ್ಲಿ ಗಾಂಧಿಯವರ ಹೆಸರನ್ನರಿಯದವರು ಯಾರೂ ಇರಲಾರರಲ್ಲವೆ ? ನಮ್ಮ ದೇಶವನ್ನು ಪರದೇಶದ ಹಿಡಿತದಿಂದ ಬಿಡಿಸಿ ಸ್ವತಂತ್ರ ಮಾಡಿದವರು ಮಹಾತ್ಮ ಗಾಂಧಿಯವರು. ಗಾಂಧಿಯವರ ಗುರು ಗೋಖಲೆ. ಆ ಗೋಖಲೆಗೆ ಗುರುವೆನಿಸಿದ್ದವರು ದಾದಾಭಾಯಿ ನವರೋಜಿ. ಹೀಗೆ ನಮಗೆಲ್ಲ ದಾದಾಭಾಯಿ ಮಹಾಗುರುವು.

ದಾದಾಭಾಯಿ ಪಾರಸೀ ಕುಲದವರು. ಅವರ ಮೂಲ ಪುರುಷರು ಪರ್ಷಿಯಾ ದೇಶದಲ್ಲಿದ್ದವರು. ಅವರು ಸರೋಷ್ಟ್ರ ಎಂಬ ಭಗವದ್ವಾದಿಯ ಪಂಥಕ್ಕೆ ಸೇರಿದವರು. ಅವರ ಪರಮ ದೈವ ಅಗ್ನಿ. ಈ ಅಗ್ನಿಪೂಜಕರ ಪೂರ್ವಿಕರೂ ಇಂಡಿಯದ ಹಿಂದೂ ಆರ್ಯರ ಪೂರ್ವಿಕರೂ ಅನೇಕ ಸಹಸ್ರ ವರ್ಷಗಳ ಹಿಂದೆ ಒಂದೇ ಬುಡಕಟ್ಟಿನವ ರಾಗಿದ್ದಿರಬೇಕೆಂದು ಹಲವಂದಿ ವಿದ್ವಾಂಸರು ಹೇಳುತ್ತಾರೆ. ಅದು ಹೇಗಾದರಿರಲಿ ಈಗಿಗೆ ಹಲವು ನೂರು ವರ್ಷಗಳ ಹಿಂದೆ ಆ ಪಾರಸೀ ಕುಲಸ್ಥರು ಕೆಲವು ರಾಜಕೀಯ ಕಾರಣಗಳಿಂದ ಇಂಡಿಯಕ್ಕೆ ವಲಸೆ ಬಂದು ಪಶ್ಚಿಮ ಸಮುದ್ರ ತೀರದಲ್ಲಿ ನೆಲಸಿದರು. ಅಂದಿನಿಂದ ಅವರು ಈ ದೇಶವನ್ನು ಮಾತೃಭೂಮಿಯೆಂದಂಗೀಕರಿಸಿ, ಇಲ್ಲಿಯ ಇತರ ಜನದೊಡನೆ ಒಂದು ಕುಟುಂಬವಾಗಿ ಏಕೀಭವಿಸಿ ಬಾಳಿಕೊಂಡಿದ್ದಾರೆ. ಈ ಪಾರಸಿಕರ ಮುಖ್ಯವೃತ್ತಿ ವ್ಯಾಪಾರ. ಅವರು ಹಣವಂತರೆಂದೂ ದಾನಧರ್ಮ ಶೀಲರೆಂದೂ ಹೆಸರುವಾಸಿಯಾದವರು. ಬೆಂಗಳೂರಿನಲ್ಲಿರುವ ಪ್ರಸಿದ್ಧವಾದ ವಿಜ್ಞಾನ ಸಂಸ್ಥೆಯನ್ನು ಸ್ಥಾಪನೆ ಮಾಡಿಸಿದವರು ಆ ಕುಲದವರೇ ಆದ ತಾತಾ ಅವರು.

ದಾದಾಭಾಯಿ ಆ ಕುಲದ ವೈದಿಕ ಪಂಗಡಕ್ಕೆ ಸೇರಿದ್ದವರು. ಅವರು ಹುಟ್ಟಿದ ಊರು ಬೊಂಬಾಯಿ ಪ್ರಾಂತದ ಬರೋಡ ಬಳಿಯ ನವಸಾರಿ. ಅವರು ಹುಟ್ಟಿದ್ದು ಇಂದಿಗೆ 132 ವರ್ಷಗಳ ಹಿಂದೆ, ಗತಿಸಿದ್ದು 40 ವರ್ಷಗಳ ಹಿಂದೆ. ಅವರ ಬಾಲ್ಯದಲ್ಲಿ ಯೂನಿವರ್ಸಿಟಿಗಳು ಇರಲಿಲ್ಲ. ಆಗ ಇಂಗ್ಲಿಷ್ ವಿದ್ಯಾಪ್ರಚಾರ ಇನ್ನೂ ಪ್ರಾರಂಭ ವಾಗುವುದರಲ್ಲಿತ್ತು. ಆ ಹೊಸ ವಿದ್ಯೆಯನ್ನು ಕಲಿತ ಭಾರತೀಯರ ಪ್ರಥಮ

* 4–9–1957 ರಂದು ಬೆಂಗಳೂರು ‘ಆಕಾಶವಾಣಿ’ಯಿಂದ ಪ್ರಸಾರವಾದ ಭಾಷಣ.

ಪಂಕ್ತಿಗೆ ಸೇರಿದವರು ದಾದಾಭಾಯಿ. ಆತನ ಚಿಕ್ಕಂದಿನಲ್ಲಿಯೇ ತಂದೆ ತೀರಿಕೊಂಡರು. ತಾಯಿ ಸೋದರಮಾವಂದಿರ ಪೋಷಣೆಯಲ್ಲಿ ಆತ ಬೆಳೆದು, ಬಾಲ ವಿದ್ಯಾಭ್ಯಾಸವನ್ನು ನವಸಾರಿಯಲ್ಲಿ ಮುಗಿಸಿ. ಮುಂದಿನ ವಿದ್ಯೆಗಾಗಿ ಬೊಂಬಾಯಿಗೆ ಬಂದ. ಆಗ ಆತನಿಗೆ 14–15 ವರ್ಷ. ಅಲ್ಲಿ ಆತ ಓದಿದ ಶಾಲೆ ಈಗ ಎಲ್‌ಫಿನ್‌ಸ್ಟನ್ ಕಾಲೇಜ್ ಎಂದು ಹೆಸರಾಗಿದೆ. ಅಲ್ಲಿ ಆತ ವಿದ್ಯಾರ್ಥಿವೇತನ ಸಂಪಾದಿಸಿಕೊಂಡಿದ್ದ. ಅಲ್ಲಿಯ ಪರೀಕ್ಷೆಯಲ್ಲಿ ತೇರ್ಗಡೆಯಾದ ಬಳಿಕ ಆತನನ್ನು ಇಂಗ್ಲೆಂಡಿಗೆ ಕಳುಹಿಸಬೇಕೆಂಬ ಸೂಚನೆಯೂ ಆ ಬಗ್ಗೆ ದ್ರವ್ಯಸಹಾಯದ ವಾಗ್ದಾನವೂ ಒಬ್ಬ ಇಂಗ್ಲಿಷ್ ದೊಡ್ಡ ಮನುಷ್ಯನಿಂದ ಬಂತು. ಆದರೆ ಆ ಕಾಲದಲ್ಲಿ ಕ್ರಿಶ್ಚಿಯನ್ ಪಾದರಿಗಳು ಉಪಾಯ ಮಾಡಿ ಇತರ ಮತಸ್ಥರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳತಕ್ಕವರೆಂಬ ಭೀತಿ ಸಾಮಾನ್ಯವಾಗಿತ್ತು. ಪಾರಸೀ ಜನಕ್ಕೂ ಆ ಹೆದರಿಕೆ ಇತ್ತು. ದಾದಾಭಾಯಿ ಇನ್ನೂ ಬಾಲಕನಾಗಿದ್ದದ್ದರಿಂದ ಎಲ್ಲಿ ಪಾದರಿಗಳ ಬಲೆಗೆ ಬಿದ್ದಾನೋ ಎಂದು ಪಾರಸೀ ಸಮಾಜ ಹೆದರಿ ಆತನ ವಿಲಾಯಿತಿ ಪ್ರಯಾಣಕ್ಕೆ ಸಮ್ಮತಿ ಕೊಡಲಿಲ್ಲ. ದಾದಾಭಾಯಿಯ ಬುದ್ಧಿಯೋಗ್ಯತೆಯನ್ನು ಮೆಚ್ಚಿದ್ದ ಅಧಿಕಾರಿಗಳು ಆತನನ್ನು ಆತನು ಓದಿದ ಶಾಲೆಯಲ್ಲಿಯೇ ಪ್ರೊಫೆಸರ್ ಪದವಿಗೆ ನಿಯಮಿಸಿಕೊಂಡರು.

ಹೀಗೆ ಒಂದು ಕಡೆ ಸಮಾಜದಲ್ಲಿ ಮನ್ನಣೆ ದೊರೆತು ಜೀವನವೃತ್ತಿ ಕುದುರಿಕೊಳ್ಳುತ್ತಿದ್ದಾಗ ಇನ್ನೊಂದು ಕಡೆ ದೇಶವಿಚಾರದ ಚಿಂತೆ ದಾದಾಭಾಯಿಯ ಮನಸ್ಸನ್ನು ಕೊರೆಯುತ್ತಿತ್ತು. ಆತನಿಗಾಗಿದ್ದ ಅನುಭವದಲ್ಲಿಯೇ ಅದಕ್ಕೆ ಕಾರಣವಿತ್ತು. ಆಗಿನ ಪ್ರಶ್ನೆಗಳು ಮುಖ್ಯವಾಗಿ ನಾಲ್ಕು : (1) ಜನದಲ್ಲಿ ನೂತನ ವಿದ್ಯೆ ಹರಡಲು ಸೌಕರ್ಯವಿಲ್ಲದೆ ಇದ್ದದ್ದು. (2) ಮಾಮೂಲು ಪದ್ಧತಿಗಳಲ್ಲಿಯೂ ಭಾವನೆಗಳಲ್ಲಿಯೂ ಜನಕ್ಕಿದ್ದ ಮೂಢ ವಿಶ್ವಾಸ. (3) ದೇಶದಲ್ಲಿ ಯಂತ್ರ ಕಾರ್ಖಾನೆಗಳೂ ಹೊಸ ಹೊಸ ಉದ್ಯೋಗಗಳೂ ಹುಟ್ಟಿಕೊಳ್ಳದೆ, ಇದ್ದ ಕೊಂಚ ಸಂಪತ್ತು ವ್ಯಾಪಾರದ ಮೂಲಕ ಅನ್ಯದೇಶಗಳಿಗೆ ಸಾಗಿಹೋಗುತ್ತಿದ್ದದ್ದು. (4) ಇವೆಲ್ಲಕ್ಕೂ ಮೂಲವಾಗಿ ದೇಶದ ರಾಜಕೀಯ ಪರದೇಶಕ್ಕೆ ಕೈವಶವಾಗಿದ್ದದ್ದು. ಈ ಕಷ್ಟ ಕೊರತೆಗಳ ನಿವಾರಣೆಗಾಗಿ ಮಾರ್ಗಗಳನ್ನು ಯೋಚಿಸಿ ಕಾರ್ಯ ನಡೆಸಲು ದಾದಾ ಅವರು ಹಲವು ರೀತಿಗಳಲ್ಲಿ ಪ್ರಯತ್ನಪಟ್ಟರು. ಜನಸಾಮಾನ್ಯಕ್ಕಾಗಿ ಪಾಠಶಾಲೆಗಳು, ಸ್ತ್ರೀವಿದ್ಯಾಭ್ಯಾಸಕ್ಕೆ ವಿಶೇಷ ಪ್ರೋತ್ಸಾಹ, ಸಾಹಿತ್ಯ ವಿಜ್ಞಾನಗಳ ವ್ಯಾಸಂಗಕ್ಕಾಗಿ ಸಂಘಗಳು, ಸಮಾಜ ಪರಿಷ್ಕಾರ ಪ್ರಚಾರಕ್ಕಾಗಿ ಪತ್ರಿಕೆಗಳು—ಈ ನಾನಾ ತರದ ಸಾರ್ವಜನಿಕ ಕಾರ್ಯಗಳಿಗೆ ಅವಶ್ಯವಾದ ಜನಸಹಾಯವನ್ನೂ ಧನಸಹಾಯವನ್ನೂ ದಾದಾ ಅವರು ಸಂಪಾದಿಸಿ ಅನೇಕ ಸಂಸ್ಥೆಗಳನ್ನು ಕಟ್ಟಿ ಸ್ವಂತ ಶ್ರಮದಿಂದಲೂ ಆಸಕ್ತಿಯಿಂದಲೂ ನಡೆಸಿದರು.

1855ರಲ್ಲಿ ಅವರು ಇಂಗ್ಲೆಂಡಿಗೆ ಹೋಗಿ ಅಲ್ಲಿ ನಿಲ್ಲುವ ಅವಕಾಶ ಉಂಟಾಯಿತು. ಇಂಗ್ಲೆಂಡಿನ ವಿಜ್ಞಾನಪ್ರಭಾವವನ್ನೂ ವಾಣಿಜ್ಯ ಮಹತ್ತ್ವವನ್ನೂ ಜೀವನ ವಿತರಣೆಯನ್ನೂ ಪ್ರತ್ಯಕ್ಷವಾಗಿ ನೋಡಿ ತಿಳಿದುಕೊಳ್ಳಬೇಕೆಂಬ ಆಲೋಚನೆ ದಾದಾರವರಿಗೆ

ಸ್ವಾಭಾವಿಕವಾಗಿತ್ತು. ಹಾಗೆಯೇ ತಮ್ಮ ದೇಶದ ಸ್ಥಿತಿಗತಿಗಳನ್ನು ಕುರಿತು ಅಲ್ಲಿ ಪ್ರಚಾರ ನಡಸಬೇಕೆಂದೂ ಯೋಚನೆಯಿತ್ತು. ಇದಕ್ಕೆ ಅನುಕೂಲವಾಗುವಂತೆ "**ಕಾವಾ**" ಎಂಬ ಪಾರಸೀ ಮನೆತನದ ವ್ಯಾಪಾರದ ಮಳಿಗೆ ಇಂಗ್ಲೆಂಡಿನಲ್ಲಿ ಪ್ರಾರಂಭವಾಯಿತು, ಅದರಲ್ಲಿ ದಾದಾ ಅವರು ಉದ್ಯೋಗ ಪಡೆದು ಲಂಡನ್ನಿನಲ್ಲಿ ನೆಲಸಿದರು. ಆದರೆ ಕೊಂಚ ಕಾಲದ ತರುವಾಯ ಆ ಸಂಸ್ಥೆಯಲ್ಲಿ ಕೆಲವು ವರ್ತಕ ನೀತಿಯ ಪ್ರಶ್ನೆಗಳೆದ್ದು, ಭಿನ್ನಾಭಿಪ್ರಾಯದ ಕಾರಣದಿಂದ ದಾದಾ ಆ ಉದ್ಯೋಗಕ್ಕೆ ರಾಜೀನಾಮೆ ಕೊಟ್ಟದ್ದಾಯಿತು. ಕೆಲವು ದಿವಸ ಕಳೆದ ಮೇಲೆ ಅವರು ಸ್ವಂತ ವಾಗಿಯೇ ವ್ಯಾಪಾರವನ್ನಾರಂಭಿಸಿದರು. ಅದು ಯೂರೋಪಿನಲ್ಲೂ ಅಮೆರಿಕ ದಲ್ಲೂ ಯುದ್ಧಗಳ ಕಾಲ. ಆದದ್ದರಿಂದ ವ್ಯಾಪಾರ ಚೆನ್ನಾಗಿ ನಡೆಯಿತು. ಬಂದ ಲಾಭದಲ್ಲಿ ಬಹ್ವಂಶವನ್ನು ದಾದಾಭಾಯಿ ಧರ್ಮಕಾರ್ಯಗಳಿಗಾಗಿ ಮುಡುಪು ಮಾಡಿ ದರು. ಆದರೆ ಕೆಲವು ಕಾಲದ ಮೇಲೆ ಯುದ್ಧ ನಿಂತಾಗ ವ್ಯಾಪಾರ ತಗ್ಗಿ ನಷ್ಟ ಒದಗಿತು. ಸುಮಾರು 1891ರಲ್ಲಿ ದಾದಾ ಮಳಿಗೆ ಮುಚ್ಚಿದ್ದಾಯಿತು.

ಏತನ್ಮಧ್ಯೆ, 1856ರಲ್ಲಿ, ದಾದಾರವರಿಗೆ ಲಂಡನ್ ವಿಶ್ವವಿದ್ಯಾಲಯದಲ್ಲಿ ಗುಜರಾತೀ ಪ್ರೊಫೆಸರ್ ಪದವಿ ದೊರೆಯಿತು. ಹತ್ತು ವರ್ಷ ಅವರು ಆ ಕೆಲಸ ದಲ್ಲಿದ್ದರು.

ಇದೆಲ್ಲ ಆದದ್ದು ಈಗ್ಗೆ ಒಂದು ನೂರು ವರ್ಷಗಳ ಹಿಂದೆ, ಎಂಬುದನ್ನು ನಾವು ನೆನಪಿನಲ್ಲಿರಿಸಿಕೊಳ್ಳಬೇಕು. ಅದು ಇಂಡಿಯದಲ್ಲಿ ಸಿಪಾಯಿದಂಗೆ ಎದ್ದ ಕಾಲ. ಆ ದಂಗೆಯ ಫಲಿತಾಂಶವಾಗಿ ಇಂಡಿಯದ ರಾಜ್ಯಭಾರವನ್ನು ಬ್ರಿಟಿಷ್ ಚಕ್ರವರ್ತಿನಿ ವಿಕ್ಟೋರಿಯಾ ರಾಣಿ ವಹಿಸಿಕೊಂಡು, ಇಂಡಿಯದ ಜನತೆಗೆ ಒಂದು ಭರವಸೆಯ ಉದ್ಘೋಷಣೆಯನ್ನು ಮಾಡಿಸಿದಳಷ್ಟೆ? ಆ ಘೋಷಣೆಯನ್ನು ಆಧಾರವಾಗಿರಿಸಿ ಕೊಂಡು ನಮ್ಮ ರಾಜಕೀಯದಲ್ಲಿ ಪ್ರಗತಿ ಸಾಧಿಸಬೇಕಾದದ್ದೆಂದು ದಾದಾಬಾಯಿ ನಿರ್ಧರಿಸಿದರು.

ಇಂಡಿಯ ಸರ್ಕಾರದ ಆಡಳಿತಗಳು ಹೇಗೆ ರಾಣಿಯ ಉದ್ಘೋಷಣೆಗೆ ತಕ್ಕಂತಿಲ್ಲ, ಜನಕ್ಕೆ ಏನೇನು ಅಸಮಾಧಾನಗಳಿವೆ, ಅವರ ಯೋಗಕ್ಷೇಮಗಳಿಗೋಸ್ಕರ ಸರಕಾರ ಏನೇನು ಮಾಡಬೇಕಾಗಿದೆ—ಈ ವಿಚಾರಗಳನ್ನು ಕುರಿತು ದಾದಾ ಅವರು ಆಗಾಗ ಇಂಗ್ಲೆಂಡಿನ ಪತ್ರಿಕೆಗಳಲ್ಲಿ ಲೇಖನಗಳನ್ನು ಪ್ರಕಟಮಾಡಿಸಿದರು, ಅಲ್ಲಿಯ ಸಾರ್ವಜನಿಕ ಸಭೆಗಳಲ್ಲಿ ಭಾಷಣಮಾಡಿದರು. ಇದರಿಂದ ಬ್ರಿಟಿಷ್ ಜನಕ್ಕೆ ಇಂಡಿಯದ ನಿಜವಾದ ವಿದ್ಯಮಾನಗಳು ತಿಳಿಯುವಂತಾಯಿತು, ದಾದಾ ಅವರ ಹೆಸರೂ ಯೋಗ್ಯತೆಯೂ ಪ್ರಕಾಶಕ್ಕೆ ಬಂದವು.

1870ರಲ್ಲಿ ದಾದಾಭಾಯಿ ಸ್ವದೇಶಕ್ಕೆ ಬಂದಿದ್ದರು. ಆಗ್ಗೆ ಇಲ್ಲಿಯ ಬರೋಡ ಸಂಸ್ಥಾನದ ಸಂದರ್ಭಗಳು ವಿಷಮಿಸಿಕೊಂಡಿದ್ದವು. ರಾಜ ಮೂರ್ಖನಾಗಿದ್ದ. ಸರಕಾರ ಎಷ್ಟೆಷ್ಟು ಕೊಳೆಯುಬಹುದೋ ಅಷ್ಟು ಕೊಳೆತಿತ್ತು; ಬ್ರಿಟಿಷ್ ಸರಕಾರ

ರಾಜನಲ್ಲಿ ಆಗ್ರಹಪಟ್ಟಿತ್ತು. ಅಂಥ ಸಂದರ್ಭದಲ್ಲಿ ರಾಜನು ದಾದಾಭಾಯಿಯಿಂದ ತನ್ನ ಕಷ್ಟ ಪರಿಹಾರವಾದೀತೆಂದು ನಿರೀಕ್ಷಿಸಿ ದಾದಾ ಅವರನ್ನು ದಿವಾನ್ ಪದವಿಗೆ ಕರೆದು ನಿಯಮಿಸಿದ. ಆದರದು ಹೆಚ್ಚು ದಿವಸ ನಡೆಯಲಿಲ್ಲ. ದಾದಾ ಅವರಂಥ ನ್ಯಾಯನಿಷ್ಠರಿಗೂ ಆ ಮೂರ್ಖರಾಜನಿಗೂ ಸರಿಹೊಂದಿಕೆ ಹೇಗೆ ಸಾಧ್ಯ ? ಬರೋಡದಿಂದ ಹಿಂತಿರುಗಿದ ಮೇಲೆ 1875ರಲ್ಲಿ ದಾದಾ ಅವರು ಬೊಂಬಾಯಿ Corporation ಎಂಬ ಪೌರಸಂಸ್ಥೆಯ ಸದಸ್ಯರಾಗಿ ಚುನಾಯಿಸಲ್ಪಟ್ಟು ಕೆಲವು ಕಾಲ ಆ ಮಹಾ ಪಟ್ಟಣದ ಸಾರ್ವಜನಿಕ ಜೀವನವನ್ನು ಕಟ್ಟಲು ಶ್ರಮಿಸಿದರು. ಉಪನ್ಯಾಸ ಕೊಟ್ಟರು, ಪತ್ರಿಕೆಗಳಲ್ಲಿ ಟೀಕಿಸಿದರು, ಜನದಲ್ಲಿ ಜಾಗೃತಿಯುಂಟಾಯಿತು.

ಇಂಡಿಯದಲ್ಲಿ ಎಷ್ಟು ಶ್ರಮಪಟ್ಟರೂ ಅದು ಸಾರ್ಥಕವಾಗಬೇಕಾದರೆ, ಇಂಗ್ಲೆಂಡಿನಲ್ಲಿ ಕೆಲಸ ನಡೆಯಬೇಕು. ಇಂಡಿಯಾ ರಾಜಕೀಯಕ್ಕೆ ಬೀಗದ ಕೈ ಇರುವುದು ಇಂಗ್ಲೆಂಡಿನಲ್ಲಿ. ಇಂಗ್ಲೆಂಡಿನ ಸರಕಾರದ ಕೀಲು ಇರುವುದು ಪಾರ್ಲಿಮೆಂಟಿನಲ್ಲಿ. ಆದದ್ದರಿಂದ ಯಾರು ಇಂಗ್ಲೆಂಡಿನ ಪಾರ್ಲಿಮೆಂಟ್ ಸಭೆಯಲ್ಲಿ ನಿಂತು ಇಂಡಿಯದ ಪರವಾಗಿ ಮಾತನಾಡುತ್ತಾನೋ ಅವನು ಇಂಡಿಯಾ ಸರಕಾರವನ್ನು ಸರಿಪಡಿಸಲು ಸಮರ್ಥನಾಗುತ್ತಾನೆ. ಹೀಗೆ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಜಾಗ ಸಂಪಾದಿಸಿಕೊಳ್ಳುವುದು ತನಗೆ ದೇಶದೃಷ್ಟಿಯಿಂದ ಮುಖ್ಯಕರ್ತವ್ಯ ಎಂದು ದಾದಾ ನಿರ್ಣಯ ಮಾಡಿಕೊಂಡನು. ಅದರಂತೆ ಆತನು 1886ರಲ್ಲಿ ಇಂಗ್ಲೆಂಡಿಗೆ ಹಿಂದಿರುಗಿ ತಕ್ಕ ಸನ್ನಾಹ ನಡಸಿದನು. ಮೊದಲು ಹಾಲ್‌ಬರ್ನ್ ಎಂಬ ಚುನಾವಣೆಯ ಕ್ಷೇತ್ರದಲ್ಲಿ ಉಮೇದು ಮಾಡಿದನು. ಅದು ಫಲಕ್ಕೆ ಬರಲಿಲ್ಲ. ಬಳಿಕ ಫಿನ್ಸ್‌ಬರಿ ಕ್ಷೇತ್ರದಿಂದ ನಿಂತು ಜಯಶೀಲನಾದನು. ಅದು 1886ರ ಜುಲೈ 6ರಂದು. ಇಂಡಿಯಾ ದೇಶ ಹೊರಪ್ರಪಂಚದಲ್ಲಿ ಗೆದ್ದ ಗೆಲುವುಗಳಲ್ಲಿ ಅದು ಮೊದಲನೆಯದು. ಸ್ವಾಮಿ ವಿವೇಕಾನಂದರು ಅಮೆರಿಕದ ಚಿಕಾಗೋವಿನಲ್ಲಿ ಪಡೆದ ಜಯ ಎರಡನೆಯದು. ಅಲ್ಲಿಂದೀಚೆಗೆ ಹಲವು ಜಯಗಳು. ಯಾವ ಜನ ಇಂಡಿಯಕ್ಕೆ ರಾಜನಾಗಿತ್ತೋ, ಯಾರು ಭಾರತೀಯರನ್ನು ಅಸಭ್ಯರೆಂದೂ ಅಸಮರ್ಥರೆಂದೂ ಭಾವಿಸಿದ್ದರೋ ಅಂಥ ಬ್ರಿಟಿಷ್ ಮಹಾಜನರು ತಮ್ಮ ಪ್ರತಿನಿಧಿಯಾಗಿರಲು ಈ ಭಾರತೀಯನು ತಕ್ಕವನು—ಅಂಥ ಪ್ರಾಮಾಣಿಕ, ಅಂಥ ಬುದ್ಧಿವಂತ, ಅಂಥ ನ್ಯಾಯಶೀಲ, ಅಂಥ ದೊಡ್ಡಮನುಷ್ಯ—ಎಂದು ಹೇಳುವಂತೆ ಮಾಡಿದ್ದು ದಾದಾಭಾಯಿಯ ಯೋಗ್ಯತೆಗೆ ದೃಷ್ಟಾಂತ, ಅದು ಆತನ ದೇಶಕ್ಕೇ ಗೌರವ.

ಈ ವೇಳೆಗೆ ನಮ್ಮ ನ್ಯಾಷನಲ್ ಕಾಂಗ್ರೆಸ್ ಹುಟ್ಟಿ ತಲೆಯೆತ್ತಿತ್ತು. ದಾದಾಭಾಯಿಯವರು ಆ ಸಮಾರಂಭದಲ್ಲಿ ಮೊದಲಿನಿಂದ ಸೇರಿದ್ದರು. ಅವರು ಕಾಂಗ್ರೆಸ್ಸಿಗೆ ಮೂರು ಸಲ ಅಧ್ಯಕ್ಷರಾಗಿದ್ದರು. "ಸ್ವರಾಜ್ಯ" ಎಂಬ ಪದ ಮೊದಲು ಪ್ರಚುರವಾದದ್ದು ಅವರ 1906ರ ಅಧ್ಯಕ್ಷ ಭಾಷಣದಿಂದ. ಭಾರತೀಯರ ಸಮಸ್ತ ರಾಜಕೀಯ ಮನೋಗತಗಳೂ ನ್ಯಾಯನೀತಿಗಳೂ "ಸ್ವರಾಜ್ಯ" ಶಬ್ದದಲ್ಲಿ ಅಡಕವಾಗಿವೆಯೆಂದು ದಾದಾ ಅವರು ಸಾರಿದರು. ಬಾಲಗಂಗಾಧರ ತಿಲಕ್ ಮೊದಲಾಗಿ ಎಲ್ಲ ಜನನಾಯಕರೂ ಅದನ್ನಂಗೀಕರಿಸಿದರು.

ದಾದಾಭಾಯಿಯವರು ತಮ್ಮ 92 ವರ್ಷಗಳ ಜೀವಿತಕಾಲದಲ್ಲಿ ಅರ್ಧ ಶತಮಾನಕ್ಕಿಂತ ಹೆಚ್ಚಿನ ಭಾಗವನ್ನು ಸ್ವರಾಜ್ಯ ಪ್ರಯತ್ನಕ್ಕೆ ಧಾರೆಯೆರೆದರು. ಆ ಪ್ರಯತ್ನದ ಫಲಿತಾಂಶವಾಗಿ ಬಂದದ್ದು ಬ್ರಿಟಿಷರ ಜವಾಬ್ದಾರಿ ಸರಕಾರದ ಪದ್ಧತಿಯ ವಾಗ್ದಾನ. 1917ರಲ್ಲಿ ಬ್ರಿಟಿಷ್ ಮಂತ್ರಿ ಮಾಂಟೆಗೊ ಎಂಬಾತನು ಪಾರ್ಲಿಮೆಂಟಿನಲ್ಲಿ ಸರಕಾರದ ಪರವಾಗಿ ಒಪ್ಪಿಸಿದ ನಿರೂಪದಲ್ಲಿ—"ಇಂಡಿಯಾದ ಬಗ್ಗೆ ಬ್ರಿಟಿಷ್ ಸರಕಾರದ ರಾಜ್ಯನೀತಿಯ ಗುರಿ ಆ ದೇಶದಲ್ಲಿ ಕ್ರಮಕ್ರಮವಾಗಿ ಉತ್ತರಬಾಧ್ಯ ಸರಕಾರವನ್ನು ಸ್ಥಾಪಿಸುವುದು, ಮತ್ತು ಅದಕ್ಕನುಗುಣವಾಗಿ ಸರಕಾರದ ಯಂತ್ರವನ್ನು ಪರಿಷ್ಕಾರಪಡಿಸುವುದು"—ಎಂದು ಸ್ಪಷ್ಟವಾಗಿ ನುಡಿದನು. ಅದೇ ನಮ್ಮ ದೇಶದಲ್ಲಿ ಪಾರ್ಲಿಮೆಂಟರಿ ಪದ್ಧತಿಗೆ ಅಂಕುರಾರ್ಪಣೆ. ಹೀಗೆ ದಾದಾಭಾಯಿಯನ್ನು ಭಾರತಸ್ವರಾಜ್ಯದ ಮೂಲಪುರುಷನೆಂದೂ ಸ್ವತಂತ್ರ ಭಾರತದ ಪಿತಾಮಹನೆಂದೂ ಕರೆಯುವುದು ಉತ್ಪ್ರೇಕ್ಷೆಯಲ್ಲ.

ದಾದಾಭಾಯಿಯವರ ನೀತಿಗುಣರಾಶಿಯಲ್ಲಿ ಶಿಖರವಾದವು ಮೂರು : ಸತ್ಯನಿಷ್ಠೆ, ವಿನಯ, ಆತ್ಮಶುದ್ಧಿ. ಅವರು ಯಾವ ವಿಷಯವನ್ನು ಮನಸ್ಸಿಗೆ ತೆಗೆದುಕೊಂಡರೂ ಅದಕ್ಕೆ ಸಂಬಂಧಪಟ್ಟ ಎಲ್ಲ ಸಂಗತಿಗಳನ್ನೂ ಸಂಗ್ರಹಿಸಿ ಪರೀಕ್ಷಿಸಿದ ಹೊರತು, ಮತ್ತು ಅದರ ನಾನಾ ಪಕ್ಷಗಳನ್ನು ತಿಳಿದುಕೊಂಡು ವಿಮರ್ಶೆ ಮಾಡಿದ ಹೊರತು ಅವನ್ನು ಕುರಿತು ಮಾತನಾಡುತ್ತಿರಲಿಲ್ಲ. ಅವರಾಡಿದ ಪ್ರತಿಯೊಂದು ಮಾತಿಗೂ ಆಧಾರಸಾಮಗ್ರಿ ಬಲವಾಗಿರುತ್ತಿತ್ತು. ಆದದ್ದರಿಂದ ಅವರ ವಾದವನ್ನು ತಳ್ಳಿಹಾಕುವುದು ಯಾರಿಗೂ ಸಾಧ್ಯವಿರಲಿಲ್ಲ.

ಅವರ ಮಾತಿನಲ್ಲಿ ಅತಿವಾದಗಳು ಕಾಣುತ್ತಿರಲಿಲ್ಲ. ಮಾತು ಸರಳವಾಗಿ, ಆಡಂಬರವಿಲ್ಲದೆ, ಮರ್ಯಾದೆಯಿಂದ ಬರುತ್ತಿತ್ತು. ಅದು ಬಲವಿಲ್ಲದ್ದೆಂದಲ್ಲ ; ಕಾರ್ಯಕಾರಿಯಾಗುವ ಶಕ್ತಿ ಅದರಲ್ಲಿರುತ್ತಿತ್ತು ; ಆದರೆ ರೋಷ ಹುಟ್ಟಿಸುವ ಉಗ್ರತೆ ಅದರಲ್ಲಿ ಇರಲಿಲ್ಲ. ಉಗ್ರತೆ ದಾದಾ ಅವರ ಸ್ವಭಾವದಲ್ಲಿರಲಿಲ್ಲ.

ಅವರು ಜೀವನದ ಕಷ್ಟನಿಷ್ಠುರಗಳನ್ನು ಅನುಭವಿಸಿದ್ದವರು. ಬಡತನವನ್ನು ಸ್ವಯಂ ಆಗಿ ಕಂಡಿದ್ದರು. ರೋಗ–ವಿಯೋಗಗಳನ್ನು ಪಟ್ಟಿದ್ದರು. ಅಪಜಯವನ್ನೂ ನಷ್ಟವನ್ನೂ ಹೊತ್ತಿದ್ದರು. ಹೀಗೆ ಅವರ ಹೃದಯ ಮೃದುವಾಗಿತ್ತು. ಕಷ್ಟಕಾರ್ಪಣ್ಯಗಳಿಂದ ಮನಸ್ಸು ರೋಸಿ ರಟ್ಟುಕಟ್ಟುವುದೂ ಲೋಭಕ್ರೋಧಗಳು ಹೆಚ್ಚುವುದೂ ಲೋಕದಲ್ಲುಂಟು. ಆದರೆ ದಾದಾ ಅವರಲ್ಲಿ ಅದು ಹಾಗಾಗದೆ ಪ್ರೀತಿಕಾರಕವಾಯಿತು. ಇದು ಅವರ ಸ್ವಭಾವದಲ್ಲಿದ್ದ ವಿಶೇಷ ಲಕ್ಷಣ.

ಅವರು ಸರ್ವಸುಲಭರು. ಲಂಡನ್ನಿನಲ್ಲಿ ಅವರ ಮನೆ ಎಲ್ಲ ಭಾರತೀಯರಿಗೂ ಸ್ವಂತ ಮನೆಯಂತೆ ಇತ್ತು. ಗಾಂಧಿಯವರು ಹೀಗೆ ಹೇಳಿದ್ದಾರೆ—"Indian students had free access to the G.O.M. at all hours of the day.

Indeed he was in the place of father to everyone of them, no matter to which province or religion they belonged. He was there to advise and guide them in their difficulties. I have always been a hero-worshipper. And so Dadabhai became real Dada to me."

ದಾದಾ ಅವರು ನಿರ್ಮಲರು. ಒಳಗಾಗಲಿ ಹೊರಗಾಗಲಿ ಯಾವ ಕೊಳಕಿಗೂ ಅವರಲ್ಲಿ ಅವಕಾಶವಿರಲಿಲ್ಲ. ಆಹಾರ–ವಿಹಾರಗಳಲ್ಲಿ ಅವರು ನೇಮಿಷ್ಠರು. ಮಾದಕ ಪದಾರ್ಥಗಳೂ ಹೊಗೆಯ ಸೊಪ್ಪಿನ ದಶಾವತಾರಗಳೂ ಅವರ ಬಳಿ ಎಂದೂ ಸುಳಿದಾಡಿರಲಿಲ್ಲ. ಅವರು ಹುಟ್ಟಿನಲ್ಲಿ ವೈದಿಕರೆಂದು ಹೇಳಿದೆನಷ್ಟೆ ? ಆ ಸಂಪ್ರದಾಯವನ್ನು ಅವರು ಕಡೆಯವರೆಗೂ ಕಾಪಾಡಿಕೊಂಡಿದ್ದರು. ಮಹನೀಯರಾದ ರಾನಡೆಯವರು ದಾದಾಭಾಯಿಯನ್ನು ಋಷಿಕಲ್ಪರೆಂದು ಕರೆದರು. ಗೋಖಲೆಯವರು ಅದೇ ಭಕ್ತಿಯನ್ನಿರಿಸಿಕೊಂಡಿದ್ದರು. ಅವರು ದಾದಾಭಾಯಿ ಜೀವಿತ ಚರಿತ್ರೆಯನ್ನು ಬರೆಯುವ ಉದ್ದೇಶ ಉಳ್ಳವರಾಗಿದ್ದರು. ಅದು ನೆರವೇರಿದ್ದಿದ್ದರೆ ನಮ್ಮ ಸಾಹಿತ್ಯ ಭಂಡಾರದಲ್ಲಿ ಒಂದು ಅಮೂಲ್ಯ ರತ್ನ ಸೇರಿರುತ್ತಿತ್ತು.

# ಜಾನ್ ಸ್ಟೂಅರ್ಟ್ ಮಿಲ್*

ಇಂಡಿಯದ ಕಾಂಗ್ರೆಸ್ ಸಭೆ 1905ರಲ್ಲಿ ಕಾಶಿಯಲ್ಲಿ ಸೇರಿತ್ತು. ಅಧ್ಯಕ್ಷರು ಗೋಖಲೆಯವರು. ನಮ್ಮ ದೇಶ ಆ ಕಾಲದಲ್ಲಿ ಬ್ರಿಟನ್ ರಾಜ್ಯದ ವಶದಲ್ಲಿತ್ತಷ್ಟೆ? ಬ್ರಿಟಿಷ್ ಸರಕಾರದಲ್ಲಿ ಮಾರ್ಲೆ ಎಂಬವರು ಆಗತಾನೆ ಇಂಡಿಯಾ ವಿಚಾರದ ಮಂತ್ರಿ ಪದವಿಗೆ ಬಂದಿದ್ದರು. ಆ ಮಾರ್ಲೇಯವರಿಂದ ಇಂಡಿಯಕ್ಕೆ ಉಪಕಾರವಾಗುವ ಭರವಸೆ ತಮಗುಂಟೆಂದು ಗೋಖಲೆಯವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ತಿಳಿಸಿದರು. ಅವರ ಆ ಶುಭನಿರೀಕ್ಷೆಗೆ ಕಾರಣವೇನೆಂದರೆ ಆ ಮಾರ್ಲೇಯವರು ಮಿಲ್ ಎಂಬ ಪ್ರಸಿದ್ಧ ತತ್ತ್ವವಿಚಾರಿಯ ಶಿಷ್ಯರಾಗಿದ್ದ ಸಂಗತಿ. ಆ ಮಿಲ್ ಎಂಬಾತನು ರಾಜಕೀಯ ಸಾಮಾಜಿಕ ವ್ಯವಸ್ಥೆಗಳಲ್ಲಿ ಪ್ರಗತಿಯ ಭಾವನೆ ಉಳ್ಳವನು; ಆತನದು ವಿಶಾಲದೃಷ್ಟಿ, ಉದಾರ ನೀತಿ; ಅಂಥ ಮಹನೀಯನ ತತ್ತ್ವೋಪದೇಶ ವ್ಯರ್ಥವಾಗಲಾರದ್ದು; ಹಾಗೆಂಬುದು ಗೋಖಲೆಯವರ ಮಾತಿನಲ್ಲಡಗಿದ್ದ ಭಾವನೆ. ಅಷ್ಟು ಹೆಚ್ಚಿನ ಪ್ರಭಾವಶಾಲಿ ಮಿಲ್. ಆತನ ತತ್ತ್ವಗಳು ನಮ್ಮ ಕಾಲಕ್ಕೂ ಉಳಿದು ನಿಂತಿವೆ. ಆದದ್ದರಿಂದ ಆತನ ಸಂಗತಿಯನ್ನು ಈಗ ನಾವು ನೆನಪಿಗೆ ತಂದುಕೊಳ್ಳುವುದು ಯುಕ್ತವಾಗಿದೆ.

**ಮಿಲ್** ಎಂಬ ಹೆಸರು **ಜಾನ್ ಸ್ಟೂಅರ್ಟ್ ಮಿಲ್** ಎಂಬುದರ ಸಂಕ್ಷೇಪ ರೂಪ. ಜಾನ್ ಮಿಲ್ ಬದುಕಿದ್ದದ್ದು 1806 ರಿಂದ 1877ರವರೆಗೆ. ಅದು ಫ್ರಾನ್ಸ್ ದೇಶದ ಮಹಾಕ್ರಾಂತಿಯಿಂದ ಈಚಿನ ಕಾಲ; ನಮ್ಮ ದೇಶದಲ್ಲಿ ಸಿಪಾಯಿದಂಗೆ ನಡೆದ ಕಾಲ; ರಾಜಾ ರಾಮಮೋಹನ ರಾಯರ ತರುವಾಯದ ಕಾಲ; ಎಂದರೆ ಇಲ್ಲಿ ನೂತನ ವಿಚಾರಯುಗ ಪ್ರಾರಂಭವಾಗುತ್ತಿದ್ದ ಕಾಲ.

ಜಾನ್ ಮಿಲ್ಲಿನ ತಂದೆ ಜೇಮ್ಸ್ ಮಿಲ್. ಜೇಮ್ಸಿಗೆ ಆಗ ನಮ್ಮ ದೇಶವನ್ನಾಳುತ್ತಿದ್ದ "ಕುಂಪಣಿ"ಯ—ಎಂದರೆ ಈಸ್ಟ್ ಇಂಡಿಯಾ ಕಂಪೆನಿಯ ಲಂಡನ್ ಕಛೇರಿಯಲ್ಲಿ

---

* 28–10–1957 ರಂದು ಬೆಂಗಳೂರು ಆಕಾಶವಾಣಿಯಿಂದ ಪ್ರಸಾರಮಾಡಿದ ಭಾಷಣ.

ಉದ್ಯೋಗವಿತ್ತು. ಅದಕ್ಕಿಂತ ಹೆಚ್ಚಾಗಿ ಆತನು ಅಂದಿನ ಇಂಗ್ಲಿಷ್ ತತ್ತ್ವ ವಿಚಾರಿಗಳಲ್ಲಿ ಗಣ್ಯನಾಗಿದ್ದ. ಆ ತತ್ತ್ವವಿಚಾರಿಗಳ ಗುಂಪಿಗೆ ಬೆಂಥಮ್ ಎಂಬಾತನು ನಾಯಕನಾಗಿದ್ದನು. ಬೆಂಥಮ್ಮಿನ ವಿಚಾರ ಕೂಡ ನಮಗೆ ಬೇಕಾದದ್ದೇ. ಆದರೆ ಈಗ ಅದಕ್ಕೆ ಹೊತ್ತಿಲ್ಲ. ಆ ಬೆಂಥಮ್ ಪಂಥದ ಮುಖ್ಯತತ್ತ್ವವೇನೆಂದರೆ, ಯಾವ ನಡವಳಿಕೆಯಿಂದ ಜನದಲ್ಲಿ ಬಹುಮಂದಿಗೆ ಬಹು ಹೆಚ್ಚಿನ ಸುಖ ಉಂಟಾದೀತೋ ಅದೇ ನೀತಿಮೂಲವೆಂಬುದು. ಈ ಪಂಥಕ್ಕೆ "**ಯುಟಿಲಿಟೇರಿಯನಿಸಂ**" (ಪ್ರಯೋಜನ ಮುಖ್ಯತಾ ವಾದ) ಎಂದು ಹೆಸರು. ಸುಖವೇ ಪರಮ ಪ್ರಯೋಜನ. ಈ ವಾದವನ್ನು ಸಿದ್ಧಪಡಿಸುವುದರಲ್ಲಿ ಆ ಪ್ರಯೋಜನ ಪಂಥಿಗಳು ಮನಶ್ಶಾಸ್ತ್ರ, ಪ್ರಕೃತಿವಿಜ್ಞಾನ, ತರ್ಕಶಾಸ್ತ್ರಗಳನ್ನು ವಿಶೇಷವಾಗಿ ಕೃಷಿಮಾಡಿಕೊಂಡಿದ್ದರು.

ಈ ಬಗೆಯ ಬುದ್ಧಿವೃತ್ತಿ ಜೇಮ್ಸ್ ಮಿಲ್ಲಿನದು. ತನ್ನ ಮಗನನ್ನು ಆ ಪಂಥಕ್ಕೆ ಅನುಸಾರವಾಗಿ ಬೆಳಸಬೇಕೆಂಬುದು ಆತನ ಸಂಕಲ್ಪ. ಅದರಂತೆ ಮಗನಾದ ಜಾನ್ ಮಿಲ್ಲಿಗೆ ತಂದೆ ತಾನೇ ಖುದ್ದು ಮೇಲ್ವಿಚಾರಣೆಯಲ್ಲಿ ವಿದ್ಯಾಭ್ಯಾಸ ಮಾಡಿಸಿದನು. ಜಾನ್ ಮಿಲ್ ಒಳ್ಳೆಯ ಮೇಧಾವಿ; ಬಲವಾದ ಜ್ಞಾಪಕಶಕ್ತಿ ಪಡೆದಿದ್ದವನು. 12ನೆಯ ವರ್ಷ ವಯಸ್ಸಿಗೆ ಮೊದಲೇ ಅವನು ಗ್ರೀಕ್. ಲ್ಯಾಟಿನ್ ಭಾಷೆಗಳ ಪ್ರೌಢ ಗ್ರಂಥ ಗಳನ್ನು ಕಂಠಪಾಠ ಮಾಡಿಕೊಂಡಿದ್ದನು. ಅವುಗಳಿಂದ ಅವನ ಬುದ್ಧಿಗೆ ಶಾಸ್ತ್ರ ವ್ಯಾಯಾಮವಾಗಿ, ಅದು ತರ್ಕಸಮರ್ಥವಾಯಿತು. ಆದರೆ ಆತನ ತಂದೆ ಮಿಲ್ಲಿನ ಮನಸ್ಸನ್ನು ಕಾವ್ಯ, ಕಾದಂಬರಿಗಳ ಕಡೆಗೆ ತಿರುಗಬಿಡಲಿಲ್ಲ. ತನ್ನ ವಿದ್ಯಾಭ್ಯಾಸದಲ್ಲಿ ಇದರಿಂದ ದೊಡ್ಡ ನ್ಯೂನತೆಯಾಯಿತೆಂದು ಜಾನ್ ಮಿಲ್ ತನ್ನ ಆತ್ಮಕಥೆಯಲ್ಲಿ ಬರೆದಿದ್ದಾನೆ. ಮನುಷ್ಯನ ಅಂತರಂಗಶಕ್ತಿಗಳಲ್ಲಿ ಮುಖ್ಯವಾದವು ಎರಡು : ಒಂದು ಹೃದಯ, ಇನ್ನೊಂದು ಬುದ್ಧಿ. ಹೃದಯವು ಕರುಣೆ, ಪ್ರೀತಿ, ಉತ್ಸಾಹ ಮೊದಲಾದ ಭಾವ ವಿಶೇಷಗಳನ್ನು ಹೊರಹೊಮ್ಮಿಸುವ ಅಂಗ. ಬುದ್ಧಿಯಾದರೋ ಪ್ರಶ್ನೆ, ಚರ್ಚೆ, ಸಂದೇಹ—ಇಂಥಾ ವೈಜ್ಞಾನಿಕ ಪ್ರಸಂಗಗಳನ್ನು ಕೆರಳಿಸುವ ಅಂಗ. ಈ ಎರಡು ಅಂಗಗಳೂ ಸಮಸಮವಾಗಿ ಬೆರೆತು ಒಂದುಗೂಡಿ ತತ್ತ್ವವನ್ನು ಕಾಣಬೇಕು. ಹಾಗಾಗದೆ ಒಂದೇ ಅಂಗ ಮಾಡಿದ ಕೆಲಸ—ಒಂದೇ ಕಣ್ಣಿನ ನೋಟದಂತೆ—ನಮ್ಮ ಮುಂದಿರುವ ಪದಾರ್ಥದ ಒಂದು ಭಾಗವನ್ನು ಮಾತ್ರ ಕಾಣುತ್ತದೆ. ಅದು ಪೂರ್ಣ ದೃಷ್ಟಿಯಾಗದು. ಇದನ್ನು ಮಿಲ್ ತತ್ತ್ವಜ್ಞನು ಕಂಡುಕೊಂಡು, ತಾನು ಸ್ವತಂತ್ರ ನಾದಾಗ ಕಾವ್ಯ, ಕಲೆಗಳ ಕಡೆಗೆ ಮನಸ್ಸನ್ನು ತಿರುಗಿಸಿದನು. ಕವಿಗಳಲ್ಲಿ ವರ್ಡ್ಸ್‌ವರ್ತ್ ಎಂಬ ಪ್ರಕೃತಿರಹಸ್ಯದರ್ಶಿಯೂ ಕಾದಂಬರಿಕಾರರಲ್ಲಿ ಡಿಕನ್ಸ್ ಎಂಬ ಸಮಾಜ ಜೀವನ ಚಿತ್ರಕನೂ ಆತನಿಗೆ ಪ್ರಿಯರಾದವರು.

ಜಾನ್ ಮಿಲ್ ತನ್ನ ತಂದೆ ಕೆಲಸಮಾಡಿದ್ದ ಕಛೇರಿಯಲ್ಲಿಯೇ ಉದ್ಯೋಗ ಪಡೆದುಕೊಂಡ. ಅದು ಕುಂಪಣಿಯದೆಂದು ಆಗಲೇ ಹೇಳಿದೆನಷ್ಟೆ ? ಅದರ ಕೈಯಿಂದ ಇಂಡಿಯದ ಆಡಳಿತವನ್ನು ಬ್ರಿಟಿಷ್ ರಾಣಿ ವಿಕ್ಟೋರಿಯಾ ವಹಿಸಿಕೊಂಡಾಗ, ಮಿಲ್ ಮಹಾಶಯನು ಪಿಂಚನ್ ಪಡೆದು ವಿಶ್ರಾಂತನಾದ. ಆ ಬಳಿಕ ಆತನು ತನ್ನ ಕಾಲವನ

ತತ್ತ್ವ ವ್ಯಾಸಂಗ, ಗ್ರಂಥಲೇಖನ, ಪತ್ರಿಕಾ ಸಂಪಾದನ ಮೊದಲಾದ ಸಾರ್ವಜನಿಕ ಬೋಧನಕಾರ್ಯಕ್ಕೆ ವಿನಿಯೋಗಿಸಿದನು. ಕೊಂಚ ಕಾಲ ಆತ ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯನಾಗಿದ್ದದ್ದೂ ಉಂಟು.

ಆತ ವ್ಯಾಸಂಗ ಮಾಡಿದ ವಿಷಯಗಳು ತರ್ಕ (Logic), ಸಂಪದ್ವ್ಯವಸ್ಥೆ (Political Economy), ರಾಜ್ಯವಿಧಾನಗಳು, ಸ್ತ್ರೀಯರ ಸ್ಥಾನಮಾನಗಳು, ಸಮಾಜವ್ಯವಸ್ಥೆ—ಇವು. ತನ್ನ ತಂದೆಯೂ ಬೆಂಥಮನೂ ಪ್ರತಿಪಾದಿಸಿದ್ದ ಪ್ರಯೋಜನ ಮುಖ್ಯತಾವಾದವನ್ನು ಜಾನ್ ಮಿಲ್ಲನು ಪರಿಶೋಧಿಸಿ, ತಿದ್ದಿ, ಪ್ರಚಾರಕ್ಕೆ ತಂದನು.

ಪ್ರಯೋಜನ ಮುಖ್ಯತಾವಾದಕ್ಕೆ ನೂರು ವರ್ಷದ ಹಿಂದೆ ಇದ್ದ ಪುರಸ್ಕಾರ ಐವತ್ತು ವರ್ಷದಿಂದೀಚೆಗೆ ಇಲ್ಲ. ಅದನ್ನು ಕುರಿತು ನಾಲ್ಕಾರು ಆಕ್ಷೇಪಣೆಗಳುಂಟು. ಪ್ರಯೋಜನವೆಂದರೆ ಸುಖವೆಂದು ಅರ್ಥವಷ್ಟೆ ? ಯಾವುದು ಸುಖ ? ಮತ್ತು ಎಂಥ ಸುಖ ? ದೇಹದ ಸುಖವೆ, ಮನಸ್ಸಿನದೆ ? ಒಬ್ಬನೇ ಮನುಷ್ಯನಿಗೆ ಒಂದು ಘಳಿಗೆ ಸುಖವೆನಿಸಿದ್ದು ಮತ್ತೊಂದು ಘಳಿಗೆ ದುಃಖವೆನಿಸುವುದುಂಟಲ್ಲವೆ ? ಒಂದು ಅಂಗಕ್ಕೆ ಸುಖವೆನಿಸಿದ್ದು ಮತ್ತೊಂದು ಅಂಗಕ್ಕೆ ಅಸುಖವಾಗುತ್ತದೆ. ನಾಲಗೆಗೆ ಸವಿಯಾದದ್ದು ಹೊಟ್ಟೆಗೆ ನೋವು. ಹಾಗೆಯೇ ಒಬ್ಬನಿಗೆ ಸುಖವೆನಿಸಿದ್ದು ಮತ್ತೊಬ್ಬ-ನಿಗೆ ಅಸುಖವಾದೀತು. ರಾಜ್ಯದಲ್ಲಿ ಬಹುಮಂದಿಯ ಇಷ್ಟದಂತೆ ನಡೆಯತಕ್ಕದ್ದೆಂದರೆ, ಆಗ ಉಳಿದ ಸ್ವಲ್ಪ ಮಂದಿಯ ಪಾಡೇನು ? ಕುಟುಂಬದ ಹತ್ತು ಮಂದಿಯಲ್ಲಿ ಆರು ಮಂದಿಗೆ ಖಾರ ಇಷ್ಟವಾದರೆ ಮಿಕ್ಕ ನಾಲ್ವರೂ ಹೊಟ್ಟೆಯುರಿಯಿಂದ ನರಳ ಬೇಕಾದದ್ದಷ್ಟೇನೆ ? ಅವರು ಗೋಳಾಡುತ್ತಿರುವಲ್ಲಿ ಮಿಕ್ಕವರಿಗೆ ಊಟ ರುಚಿಸೀತೆ ? ಎಲ್ಲಕ್ಕಿಂತ ಮೇಲಾಗಿ, ಸುಖವಾದದ್ದೆಲ್ಲ ಹಿತವೆ ? ಸುಖಕ್ಕೂ ಹಿತಕ್ಕೂ ಭೇದ ವಿಲ್ಲವೆ ? ಸುಖವೇ ಕರ್ತವ್ಯಸೂಚಕವೆಂದಮೇಲೆ ನೀತಿಯೆಂಬುದು ವ್ಯಕ್ತಿಯ ಕ್ಷಣಿಕಾನುಭವದ ಆಲೋಚನೆ ತಾನೆ ? ನೀತಿಯು ದೃಢವಾಗಿ ನೆಲಸಿರಬೇಕಾದರೆ ಅದಕ್ಕೆ ತಾತ್ಕಾಲಿಕ ಪ್ರಯೋಜನದ ಚಿಂತೆಗಿಂತ ಬಲವೂ ಭದ್ರವೂ ಆದ ಆಧಾರ ಬೇಕಲ್ಲವೆ ? ಹೀಗೆ ನಾನಾ ಆಕ್ಷೇಪಣೆಗಳು ಹೊರಡುತ್ತವೆ. ಅದನ್ನೆಲ್ಲ ಜಾನ್ ಸ್ಟೂಅರ್ಟ್ ಮಿಲ್ ಕಾಣದವನಲ್ಲ; ನಿರಾಕರಿಸಿದವನೂ ಅಲ್ಲ. ಆ ಕಾಲದ ಪಾಶ್ಚಾತ್ಯ ತಾತ್ತ್ವಿಕರಿಗಿದ್ದ ಕಷ್ಟವೇನೆಂದರೆ—ಅವರಿಗೆ ಜಗತ್ತಂತ್ರದ ವಿಷಯದಲ್ಲಿ ಒಂದು ಶಾಶ್ವತ ಮೂಲಸತ್ಯ ಕಾಣಬಾರದೆ ಇದ್ದದ್ದು. ಅದಕ್ಕೆ ಹಿಂದೆ ಇದ್ದ ಭಗವನ್ಮತವಿಶ್ವಾಸವನ್ನು ಹೊಸ ವಿಜ್ಞಾನ ಸಡಲಿಸಿತ್ತು. ಕ್ರಿಶ್ಚಿಯನ್ ಮತವು ಭಗವಂತನ ಅಸ್ತಿತ್ವವನ್ನು ಸಾರಿತು. ಆದರೆ ಬೈಬಲ್ಲಿನ ಜಗತ್ಸೃಷ್ಟಿಪುರಾಣವೂ ಅದ್ಭುತ ಕಥೆಗಳೂ ವೈಜ್ಞಾನಿಕ ದೃಷ್ಟಿಯಲ್ಲಿ ಪ್ರಮಾಣಗಳಾಗಲಿಲ್ಲ. ಭಗವದಸ್ತಿತ್ವದ ವಿಷಯದಲ್ಲಿ ಅವರಿಗೆ, ಭೌತಪ್ರಪಂಚ ವಿಷಯದಲ್ಲಿ ದೊರೆತಂತೆ, ಬಾಹ್ಯಪ್ರಮಾಣ ಗಳು ದೊರೆಯಲಿಲ್ಲ. ಆದದ್ದರಿಂದ ಅವರು ಭಗವದ್ವಿಷಯವನ್ನು ಅಮಾನತ್ತಿ ನಲ್ಲಿಟ್ಟರು. ಅವರು ಆಸ್ತಿಕರಲ್ಲ; ನಾಸ್ತಿಕರೂ ಅಲ್ಲ; ಭಗವದ್ವಿಷಯ ಅವಿಜ್ಞಾತ ವೆಂಬ ತಟಸ್ಥವಾದ (Agnostic) ಅವಿಜ್ಞಪಂಥಕ್ಕೆ ಸೇರಿದವರು. ಹೀಗೆ

ಭಗವತ್ತತ್ತ್ವವನ್ನು ಕಳಚಿಹಾಕಿಬಿಟ್ಟ ಮೇಲೆ ಧರ್ಮಯೋಜನೆಗೆ ಆಧಾರವೆಲ್ಲುಂಟು? ಧರ್ಮಕ್ಕೆ ಲಕ್ಷಣವೇನು? ನೀತಿ ಎಂಬುದಕ್ಕೆ ಪ್ರಮಾಣವೇನು? ಲೋಕದಲ್ಲಿ ಜನರ ನಡತೆಗೆ ಒಂದು ನಿಯಮ ಬೇಡವೆ? ಬೇಕೆಂಬುದಾದರೆ ಆ ನಿಯಮವನ್ನು ಭಗವನ್ನಿಯಾಮಕದ ಹೊರತು ಯಾವ ಕಲ್ಪನೆಯ ಮೇಲೆ ಕಟ್ಟಲಾದೀತು?

ಜಾನ್ ಮಿಲ್ ಭಗವದ್ವಿಶ್ವಾಸಕ್ಕೆ ಕಾರಣ ಕಾಣದ "ಅವಿಜ್ಞ"ನಾಗಿದ್ದರಿಂದ ಆತನ ನೀತಿವಿಶ್ವಾಸವು ಕೇವಲ ಲೌಕಿಕಮಾತ್ರದ್ದಾಯಿತು. ನೀತಿಮೂಲಪ್ರೇರಣೆಯನ್ನು ಮಿಲ್ ತನ್ನ ಹೃದಯದ ಮನುಷ್ಯಸಹಾನುಭೂತಿಯಿಂದಲೂ ಲೋಕದ ಸಭ್ಯಾಚಾರಗಳಲ್ಲಿಯೂ ಕಾಣಬೇಕಾಯಿತು. ಸತ್ಯಶ್ರದ್ಧೆ. ಕರ್ತವ್ಯನಿಷ್ಠೆ. ನ್ಯಾಯವರ್ತನೆ, ಜೀವಸಹಾನುಭೂತಿ. ಪರೋಪಕಾರ, ಲೋಕಮರ್ಯಾದೆ— ಇವೇ ಮೊದಲಾದ ನೀತಿಗಳನ್ನೆಲ್ಲ ಯುಕ್ತವೆಂದು ಮಿಲ್ ಅಂಗೀಕರಿಸಿದ್ದ; ಆತನ ಪೂರ್ವಿಕರಾದ ಬೆಂಥಮ್. ಜೇಮ್ಸ್ ಮಿಲ್ ಮೊದಲಾದವರೂ ಅಂಗೀಕರಿಸಿದ್ದರು. ಆದರೆ ಅವರ ಆ ಅಂಗೀಕಾರವು ಸಂಪ್ರದಾಯ ರೂಢಿಯ ಫಲ. ಅದು ಮತಧರ್ಮದ ಫಲಿತಾಂಶವಲ್ಲ. ಜಾನ್ ಸ್ಟೂಅರ್ಟ್ ಮಿಲ್‌ಗೆ ಆ ನೀತಿಪ್ರಕ್ರಿಯೆ ಸಾಕೆನ್ನಿಸಲಿಲ್ಲ. ಆತನು ಮತಧರ್ಮವನ್ನು ಪ್ರತ್ಯಕ್ಷವಾಗಿ ಗ್ರಹಿಸದಿದ್ದರೂ ಜನರ ಅಂತರಂಗ ಪ್ರೇರಣೆಗಳೂ ಬಹುಕಾಲದ ವಿಶ್ವಾಸಪದ್ಧತಿಗಳೂ ನೀತಿಕಾರಣಗಳೆಂದು ಕಂಡುಕೊಂಡಿದ್ದನು. ಅವಕ್ಕಿಂತ ಆಳವಾಗಿ ಈ ವಿಷಯದಲ್ಲಿ ವಿಚಾರ ನಡೆಯುವುದು ಸಾಧ್ಯವಿದೆ. ಅದು ಆವಶ್ಯವೂ ಹೌದು. ಆದರೆ ಮಿಲ್ಲಿನ ಕಾಲದಲ್ಲಿ ಅಷ್ಟು ಆಳದ ತರ್ಕಕ್ಕೆ ಸಾಮಗ್ರಿ ಇರಲಿಲ್ಲ. ಆಗ ಹೊಸ ವಿಜ್ಞಾನತರ್ಕವು ಯುವ್ವನದ ಜೋರಿನಲ್ಲಿತ್ತು. ತನ್ನ ಮಿತಿಗಳನ್ನು ಅದು ಆಗ ಕಂಡುಕೊಂಡಿರಲಿಲ್ಲ. ಅದರ ಹೊಡೆತದಲ್ಲಿ ಮತಧರ್ಮ ಕೊಂಚಕಾಲ ಭ್ರಾಂತವಾಗಿತ್ತು. ಆದರೆ ಜಾನ್ ಮಿಲ್ಲಿನ ವಾದ ಹೇಗಾದರಿರಲಿ, ಆತನ ಆಚರಣೆಯಲ್ಲಿ ನೀತಿನಿಷ್ಠೆ ಪ್ರಕಾಶಮಾನವಾಗಿದ್ದದ್ದರಿಂದ ಆತನ ತರ್ಕದ ಕಡೆಗೆ ಯಾರೂ ಬೆರಳುತೋರಿಸಬೇಕಾಗಲಿಲ್ಲ. ಜನಕ್ಕೆ ವಾದಕ್ಕಿಂತ ಅನುಷ್ಠಾನ ಮುಖ್ಯ. ಮಾತಿಗಿಂತ ನಡತೆ ಮೆಚ್ಚಾಗಿದ್ದ ಕಡೆ ವಾದವನ್ನು ಏಕೆ ಕೆಣಕಬೇಕು?

ಮಿಲ್ ದೇವರ ಹೆಸರನ್ನೆತ್ತದಿದ್ದರೂ ಅಂತರಂಗಸಾಕ್ಷಿಯನ್ನು ಕೈಬಿಟ್ಟವನಲ್ಲ. ಆತನು ಮನೋವಾಕ್ಕಾಯಕರ್ಮಗಳಲ್ಲಿ ಪರಮ ಪ್ರಾಮಾಣಿಕ, ನ್ಯಾಯಶೀಲ, ಉದಾರಿ. ಹಿಂದೂಜನ ಅಂಥವನನ್ನು ನೋಡಿದ್ದಿದ್ದರೆ ಅವನು ಪೂರ್ವಜನ್ಮದಲ್ಲಿ ಸತ್ಕರ್ಮ ಮಾಡಿ ಉತ್ತಮ ಸಂಸ್ಕಾರ ಪಡೆದಿದ್ದಾತನೆಂದು ಹೇಳಿದ್ದಾರು.

ಪ್ರಕೃತ ಆತನ ಲೇಖನಗಳಲ್ಲಿ ನಾವು ಮುಖ್ಯವಾಗಿ ವ್ಯಾಸಂಗ ಮಾಡಬೇಕಾದವು ಎರಡು ಜಾತಿಯವು: ಒಂದು ಸ್ವಾತಂತ್ರ್ಯ ವಿಚಾರಕ್ಕೆ ಸಂಬಂಧಪಟ್ಟವು; ಇನ್ನೊಂದು ಪ್ರತಿನಿಧಿಸರಕಾರ ಪದ್ಧತಿಗೆ ಸಂಬಂಧಪಟ್ಟವು.

ಆತನ ಸ್ವಾತಂತ್ರ್ಯತತ್ತ್ವವನ್ನು ಎರಡುಮೂರು ವಾಕ್ಯಗಳಲ್ಲಿ ಸಂಗ್ರಹಿಸಿ ಹೇಳಬಹುದು: (1) ಮನುಷ್ಯ ಬುದ್ಧಿ ಪರಿಪೂರ್ಣವಾದದ್ದಲ್ಲ. ಎಷ್ಟೋ ತಪ್ಪುಗಳು

ಅದಕ್ಕೆ ಸಹಜವಾಗಿರುತ್ತವೆ. ಆಲಸ್ಯವೂ ಭ್ರಾಂತಿಯೂ ಪ್ರಮಾದವೂ ಎಲ್ಲ ಮನುಷ್ಯರಿಗೂ ಉಂಟಾಮವೇ, ಆದದ್ದರಿಂದ ಯಾವ ಒಬ್ಬನ ಅಭಿಪ್ರಾಯವನ್ನೂ ನಾವು ಪೂರ್ತಿ ನಿರ್ದೋಷವೆಂದು ಗ್ರಹಿಸಲಾಗದು. ಅದನ್ನು ಪರೀಕ್ಷಿಸಿ ನೋಡಿದ ಮೇಲೆಯೇ ಅದನ್ನು ಅಂಗೀಕರಿಸುವುದೋ ತಳ್ಳಿಹಾಕುವುದೋ ನಿಶ್ಚಯಿಸ ಬೇಕಾಗುತ್ತದೆ. ಪರೀಕ್ಷೆಯೆಂದರೆ ನಾಲ್ಕಾರು ಬುದ್ಧಿಗಳ ಘರ್ಷಣೆ, ಅದೇ ಚರ್ಚೆ. ಚರ್ಚೆಯು, ಅಥವಾ ವಾದವಿವಾದದ ಮಾರ್ಗವೊಂದೇ ಮನುಷ್ಯನಿಗೆ ತಪ್ಪಿನಿಂದ ತಪ್ಪಿಸಿಕೊಳ್ಳಲು ಇರುವ ಉಪಾಯ. ಆದದ್ದರಿಂದ ಚರ್ಚೆಗೆ ಅಂಗಗಳಾದ ವಿಚಾರ ಸ್ವಾತಂತ್ರ್ಯ, ವಾಕ್‌ಸ್ವಾತಂತ್ರ್ಯ—ಇವು ಎಲ್ಲರಿಗೂ ಅವಶ್ಯಗಳಾಗುತ್ತವೆ. ಅವು ನಮ್ಮ ಸೌಕರ್ಯಗಳಿಗೆ ಮಾತ್ರವೇ ಅಲ್ಲ, ನಮ್ಮ ಕರ್ತವ್ಯಗಳಿಗೂ ಬೇಕು, ಅದಿಲ್ಲದೆ ಧರ್ಮಾಧರ್ಮವಿವೇಕವಿಲ್ಲ, ಇದು ಒಂದಂಶ.

(2) ಇನ್ನೊಂದಂಶ ಮನುಷ್ಯನ ವ್ಯಕ್ತಿವಿಶೇಷವನ್ನು ಕುರಿತದ್ದು. ಸೃಷ್ಟಿಯಲ್ಲಿ ಒಬ್ಬನಿದ್ದಂತೆ ಇನ್ನೊಬ್ಬನಿಲ್ಲ. ಒಬ್ಬೊಬ್ಬನದು ಒಂದೊಂದು ತೀರಿನ ವ್ಯಕ್ತಿಲಕ್ಷಣ, ಹುಟ್ಟುಗುಣಗಳು. ಶಕ್ತಿಸಾಮರ್ಥ್ಯಗಳು, ಸ್ವಭಾವವಾಸನೆಗಳು, ಸಹವಾಸಸಂಸ್ಕಾರಗಳು, ಆಶೆಅಭಿರುಚಿಗಳು—ಇವು ಒಬ್ಬನಿಗಿರುವಂತೆ ಇನ್ನೊಬ್ಬನಿಗಿರುವುದಿಲ್ಲ. ಮತ್ತು ಪ್ರತಿಯೊಬ್ಬನಿಗೂ ಅವನವನ ಗುಣಶಕ್ತಿವಿಕಾಸದಿಂದಲೇ ಪೂರ್ತಿ ಸಮಾಧಾನ. ತನ್ನೊಳಗಿನ ಗುಣವನ್ನೂ ಬಲವನ್ನೂ ಅಪೇಕ್ಷೆಯನ್ನೂ ಅದುಮಿಟ್ಟುಕೊಳ್ಳುವುದು ಎಂಥವನಿಗಾದರೂ ಶ್ರಮವೇ ಹೊರತು ಸುಖವಲ್ಲ. ಆಸಕಾರಣ ಪ್ರತಿಯೊಬ್ಬನಿಗೂ ತನ್ನೊಳಗಿನ ಗುಣಬಲಸಂಪತ್ತನ್ನು ಅಭಿವೃದ್ಧಿಪಡಿಸಿ ಸಾರ್ಥಕಮಾಡಿಕೊಳ್ಳಲು ಅವಕಾಶವಿರಬೇಕು. ಅದೇ ವ್ಯಕ್ತಿಸ್ವಾತಂತ್ರ್ಯ, ಅದೇ ಜೀವವಿಕಾಸ. ಜೀವದ ಆತ್ಮಗುಣಶಕ್ತಿವಿಕಾಸದಿಂದ ಸಮಾಜಕ್ಕೆ ಸೇವೆ, ಜೀವಕ್ಕೆ ತೃಪ್ತಿ, ಹೀಗೆ ವ್ಯಕ್ತಿ ಸ್ವಾತಂತ್ರ್ಯ ಮನುಷ್ಯಹಿತದಲ್ಲಿ ಒಂದು ಮುಖ್ಯಾಂಶ, ಆ ಸ್ವಾತಂತ್ರ್ಯಕ್ಕೆ ರಾಜ್ಯ ದಿಂದಲಾಗಲಿ ಸಮಾಜದಿಂದಲಾಗಲಿ ಗುರುಪೀಠದಿಂದಲಾಗಲಿ ಭಂಗ ಬರಬಾರದು.

(3) ಇನ್ನು ಮೂರನೆಯ ಅಂಶ: ವಿಚಾರಸ್ವಾತಂತ್ರ್ಯವೂ ವ್ಯಕ್ತಿವಿಕಾಸ ಸ್ವಾತಂತ್ರ್ಯವೂ ಹೀಗೆ ಜೀವಿಗೂ ಸಮಾಜಕ್ಕೂ ಅತ್ಯಂತ ಮುಖ್ಯವಾಗಿದ್ದರೂ ಅವು ಮಿತಿಯಿಲ್ಲದ, ಕಟ್ಟುಪಾಡಿಲ್ಲದ ಸ್ವಾತಂತ್ರ್ಯಗಳಲ್ಲ. ಆ ಸ್ವಾತಂತ್ರ್ಯಗಳೆರಡೂ ಎಲ್ಲ ಜನರಿಗೂ ಸಲ್ಲಬೇಕಾದವು. ಆದದ್ದರಿಂದ ಅವುಗಳನ್ನು ಉಪಯೋಗಪಡಿಸಿಕೊಳ್ಳು ವುದರಲ್ಲಿ ಪ್ರತಿಯೊಬ್ಬನೂ ಇತರರ ಸ್ವಾತಂತ್ರ್ಯಗಳಿಗೆ ಹಾನಿ ತಾರದಂತೆ ಒಂದು ನಿಯಮದಿಂದ ನಡೆದುಕೊಳ್ಳಬೇಕು. ಇದೇ ನ್ಯಾಯಸೂತ್ರ. ಸಾರ್ವಜನಿಕ ವ್ಯವಸ್ಥೆಗೂ ರಾಜ್ಯದ ಕ್ಷೇಮಕ್ಕೂ ಸಮಾಜಶಾಂತಿಗೂ ಭಂಗ ತಗಲದಷ್ಟು ಮಟ್ಟಿಗೆ ಪೂರ್ತಿಯಾಗಿ ಪ್ರತಿಯೊಬ್ಬನೂ ತನ್ನ ತನ್ನ ಬುದ್ಧಿಸ್ವಾತಂತ್ರ್ಯವನ್ನು ಎಲ್ಲ ವಿಚಾರಗಳಲ್ಲಿಯೂ ಪ್ರಯೋಗಮಾಡಿಕೊಳ್ಳಬೇಕು, ಮತ್ತು ತನ್ನ ವ್ಯಕ್ತಿಸ್ವಾತಂತ್ರ್ಯವನ್ನು ಆತ್ಮವಿಕಾಸಕ್ಕಾಗಿ ಉಪಯೋಗಿಸಿಕೊಳ್ಳಬೇಕು—ಎಂಬುದು ಜಾನ್ ಮಿಲ್ಲಿನ ತಾತ್ಪರ್ಯ. ಸ್ವಾತಂತ್ರ್ಯ ದಲ್ಲಿ ಅಪಾಯಗಳೂ ಉಂಟು. ಅದು ಪ್ರಯೋಗ ಸಮಯದಲ್ಲಿ ವಿಹಿತವಾ

ಮೇರೆಗಳನ್ನು ಮನುಷ್ಯನು ಅತಿಕ್ರಮಿಸುವಂತೆ ಅವನಿಗೆ ಆಶಾಮೋಹವನ್ನು ಉಂಟು ಮಾಡುತ್ತದೆ. ಈ ಚೇಷ್ಟೆಯನ್ನು ಮಿಲ್ ಮರೆತಿದ್ದವನಲ್ಲ. ಮನುಷ್ಯನು ತನ್ನ ಅನನುಭವದ ಕಾರಣದಿಂದ ಭ್ರಾಂತಿಪರವಶನಾಗಿ ನಡೆಯಬಹುದು. ಆದರೆ ಮಗುವನ್ನು ನೆಲದ ಮೇಲೆ ನಡೆಯಬಿಟ್ಟರೆ ಅದು ಎಡವಿ ಮುಗ್ಗರಿಸೀತೇದು ಹೆದರಿ ನಾವು ಅದನ್ನು ಓಡಾಡಬೇಡವೆಂದು ತಡೆದರೆ ಅದರ ಕಾಲಿಗೆ ಬಲ ಬರುವುದು ಹೇಗೆ? ಎಡವು, ಏಳು; ತಪ್ಪುಹೆಜ್ಜೆ ಇಡು, ಬಿದ್ದೂ ಎದ್ದೂ ತಿದ್ದಿಕೊ—ಇದು ಮನುಷ್ಯನಿಗಿರುವ ಪ್ರಗತಿಕ್ರಮ. ತಪ್ಪುಮಾಡಿ ತಿದ್ದಿಕೆ ಪಡೆಯುವುದು ಸ್ವಾತಂತ್ರ್ಯದ ಉಪಯೋಗಗಳಲ್ಲಿ ಒಂದಂಶ. ಇದನ್ನು ಕಂಡು ಸಾರಿದಾತ ಮಿಲ್.

ಹೀಗೆ ಸಿದ್ಧವಾದ ಸ್ವಾತಂತ್ರ್ಯತತ್ತ್ವಕ್ಕೆ ತಕ್ಕಂತೆ ರೂಪುಕೊಡುವ ಸರಕಾರದ ಪದ್ಧತಿ ಪ್ರಜಾರಾಜ್ಯದ್ದು. ಆ ರಾಜ್ಯದಲ್ಲಿ ಪ್ರತಿಯೊಬ್ಬ ಪ್ರಜೆಗೂ ಒಂದು ಬೆಲೆಯುಂಟು. ಎಲ್ಲ ಪ್ರಜೆಗಳೂ ಶಾಸನದೃಷ್ಟಿಯಲ್ಲಿ ಸಮಾನರು. ಸ್ವಾತಂತ್ರ್ಯ ಅವರಿಗೆಲ್ಲ ಸಮಾನವಾಗಿ ಬೆಲೆಯುಳ್ಳ ಹಿತಾರ್ಥ. ಅದನ್ನುಳಿಸಿಕೊಂಡು ಬಳಸಿಕೊಳ್ಳುವುದರಲ್ಲಿ ಅವರಿಗೆಲ್ಲ ಸಮಾನವಾದ ಆಸಕ್ತಿಯಿರುತ್ತದೆ, ಮತ್ತು ಹಕ್ಕಿರುತ್ತದೆ. ಆದಕಾರಣ ಅವರೆಲ್ಲ ಒಟ್ಟುಗೂಡಿ ಸಮ್ಮತಿಯಿಂದ ರಾಜ್ಯಕಾರ್ಯ ನಡಸುವುದು ಯುಕ್ತವಾಗುತ್ತದೆ. ಆದರೆ ಕಾರ್ಯವು ದಕ್ಷತೆಯಿಂದ ನಡೆಯಲು ಕಾರ್ಯಕರ್ತರು ಒಂದು ಮಿತಸಂಖ್ಯೆಯುಳ್ಳವರಾಗಬೇಕು. ಕಾರ್ಯಕರ್ತರಿಗೆ ಮಿತಿಗೊತ್ತು ಇಲ್ಲವಾದರೆ ಕಾರ್ಯ ಅನಾಯಕವಾಗುತ್ತದೆ. ಹಾಗಾದರೆ ಲಕ್ಷಾಂತರ ಪ್ರಜೆಯ ಕಾರ್ಯವನ್ನು ಲಕ್ಷಾಂತರಕ್ಕಿಂತ ಕಡಮೆಯಾದ ಜನ ನಡಸಬೇಕೋ? ಅದು ಹೇಗಾದೀತು? ಈ ಪ್ರಶ್ನೆಗೆ ಉತ್ತರ ಪ್ರತಿನಿಧಿಪದ್ಧತಿ. ಪ್ರಜಾಜನರು ಮೊದಲು ತಮ್ಮ ಪೈಕಿ ಯಾರು ಯಾರು ತಮ್ಮ ಮನೋಗತಗಳನ್ನು ತಿಳಿದುಕೊಂಡು ತಮ್ಮ ಹಿತಕ್ಕೆ ತಕ್ಕಂತೆ ರಾಜ್ಯಕಾರ್ಯವನ್ನು ನಡಸಬಲ್ಲವರು ಎಂಬುದನ್ನು ಕಂಡುಕೊಳ್ಳಬೇಕು; ಆಮೇಲೆ ಹಾಗೆ ಗೊತ್ತಾದ ಕೆಲವಂದಿ ಗೊತ್ತಾದ ಸಂಖ್ಯೆಯಲ್ಲಿ ನಿಂತು ತಮ್ಮ ಪರವಾಗಿ ಕೆಲಸಮಾಡಲು ಅವರಿಗೆ ಅಧಿಕಾರ ವಹಿಸಿಕೊಡಬೇಕು. ಇದೇ ಪ್ರತಿನಿಧಿಪದ್ಧತಿ. ಹಾಗೆ ಅಧಿಕೃತರಾದ ಪ್ರತಿನಿಧಿಗಳ ಸಂಖ್ಯೆ ಮಿತವಾಗಿರುತ್ತದೆ. ಆ ಮಿತಸಂಖ್ಯೆಯ ಪ್ರತಿನಿಧಿಗಳು ಸಭೆಯಲ್ಲಿ ಆಲೋಚನೆ ನಡಸಿ ರಾಜ್ಯದ ರೀತಿನೀತಿಗಳನ್ನು ನಿಶ್ಚಯಗೊಳಿಸುವುದು ಕಷ್ಟವಾಗದು. ಈ ರೀತಿಯ ಕಾರ್ಯಕಾರಣ ವಿಚಾರದಿಂದ ಉಂಟಾದದ್ದು ಪ್ರತಿನಿಧಿಸರಕಾರದ ಪದ್ಧತಿ. ಆ ಪದ್ಧತಿಯ ಲಕ್ಷಣಗಳನ್ನೂ ಕಾರ್ಯಾಂಗಗಳನ್ನೂ ಮಿಲ್ ಲೇಖಕನು " Representative Government "—" ಪ್ರತಿನಿಧಿ ಸರಕಾರ " ಎಂಬ ಪ್ರಬಂಧದಲ್ಲಿ ವಿವರಿಸಿದ್ದಾನೆ. ಮೈಸೂರಿನ ಮೊದಲನೆಯ ದಿವಾನರಾಗಿದ್ದ ರಂಗಾಚಾರ್ಯರು ಮಿಲ್ ಪ್ರಕಟಿಸಿದ್ದ ಆ ಪ್ರಬಂಧವನ್ನು ಓದಿದ್ದರು. ಅವರು 1881ರಲ್ಲಿ ಮೈಸೂರಿನಲ್ಲಿ ಸ್ಥಾಪನೆಮಾಡಿಸಿದ ಪ್ರಜಾಪ್ರತಿನಿಧಿಸಭೆಯ ಭಾವನೆ ಅವರಿಗೆ ಬಹುಶಃ ಮಿಲ್ ತಾತ್ತ್ವಿಕನ ಪ್ರಬಂಧದಿಂದ ಹೊಳೆದದ್ದಿದ್ದರೂ ಇರ

ಬಹುದೆಂದು ನನಗನ್ನಿಸುತ್ತದೆ. ಮಿಲ್ಲಿನ ಆ ಪ್ರಬಂಧ ರಾಜ್ಯಶಾಸ್ತ್ರದಲ್ಲಿ ಪ್ರಮಾಣ ಗ್ರಂಥವೆಂದು ಗೌರವ ಪಡೆದಿದೆ.

ಮಿಲ್ ಪ್ರಾರಂಭಮಾಡಿದ ತತ್ತ್ವವಿಮರ್ಶೆಯ ಪ್ರವಾಹ ಹರಡಿ ಮುಂಬರಿದಿದೆ. ಅದು ಒಂದು ಕಡೆ ಯಾವ ಬದಲಾವಣೆಯೂ ಬೇಡ ಎನ್ನುವ ಯಥಾಸ್ಥಿತಿವಾದದಿಂದ ದೂರವಾದದ್ದು ; ಇನ್ನೊಂದು ಕಡೆ ಎಲ್ಲವನ್ನೂ ಬೇಗಬೇಗ ಬದಲಾಯಿಸೋಣ ಎಂಬ ಉತ್ಕ್ರಾಂತಿವಾದದಿಂದ ದೂರವಾದದ್ದು. ಆ ಎರಡು ಅಂತಿಮರೇಖೆ ಗಳನ್ನೂ ಸೋಕದೆ ಮಧ್ಯವರ್ತಿಯಾಗಿ ನಡೆಯತಕ್ಕದ್ದು ಮಿಲ್ಲಿನ ಮಾರ್ಗ. ದಿನ ದಿನವೂ ಬದಲಾಯಿಸುತ್ತಿರುವುದು ಜಗತ್ತಿನ ಸ್ವಭಾವ. ಆದದ್ದರಿಂದ ನಾವು ಆಗಾಗ ನಮ್ಮ ಜೀವನ ರೀತಿಗಳನ್ನೂ ಸಮಾಜ ಸಂಸ್ಥೆಗಳನ್ನೂ ಬದಲಾಯಿಸಿಕೊಳ್ಳುವುದು ಅನಿವಾರ್ಯ. ಆದರೆ ಯಾವ ಬದಲಾವಣೆಯನ್ನೂ ಪೂರ್ವಾಪರ ವಿವೇಚನೆ ಯಿಲ್ಲದೆ—ಯಾರೋ ಹೇಳಿದರೆಂಬ ಕಾರಣದಿಂದ—ಅಂಗೀಕರಿಸತಕ್ಕದ್ದಲ್ಲ. ಮತ್ತು ಯಾವ ಬದಲಾವಣೆಯನ್ನೂ ಹಟದಿಂದ ಏಕ್‌ದಂ ತಂದುಕೊಳ್ಳತಕ್ಕದ್ದಲ್ಲ. ಒಂದು ಬದಲಾವಣೆ ನಮಗೆ ನಿಜವಾಗಿ ಹಿತಕರವಾಗಬೇಕಾದರೆ ಅದು ವಿಮರ್ಶನೆಯ ಫಲಿತಾಂಶವಾಗಿ ಬರಬೇಕು. ಮತ್ತು ಕ್ರಮಕ್ರಮವಾಗಿ ಬರಬೇಕು. ಒಂದಾನೊಂದು ಅಭಿಪ್ರಾಯ ಅಥವಾ ಸುಧಾರಣೆ ಎಷ್ಟೇ ಒಳ್ಳೆಯದಾಗಲಿ. ಅದನ್ನು ಜನ ಅಂಗೀ ಕರಿಸಿದ ಮಾತ್ರದಿಂದ ಅದರಲ್ಲಿಯ ಒಳ್ಳೆಯ ಅಂಶ ಅವರ ಅನುಭವಕ್ಕೆ ದೊರಕ ಲಾರದು. ಅಂಗೀಕಾರದ ಹಿಂದೆ ವಿವೇಚನೆ ಇರಬೇಕು. ಅದು ಹೇಗೆ ಒಳ್ಳೆಯದು ? ಯಾವ ಕಾರಣದಿಂದ ಒಳ್ಳೆಯದು ? ಎಂಬ ವಿಮರ್ಶನೆ ಅವರ ಮನಸ್ಸಿನಲ್ಲಿ ನಡೆದು, ಎಷ್ಟು ಮಾತ್ರ ಆ ಅಭಿಪ್ರಾಯದಲ್ಲಿ ಯುಕ್ತವೆಂದು ಅವರಿಗೆ ತೋರಿ ಬಂದೀತೋ ಅಷ್ಟು ಮಾತ್ರವನ್ನು ಅವರು ಜೀವನಕ್ಕೆ ಅನ್ವಯಿಸಿಕೊಂಡರೆ ಅದು ನಿಜವಾಗಿ ಒಂದು ಒಳ್ಳೆಯ ಪರಿಣಾಮವನ್ನುಂಟುಮಾಡಿ, ಅವರ ಜೀವನದ ಶಾಶ್ವತ ಭಾಗವಾಗಿ ನಿಂತೀತು. ಆದದ್ದರಿಂದ ಎಲ್ಲ ವಿಚಾರಗಳಲ್ಲಿಯೂ ಜನರ ಬುದ್ಧಿ ಸ್ವತಂತ್ರ ವಾಗಿ ಕೆಲಸ ಮಾಡಲಿ. ಅವರಲ್ಲಿ ಸ್ವಂತ ವಿವೇಕ ಪ್ರಬಲಿಸಲಿ—ಎಂಬುದು ಮಿಲ್ ತಾತ್ತ್ವಿಕನ ಹಾರೈಕೆ.

ಮಿಲ್ಲಿನ ಬರವಣಿಗೆಯ ರೀತಿ ಆತನ ಸ್ವಭಾವಕ್ಕೆ ನಿದರ್ಶನ. ಅದು ಶಬ್ದಾಡಂಬರ ವಿಲ್ಲದ್ದು, ಗುಂಫನ ಚಮತ್ಕಾರ ತೋರದ್ದು ; ಆದರೆ ವಿಷಯವನ್ನು ಅಸ್ಫುಟವಾಗಿ ಬಿಡತಕ್ಕದ್ದಲ್ಲ. ಪದಗಳಲ್ಲಿ ಯಾವ ಭಾವವಿಕಾರದ ಸೂಚನೆಯೂ ಇರದು, ಆದರೆ ವಿಷಯವಿಶದೀಕರಣಕ್ಕೆ ಅವಶ್ಯವಾದ ಪದಸಾಮಗ್ರಿ ಉಂಟು. ಉತ್ಪ್ರೇಕ್ಷೆಯ ಅಕ್ಷರ ಒಂದಿರದು ; ಒಂದು ಅತ್ಯುಕ್ತಿ ಇರದು ; ಒಂದು ಅಲಂಕಾರವೈಖರಿಯಿರದು. ಆದರೆ ವಿಚಾರದ ತೀಕ್ಷ್ಣತೆ, ಸತ್ಯಕುತೂಹಲದ ಕಾವು, ಅಕ್ಷರಕ್ಷರದಲ್ಲೂ ತುಂಬಿ ತುಳು ಕಾಡುತ್ತದೆ. ಸ್ವಪಕ್ಷ ನಿರೂಪಣೆಯಲ್ಲಿ ಹೆಚ್ಚಾಗಲಿ ಕಡಮೆಯಾಗಲಿ ಆಗದಂತೆ ಪ್ರತಿಪಕ್ಷದ ಅನುವಾದದಲ್ಲಿ ಪ್ರತಿಪಕ್ಷಿಯ ಮನೋಗತವು ಯಥಾವತ್ತಾಗಿ ಹೊರ ಪಟ್ಟು ಆತನಿಗೆ ಅನ್ಯಾಯವಾಗದಂತೆ, ಅಷ್ಟು ಜಾಗರೂಕತೆಯಿಂದ, ಅಷ್ಟು ಪ್ರಮಾ

ವತ್ತಾಗಿ ವಿಷಯಪ್ರತಿಪಾದನೆ ಮಾಡಿರುವುದು ಜಾನ್ ಮಿಲ್ಲಿನ ಸಾಹಿತ್ಯ ವೈಶಿಷ್ಟ್ಯ. ಬುದ್ಧಿ ಹೇಗೆ ಹೇಗೆ ಹೊಸ ಹೊಸ ಅಂಶಗಳನ್ನು ಕಂಡುಕೊಳ್ಳುತ್ತ, ಅವುಗಳನ್ನು ಪರೀಕ್ಷಿಸುತ್ತ, ಆಲೋಚನಾವಸರದ ಪ್ರಯಾಣದಲ್ಲಿ ಒಮ್ಮೊಮ್ಮೆ ಹಿಂದಕ್ಕೆ ಸರಿಯುತ್ತ, ಮತ್ತೆ ಮುಂದಕ್ಕೆ ನುಗ್ಗುತ್ತ, ಸಾವಧಾನವಾಗಿ ಸಂತತವಾಗಿ ಹೇಗೆ ಸಾಗುತ್ತದೆಯೋ ಮಿಲ್ಲಿನ ವಾಕ್ಯರಚನೆಯೂ ಹಾಗೆ ಹಾಗೆ ಬುದ್ಧಿಗತಿಯ ವೇಗವಂಕುಗಳ ವಿವರಗಳನ್ನೆಲ್ಲ ಯಥಾವತ್ತಾಗಿ ಪ್ರತಿಬಿಂಬಿಸಿಕೊಂಡು ಗಂಭೀರವಾಗಿರುತ್ತದೆ. ಪ್ರಾಮಾಣಿಕವಾದ ಲೇಖನಶೈಲಿಯೆಂದರೆ ಮಿಲ್ಲಿನದು. ಅದು ಸತ್ಯಾನ್ವೇಷಿಯ ಅಂತಃಕರಣಕ್ಕೆ ಕನ್ನಡಿ. (23–10–1957)

# ಶ್ರೀ ಜಗದ್ಗುರು ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರು

ಯಾವ ಸದ್ಗುರುಗಳವರ ಅವತಾರ ದಿವಸದ ಉತ್ಸವಕ್ಕಾಗಿ ನಾವು ಇಲ್ಲಿ ಸಭೆ ಸೇರಿರುವೆವೊ ಆ ಮಹನೀಯರ ಜೀವನಕಥೆಯ ಮುಖ್ಯಾಂಶಗಳನ್ನು ತಮ್ಮಗಳ ಜ್ಞಾಪಕಕ್ಕೆ ತರಬೇಕೆಂದು ನಮ್ಮ ಮಿತ್ರರಾದ ಬ್ರಹ್ಮಶ್ರೀ ಸೀತಾರಾಮಶಾಸ್ತ್ರಿಗಳವರು ನನಗೆ ಅಪ್ಪಣೆ ಕೊಡಿಸಿರುವರು. ಆದರೆ ಇದು ಪಂಡಿತರಿಗೆ ಮಾತ್ರ ಸಾಧ್ಯವಾದ ಕಾರ್ಯವೆಂಬುದು ಸ್ಪಷ್ಟವಾಗಿಯೇ ಇದೆ. ನಾನು ಪಂಡಿತನಲ್ಲವೆಂಬುದೂ ತಮಗೆಲ್ಲ ತಿಳಿದಿರಬಹುದು. ಗುರುಗಳವರ ಸನ್ನಿಧಿಯಲ್ಲಿಯೇ ಇದ್ದು ಅವರ ಶೀಲ ಸ್ವಭಾವಗಳನ್ನು ಕಣ್ಣಾರ ಕಂಡು ಅವರ ವಾಣಿಯನ್ನು ಕಿವಿಯಾರ ಕೇಳಿದ ಪುಣ್ಯಶಾಲಿಗಳು ಇಲ್ಲಿ ಅನೇಕರಿರುವರು. ಆ ರೀತಿ ನಾನು ಅವರೊಡನೆ ಬಳಕೆಯಿಂದಿದ್ದವನಲ್ಲ. ಅವರ ಜೀವನಚರಿತ್ರೆಯನ್ನು ಹೇಳಹೊರಡಲು ನನಗೆ ಯಾವ ವಿಧದಲ್ಲಿಯೂ ಯೋಗ್ಯತೆ ಇರುವಂತೆ ಕಾಣುವುದಿಲ್ಲ. ಅವರ ವಿಷಯದಲ್ಲಿ ಭಕ್ತಿ ಮಾತ್ರ ಇರುವುದು. ಅದನ್ನು ಬ್ರಹ್ಮಶ್ರೀ ಸೀತಾರಾಮ ಶಾಸ್ತ್ರಿಗಳವರು ಹೇಗೋ ತಿಳಿದವರಾಗಿ ನನ್ನಲ್ಲಿ ವಿಶ್ವಾಸ ತೋರಿರುವರು. ಆ ವಿಶ್ವಾಸದ ಮಾತನ್ನು ಮೀರಲಾರದವನಾಗಿ ಈ ಸಾಹಸಕೃತ್ಯಕ್ಕೆ ನಾನು ಕೈಹಾಕಬೇಕಾಗಿದೆ. ನನ್ನ ಲೋಪಗಳನ್ನು ತಾವುಗಳು ಮನ್ನಿಸಬೇಕೆಂದು ಪ್ರಾರ್ಥಿಸುವವನಾಗಿದ್ದೇನೆ.

ಈಚೆಗೆ ನಮ್ಮ ದೇಶದಲ್ಲಿ "ನೇಷನ್", "ನ್ಯಾಷನಲ್", "ನ್ಯಾಷನಲಿಸಂ"—ಎಂಬ ಪದಗಳು ಬಹುವಾಗಿ ರೂಢಿಗೆ ಬಂದಿವೆ. "ಸ್ವದೇಶಿ", "ಸ್ವರಾಜ್ಯ", "ಸ್ವಧರ್ಮ"—ಎಂಬ ಪದಗಳು ಆ ಇಂಗ್ಲಿಷ್ ಪದಗಳಲ್ಲಿಯ ಭಾವನೆಯನ್ನೇ ಸೂಚಿಸತಕ್ಕವಾಗಿವೆ. ಜನರ ಸಾಮುದಾಯಿಕವಾದ ಆತ್ಮೀಯತೆ, ಅವರ ಐಕಮತ್ಯ, ಅವರ ದೇಶೀಯವಾದ ಮಮತೆ—ಇದೇ "ನ್ಯಾಷನಲಿಸಂ" ಎಂಬ ಮಾತಿನ ಮುಖ್ಯ ಭಾವ. ಈ ಭಾವವು ಈಚೀಚೆಗೆ ನಮ್ಮಲ್ಲಿ ಪ್ರಬಲಿಸುತ್ತಿರುವುದಾದರೂ, ಅದು ಈ ದೇಶದಲ್ಲಿ ಮೊಟ್ಟಮೊದಲು ತಲೆದೋರಿದುದು ಅನೇಕ ಸಹಸ್ರ ವರ್ಷಗಳ ಹಿಂದೆ ಎಂದು ಇತಿಹಾಸಮರ್ಮವನ್ನು ತಿಳಿದವರು ಹೇಳುತ್ತಾರೆ. ಯಾವ ಮಹಾಪುರುಷರು

ಕೇರಳದೇಶದಲ್ಲವತರಿಸಿ ಹಿಮವತ್ಪರ್ವತದಲ್ಲಿ ವಿದ್ಯಾರ್ಜನೆ ಮಾಡಿ, ಅದ್ವೈತ ಸಿದ್ಧಾಂತವನ್ನು ಭರತಭೂಮಿಯಲ್ಲಿ ಪ್ರಚಾರಮಾಡಿ, ಷಣ್ಮತಗಳನ್ನು ಸಮನ್ವಯ ಗೊಳಿಸಿ, ವೇದಧರ್ಮಪರಿಪಾಲನೆಗೋಸ್ಕರ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮಠ ಗಳನ್ನು ಸ್ಥಾಪಿಸಿದರೋ ಆ ಶ್ರೀಮಚ್ಛಂಕರಾಚಾರ್ಯರೇ ನಮ್ಮ ನೇಷನ್-ಬಿಲ್ಡರ್ಸ್ —ಎಂದರೆ ಜನಪದ ಪ್ರತಿಷ್ಠಾಪಕರಲ್ಲಿ ಅಗ್ರಗಣ್ಯರೆಂದು ಐತಿಹಾಸಿಕರ ಅಭಿಪ್ರಾಯ. ನಾನಾ ಪ್ರಾಂತಗಳಲ್ಲಿಯ ಭಾರತೀಯರನ್ನು ಧಾರ್ಮಿಕ ವ್ಯವಸ್ಥೆಯಿಂದ ಏಕೀಕರಣ ಮಾಡಲು ಮೊದಲು ಶ್ರಮಿಸಿದವರು ಆದಿ ಶಂಕರರು. ದೇಶದ ರಾಜಕೀಯ ವಿಭಾಗ ಗಳು ಬೇರೆಬೇರೆಯಾಗಿ, ದೇಶೀಯರ ಭಾಷೆ ಸಂಪ್ರದಾಯ ರೀತಿಗಳು ಬೇರೆಬೇರೆಯಾಗಿ ಅವರು ಒಂದುಗೂಡುವ ಭರವಸೆಯಿಲ್ಲದ್ದಿದ್ದ ಆ ಕಾಲದಲ್ಲಿ ದೇಶದ ಮತಭೇದಗಳನ್ನು ಸಾಧ್ಯವಾದಮಟ್ಟಿಗೆ ಹೋಗಲಾಡಿಸಿ, ಮತದ ಕಟ್ಟುಪಾಡಿನಿಂದ ಭಾರತೀಯರೆಲ್ಲರನ್ನೂ ಒಟ್ಟುಗೂಡಿಸಿದವರು ಶ್ರೀ ಶಂಕರರು. ಹಿಂದೂಗಳ ಈಗಿನ ಜನಪದಭಾವಕ್ಕೆ ಅವರ ಯಾವ ಪುರಾತನವಾದ ಏಕಧರ್ಮೀಯತೆಯು ಮುಖ್ಯ ಲಕ್ಷಣವಾಗಿಯೂ ಮುಖ್ಯ ಪ್ರೋತ್ಸಾಹಕಾರಕವಾಗಿಯೂ ಇರುವುದೋ, ಮತ್ತು ಹಿಂದೂ ಜನರಿಗೆ ಲೋಕದ ಮನ್ನಣೆಯನ್ನು ಸಂಪಾದಿಸಿಕೊಡಲು ಯಾವ ವೇದಾಂತ ತತ್ತ್ವವು ಮುಖ್ಯ ಕಾರಣ ವಾಗಿರುವುದೋ, ಆ ಧರ್ಮಸಂಸ್ಥಾಪನೆಯನ್ನು, ಆ ತತ್ತ್ವಪ್ರತಿಪಾದನೆಯನ್ನು ಮಾಡಿದವರು ಆದಿ ಶಂಕರಾಚಾರ್ಯರು. ತಾವು ಮಾಡಿದ ಕಾರ್ಯವನ್ನು ಯಥೋ-ಚಿತವಾಗಿ ಮುಂದಕ್ಕೆ ನಡೆಸಿ ಶಾಶ್ವತಗೊಳಿಸಲು ಅವರು ಏರ್ಪಡಿಸಿದ ನಾಲ್ಕು ಧರ್ಮ ಪೀಠಗಳಲ್ಲಿ ಮುಖ್ಯವಾದ ಶೃಂಗಗಿರಿಯ ಸಂಸ್ಥೆಗೆ ನಮ್ಮ ಇಂದಿನ ಕಥಾನಾಯಕರು ಅಧಿಕಾರಿಗಳಾಗಿದ್ದವರಾದುದರಿಂದಲೂ, ಲಕ್ಷೋಪಲಕ್ಷ ಮಂದಿ ಜನರು ಅವರ ಶಿಷ್ಯ ರೆಂದು ಭಾವಿಸಿ ಅವರ ಉಪದೇಶ ಆಶೀರ್ವಾದಗಳನ್ನಪೇಕ್ಷಿಸುತ್ತಿದ್ದರಾದುದರಿಂದಲೂ ಅವರನ್ನು ನಮ್ಮ ದೇಶದ ಚರಿತ್ರೆಗೆ ಸಂಬಂಧಪಟ್ಟ ಒಬ್ಬ ಮಹಾಪುರುಷರೆಂದು ಪರಿಗಣಿಸುವುದು ನ್ಯಾಯವಾಗಿದೆ.

ಅವರಂತೆ ಅಂತರ್ಮುಖಿಗಳಾಗಿದ್ದವರ ಚರಿತ್ರೆಯನ್ನು ಮಾತುಗಳಿಂದ ವಿವರಿಸುವುದು ಸುಲಭವಲ್ಲ. ಬಹಿರ್ಮುಖಿಗಳ ವ್ಯಾಪಾರಗಳನ್ನು ವಿಸ್ತಾರವಾಗಿ ವರ್ಣಿಸಬಹುದು; ಏಕೆಂದರೆ ಆ ವ್ಯಾಪಾರಗಳನ್ನು ಎಲ್ಲರೂ ಬಾಹ್ಯಚಕ್ಷುಸ್ಸಿನಿಂದ ನೋಡಿ ತಿಳಿಯಬಹುದು. ಅಂತರ್ಮುಖಿಗಳ ವ್ಯಾಪಾರಗಳು ಬಹುಮಟ್ಟಿಗೆ ಒಳಗಿ ನವು; ಚರ್ಮಚಕ್ಷುಗಳಿಗೆ ಕಾಣತಕ್ಕವಲ್ಲ. ಆ ವ್ಯಾಪಾರಗಳನ್ನು ಜ್ಞಾನಿಗಳು ಮಾತ್ರವೇ ತಿಳಿಯಬಲ್ಲರು. ರಾಜರು, ಮಂತ್ರಿಗಳು, ಶೂರರು, ವರ್ತಕರು—ಇತ್ಯಾದಿಗಳ ಕಾರ್ಯ ಗಳು ಬಾಹ್ಯಪ್ರಪಂಚಕ್ಕೆ ಸೇರಿದವು. ಅವು ಪಂಚಭೂತ ಸಂಬಂಧವಾದವು. ನಾವು ಅವುಗಳ ಸ್ವರೂಪವನ್ನೂ ಫಲಾಫಲಗಳನ್ನೂ ಓದಿ ಅಥವಾ ಕೇಳಿ ತಿಳಿಯಬಹುದು. ಕವಿಗಳು, ಯೋಗಿಗಳು, ತತ್ತ್ವವಿಮರ್ಶಕರು—ಇವರ ಕಾರ್ಯಗಳು ಅಂತರಂಗ ಪ್ರಪಂಚಕ್ಕೆ ಸೇರಿದವು. ಅವು ಆತ್ಮಸಂಬಂಧವಾದವು. ಈ ವಿಧವಾದ ವೃತ್ತಿಯನ್ನೂ ಅದರ ಫಲವನ್ನೂ ಅನುಭವಿಗಳು ಮಾತ್ರವೇ ತಿಳಿಯಬಲ್ಲರು. ಸಾಧುಗಳ ಜೀವನದಲ್ಲಿ ಇಂದ್ರಿಯನಿಗ್ರಹವೆಂಬುದೇ ದೊಡ್ಡ ಯುದ್ಧ; ಆತ್ಮಧ್ಯಾನವೆಂಬುದೇ

ದೊಡ್ಡ ಚಮತ್ಕಾರ; ತಾರುಣ್ಯಭಾವವೆಂಬುದೇ ದೊಡ್ಡ ಸಾಹಸ ; ಮಂಗಳಾ-ಶಾಸನವೆಂಬುದೇ ದೊಡ್ಡ ಜಯ. ಬ್ರಹ್ಮವಸ್ತುವಿನ ವಿನಾ ಅವರ ಚಿಂತೆಗೆ ವಿಷಯವಿಲ್ಲ. ಭಗವತ್ಪ್ರಾರ್ಥನೆಯ ವಿನಾ ಅವರ ಬಾಯಿಗೆ ಕೆಲಸವಿಲ್ಲ. ಶಿಷ್ಯಹಿತದ ವಿನಾ ಅವರ ಮನಸ್ಸಿಗೆ ಕೋರಿಕೆಯಿಲ್ಲ. ಇಂತಹವರ ಕಥೆಯು ಶಾಂತಿರಸಪ್ರಧಾನ ವಾದುದು. ಶಾಂತಿರಸಕ್ಕೂ ಅತಿಭಾಷಣಕ್ಕೂ ಸರಿಹೋಗುವುದಿಲ್ಲ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂಬ ವಾಕ್ಯದಿಂದ ಯಾವ ವಸ್ತುವು ಬಾಯಿಮಾತಿಗೆ ಮಾತ್ರವೇ ಅಲ್ಲ, ಮನಸ್ಸಿಗೂ ಕೂಡ ದೂರವೆಂದು ಶ್ರುತಿಗಳು ಹೇಳಿರುವರೋ ಆ ವಸ್ತುವಿನಲ್ಲಿ ಲೀನರಾಗಿದ್ದವರ ಸ್ಥಿತಿಯನ್ನು ನಾವು ವರ್ಣಿಸುವುದು ಹೇಗೆ ? ಆದಕಾರಣ ಮಿತಪದಗಳಿಂದ ನಾವು ತೃಪ್ತರಾಗಿ, ಸಾಲದುದನ್ನು ಮನನದಿಂದ ಅರಿತುಕೊಳ್ಳಬೇಕು.

ಶ್ರೀ ಜಗದ್ಗುರು ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರು ಪೂರ್ವಾಶ್ರಮದಲ್ಲಿ ಶಿವಸ್ವಾಮಿಯೆಂಬ ವ್ಯವಹಾರ ನಾಮವುಳ್ಳವರಾಗಿದ್ದರು. ಅವರ ತಂದೆಗಳು ಪ್ರಖ್ಯಾತ ಪಂಡಿತರಾದ ಕುಣಿಗಲು ರಾಮಶಾಸ್ತ್ರಿಗಳೆಂಬುವರು. ಈ ಶಾಸ್ತ್ರಿಗಳ ಚರಿತ್ರೆಯನ್ನು ರಿಟೈರ್ಡು ಅಮಲ್ದಾರರಾದ ಮ॥ ರಾ॥ ಎಂ. ಎಸ್. ಪುಟ್ಟಣ್ಣನವರು ಕನ್ನಡದಲ್ಲಿ ಬರೆದಿರುವರು. ರಾಮಶಾಸ್ತ್ರಿಗಳವರು ಮುಲಕನಾಡು ಪಂಗಡದ ಪಂಡಿತವಂಶದಲ್ಲಿ ಹುಟ್ಟಿ, ಬಾಲ್ಯದಲ್ಲಿ ಎಡತೊರೆಯಲ್ಲಿ ಬೆಳೆದು, ಬಳಿಕ ಮೈಸೂರಲ್ಲಿ ವಿದ್ಯಾಭ್ಯಾಸಮಾಡಿ, ಅನಂತರ ತ್ರ್ಯಂಬಕ ಶಾಸ್ತ್ರಿಗಳೆಂಬ ಘನವಿದ್ವಾಂಸ ರಲ್ಲಿ ಶಾಸ್ತ್ರಾಭ್ಯಾಸಂಗ ಮಾಡಿ ಆಮೇಲೆ ಆಳಿದ ಮಹಾರಾಜರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಸ್ಥಾನದಲ್ಲಿ ವಿದ್ವನ್ಮಣಿಯೆನಿಸಿ ಪ್ರಸಿದ್ಧರಾಗಿದ್ದರು. ಆ ಕಾಲದಲ್ಲಿ ಪಂಡಿತನೆನ್ನಿಸಿಕೊಳ್ಳುವುದು ಸುಲಭವಾಗಿರಲಿಲ್ಲ ; ಏಕೆಂದರೆ ಆಗ ಗೀರ್ವಾಣ ವಿದ್ಯಾಪ್ರಾಚುರ್ಯವು ಈಗಿಗಿಂತ ಹೆಚ್ಚಾಗಿತ್ತು, ಸಾಂಗವಾಗಿ ಶಾಸ್ತ್ರಾಧ್ಯಯನ ಮಾಡಿದವರು ಈಗಿನಷ್ಟು ವಿರಳರಾಗಿರಲಿಲ್ಲ. ಅಂತಹ ಕಾಲದಲ್ಲಿ ಬಹುದೇಶ ಸಂಚಾರ ಮಾಡಿ ವಿಶಾಲವಾದ ಕೀರ್ತಿಯನ್ನು ಸಂಪಾದಿಸಿದ್ದ ರಾಮಶಾಸ್ತ್ರಿಗಳವರಲ್ಲಿ ವಿಶೇಷ ವಾದ ಮಹಿಮೆಯಿದ್ದಿರಬೇಕೆಂಬುದನ್ನು ನಾವು ಸುಲಭವಾಗಿ ಊಹಿಸಬಹುದು. ಶಿವ ಸ್ವಾಮಿಯು ಅವರ ಮೂರನೆಯ ಮಗ. ಆತನ ಜನ್ಮದಿನವು ಕ್ರಿ.ಶ. 1858ನೆಯ ವರ್ಷಕ್ಕೆ ಸರಿಯಾದ ಶಾ॥ಶ॥ ೧೭೮೦ನೆಯ ಪೈಂಗಳ ಸಂ॥ ಫಾಲ್ಗುಣ ಬಹುಳ ಏಕಾದಶಿ ಗುರುವಾರ. ಎರಡು ವರ್ಷದ ಮಗುವಾಗಿದ್ದಾಗಲೇ ಆತನಿಗೆ ಪಿತೃವಿಯೋಗ ದುಃಖವು ಸಂಭವಿಸಿತಾದರೂ, ತಾಯಿಯ ಮತ್ತು ಅಣ್ಣಂದಿರ ಪೋಷಣೆಯಲ್ಲಿ ಆತನು ಆ ದುಃಖವನ್ನು ಮರೆತು ಪ್ರವರ್ಧಮಾನನಾಗಿದ್ದನು. ಅಷ್ಟಮ ವರ್ಷದಲ್ಲಿ ಉಪನೀತನಾಗಿ ಅಧ್ಯಯನಾಗ್ನಿಕಾರ್ಯಗಳನ್ನು ವಿಧಿವತ್ತಾಗಿ ನಡಸುತ್ತಿದ್ದನು. ಶೈಶವ ದಿಂದಲೂ ಆತನಲ್ಲಿ ಅದ್ಭುತವಾದ ಭಗವದ್ಭಕ್ತಿಯೂ ಶಾಸ್ತ್ರೋತ್ಸಾಹವೂ ತೋರಿ ಬರುತ್ತಿದ್ದವೆಂದು ತಿಳಿಸುವ ಕಥೆಗಳು ಅನೇಕವಾಗಿ ಇವೆ. ಸತ್ಕುಲಪ್ರಸೂತನಾಗಿ ವೈದಿಕ ವಿದ್ವಾಂಸರ ಮನೆಯಲ್ಲಿ ಬೆಳೆಯುವ ಬಾಲಕನಿಗೆ ಈ ಗುಣಗಳು ಸಹಜವಾಗಿ ಬರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಶಿವಸ್ವಾಮಿಯು ಸುಮಾರು 9 ವರ್ಷದ ಬಾಲಕನಾಗಿದ್ದಾಗ ಶೃಂಗಗಿರಿಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳವರು ಮೈಸೂರಿಗೆ ದಯಮಾಡಿಸಿದ್ದರು. ಅವರು ಮಹಾ ತಪಸ್ವಿಗಳು, ಉದ್ದಾಮ ಪಂಡಿತರು, ವಿಶೇಷ ಪ್ರಭಾವವುಳ್ಳವರು. ಅವರು ಒಂದು ದಿನ ಮಹಾರಾಜರಾದ ಶ್ರೀ ಕೃಷ್ಣರಾಜ ಒಡೆಯರವರೊಡನೆ ಮಾತನಾಡುತ್ತಿದ್ದಾಗ, ಮೇಧಾವಿಯೂ, ತೇಜಸ್ವಿಯೂ ಆದ ವಟು ದೊರೆತರೆ ಆತನಿಗೆ ಸನ್ಯಾಸ ದೀಕ್ಷೆಯನ್ನನುಗ್ರಹಿಸಿ ಕ್ರಮೇಣ ತಮ್ಮ ಅನಂತರ ತಮ್ಮ ಪೀಠವನ್ನಡರಲು ಆತನು ಅರ್ಹನಾಗುವಂತೆ ಮಾಡಬೇಕೆಂಬ ತಮ್ಮ ಸಂಕಲ್ಪವನ್ನು ತಿಳಿಸಿದರು. ಒಡನೆಯೆ ಮಹಾರಾಜರವರಿಗೆ ತಮ್ಮ ಆಸ್ಥಾನಕ್ಕೆ ಭೂಷಣರಾಗಿದ್ದ ರಾಮಶಾಸ್ತ್ರಿಗಳ ಕುವರರ ವಿಷಯವು ಮನಸ್ಸಿಗೆ ಬಂದು ಅದನ್ನು ಅವರು ಗುರುಗಳವರಿಗೆ ಸೂಚಿಸಿದರು. ತಮ್ಮ ಅನುಗ್ರಹಕ್ಕೆ ಅಂತಹ ಸತ್ಪಾತ್ರವು ಬೇರೆಲ್ಲಿಯೂ ದೊರೆಯದೆಂಬುದನ್ನು ಸ್ವಾಮಿಗಳವರು ತತ್‍ಕ್ಷಣವೇ ಕಂಡುಕೊಂಡರು. ಅದರ ಮೇಲೆ ಶಿವಸ್ವಾಮಿಯ ಅಣ್ಣಂದಿರೂ ವಿದ್ವಾಂಸರೂ ಆದ ಲಕ್ಷ್ಮೀನರಸಿಂಹ ಶಾಸ್ತ್ರಿಗಳವರಲ್ಲಿ ಈ ಪ್ರಸ್ತಾಪ ನಡೆಯಲು, ಅವರು ಗುರ್ವನುಗ್ರಹದಿಂದ ಸಂತೋಷಪಟ್ಟವರಾಗಿ ತಮ್ಮ ತಮ್ಮನನ್ನು ಗುರುಚರಣದಲ್ಲರ್ಪಿಸಲು ಒಪ್ಪಿಕೊಂಡರು. ಶಿವಸ್ವಾಮಿಯು ಸಂನ್ಯಾಸಿಯಾಗದಿದ್ದಿದ್ದರೆ ತನ್ನ ಮನೆತನಕ್ಕೆ ಎಂತಹ ಪ್ರಾಪಂಚಿಕ ಸಂಪತ್ತನ್ನೂ ಪ್ರಾಶಸ್ತ್ಯವನ್ನೂ ಸಂಪಾದಿಸಿಕೊಡುತ್ತಿದ್ದನೆಂಬುದನ್ನು ಲಕ್ಷ್ಮೀನರಸಿಂಹ ಶಾಸ್ತ್ರಿಗಳು ಲೆಕ್ಕಿಸದೆ ಇದ್ದುದರಿಂದ ಹಿಂದೂಲೋಕಕ್ಕೂ ಧರ್ಮಕ್ಕೂ ಮಹದುಪಕಾರವಾಯಿತು. ಅವರ ಸಂಸಾರವು ಅಂಗೀಕರಿಸಿದ ನಷ್ಟವು ಜಗತ್ತಿಗೆ ಪರಮ ಲಾಭವಾಗಿ ಪರಿಣಮಿಸಿತು.

ಕ್ರಿ.ಶ. 1867ಕ್ಕೆ ಸರಿಯಾದ ಶಾ॥ ಶ॥ ೧೭೮೯ನೆಯ ಅಕ್ಷಯ ಸಂ॥ ಆಷಾಢ ಬ॥ ಷಷ್ಠಿ ದಿವಸ ಶಿವಸ್ವಾಮಿ ಎಂಬ ಒಂಬತ್ತು ವರ್ಷದ ವಟುವು ಶ್ರೀ ನೃಸಿಂಹ ಭಾರತೀ ಗುರುಕರಕಮಲದಿಂದ ಸಂನ್ಯಾಸವನ್ನು ಸ್ವೀಕರಿಸಿ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಎಂಬ ನಾಮಧೇಯವನ್ನು ಪಡೆದನು. ಆ ಬಾಲ ಯತಿಗಳಿಗೆ ತರ್ಕ ವ್ಯಾಕರಣಾದಿ ಶಾಸ್ತ್ರಗಳನ್ನು ಬೋಧಿಸುವುದಕ್ಕೆ ಬಹುಶಾಸ್ತ್ರ ಪಾರಂಗತರಾದ ಲಕ್ಷ್ಮೀನರಸಿಂಹ ಶಾಸ್ತ್ರಿಗಳವರೇ ನಿಯಮಿತರಾದರು. ಅದ್ವೈತ ತತ್ತ್ವಗಳನ್ನೂ, ಯೋಗರಹಸ್ಯಗಳನ್ನೂ, ಮಠ ಸಂಪ್ರದಾಯಗಳನ್ನೂ ಉಪದೇಶಿಸುವ ಕಾರ್ಯವನ್ನು ಶ್ರೀ ಸ್ವಾಮಿಗಳವರೇ ಕೈಗೊಂಡರು. ಈ ರೀತಿ ಭಾವಿ ಜಗದ್ಗುರುಗಳವರ ಪ್ರಜ್ಞೆಯೂ, ತಪಶ್ಶಕ್ತಿಯೂ, ವಾಗ್ಮಿತೆಯೂ, ವರ್ಚಸ್ವಿತೆಯೂ ದಿನೇ ದಿನೇ ಅಭಿವರ್ಧಿಸುತ್ತಿದ್ದವು. ಕ್ರಿ.ಶ. 1868ರಲ್ಲಿ ವೃದ್ಧ ಗುರುಗಳವರು ಬಾಲ ಗುರುಗಳವರೊಡನೆ ಬೆಂಗಳೂರು ಮುಂತಾದ ಸ್ಥಳಗಳಿಗೆ ಚಿತ್ತೈಸಿ, ಬಾಲ ಗುರುಗಳವರಿಗೆ ಶಿಷ್ಯ ಮಂಡಲಿಯ ಪರಿಚಯವನ್ನು ಮಾಡಿಸಿದರು. ಅಂದಿನಿಂದ 12 ವರ್ಷಗಳ ತರುವಾಯ, ಎಂದರೆ ಕ್ರಿ.ಶ. 1880ಕ್ಕೆ ಸರಿಯಾದ ಶಾ॥ಶ॥ ೧೮೦೨ನೆಯ ಪ್ರಮಾಧಿ ಸಂ॥ ಜ್ಯೇಷ್ಠ ಶು॥ ದ್ವಿತೀಯಾ ದಿವಸ ಶ್ರೀ ನೃಸಿಂಹ ಭಾರತೀಗಳವರು ಪಾರ್ಥಿವ ಕಳೇಬರವನ್ನು ವಿಸರ್ಜಿಸಲು ಸಚ್ಚಿದಾನಂದ ಶಿವಾಭಿನವರು ತಮ್ಮ 21ನೆಯ ವರ್ಷದಲ್ಲಿ–ಜಗದ್ಗುರು ಪೀಠಾರೋಹಣವನ್ನು ಮಾಡಿದರು. ಇದು ಆಳಿದ ಪ್ರಭುಗಳಾದ ಶ್ರೀ ಚಾಮರಾಜ

ಒಡೆಯರವರು ರಾಜ್ಯಭಾರವನ್ನು ವಹಿಸಿದುದಕ್ಕೆ ಕೆಲವು ತಿಂಗಳುಗಳ ಹಿಂದೆ. ರಾಜ್ಯಾಧಿಪತ್ಯದ ಭಾರಕ್ಕಿಂತಲೂ ಮಠಾಧಿಪತ್ಯದ ಭಾರವು ಹಗುರವಾದುದಲ್ಲವೆಂಬುದನ್ನು ವಿಚಾರಪರರೆಲ್ಲರೂ ಒಪ್ಪುವರು. ಅದರಲ್ಲಿಯೂ ಶ್ರೀಮಚ್ಛಂಕರ ಭಗವತ್ಪಾದರಿಂದ ಸ್ಥಾಪಿತವಾಗಿ, ವಿದ್ಯಾರಣ್ಯಾದಿ ಮಹಾಮಹಿಮರಿಂದ ಅಲಂಕೃತವಾದ ಶೃಂಗಗಿರಿಯ ಪೀಠದ ಗೌರವವು ಅನನ್ಯವಾದುದು. ಅದಕ್ಕೆ ಬೇಕಾದ ವಿದ್ಯಾವೈದುಷ್ಯಗಳನ್ನೂ ಶಮದಮಾದಿ ಸದ್ಗುಣಗಳನ್ನೂ, ತಪಶ್ಶಕ್ತಿಯನ್ನೂ ಸಚ್ಚಿದಾನಂದ ಶಿವಾಭಿನವ ಸ್ವಾಮಿಗಳವರು ನೈಜವಾದ ಪ್ರತಿಭೆಯಿಂದಲೂ ಆತ್ಮನಿಷ್ಠೆಯಿಂದಲೂ ಗುರು ಪ್ರಸಾದದಿಂದಲೂ ಸಂಪೂರ್ಣವಾಗಿ ಪಡೆದುಕೊಂಡಿದ್ದರು. ನರಸಿಂಹ ಭಾರತಿಗಳವರು ಇವರಲ್ಲಿ ಎಷ್ಟು ಗಾಢವಾದ ಪ್ರೇಮವನ್ನಿಟ್ಟು ಎಷ್ಟು ಮಮತೆಯಿಂದ ಅವರನ್ನು ಸಲಹಿ, ಎಷ್ಟು ಜಾಗರೂಕತೆಯಿಂದ ಅವರನ್ನು ತಯಾರು ಮಾಡಿದ್ದರೆಂಬುದು ಅವರ ಅನೇಕವಾದ ಗುರುಸ್ತೋತ್ರ ವಚನಗಳಿಂದ ವ್ಯಕ್ತವಾಗುತ್ತದೆ. ನರಸಿಂಹ ಭಾರತಿಗಳವರು ಮಠಕ್ಕೆ ಸಂಪಾದಿಸಿದ್ದ ಗೌರವವೂ ಐಶ್ವರ್ಯವೂ ತಚ್ಛಿಷ್ಯರ ಕಾಲದಲ್ಲಿ ಹೆಚ್ಚಾಗಿ ಬೆಳೆದವು. ಇವರ ಕಾಲದಲ್ಲಿ ಮಠದಲ್ಲಿ ಪಾಠ ಪುರಾಣಗಳು ಎಂದಿನಂತೆ ನಡೆಯುತ್ತಿದ್ದವು.

ಸಚ್ಚಿದಾನಂದ ಶಿವಾಭಿನವ ಶ್ರೀಚರಣರ ಕಾಲದಲ್ಲಿ ನಡೆದ ಚರಿತ್ರಾರ್ಹವಾದ ಸಂಗತಿಗಳಲ್ಲಿ ಅತಿಮುಖ್ಯವಾದುದು ಅವರ ಕಾಲಟೀ ಯಾತ್ರೆ. ಆದಿಶಂಕರರ ಜನ್ಮಸ್ಥಾನವಾದ ಕಾಲಟ್ಯಗ್ರಹಾರದ ಪ್ರದೇಶವು ಅನ್ಯಮತೀಯರಿಂದ ಆಕ್ರಾಂತವಾಗಿದ್ದುದನ್ನು ಮ॥ ರಾ॥ ವಿ. ಪಿ. ಮಾಧವರಾಯರು ತಿರುವಾಂಕೂರಿನಲ್ಲಿ ದಿವಾನರಾಗಿದ್ದಾಗ ಕಂಡು ವಿಷಾದಪಟ್ಟು, ಆ ಪ್ರದೇಶವನ್ನು ಶೃಂಗಗಿರಿಮಠಕ್ಕೆ ಬಿಡಿಸಿಕೊಟ್ಟು, ಅಲ್ಲಿ ಗುರು ಮಂದಿರವನ್ನು ನಿರ್ಮಾಣ ಮಾಡಿಸಿ, ಅದರಲ್ಲಿ ಗುರುಬಿಂಬವನ್ನು ನಿಲ್ಲಿಸಲು ಸಹಾಯ ಮಾಡಬೇಕೆಂದು ಯೋಚಿಸಿದರು. ಈ ಪ್ರಯತ್ನದಲ್ಲಿ ದಿವಾನ್ ಬಹದ್ದೂರ್ ರಾವ್ ಚಂದ್ರಯ್ಯನವರೂ ಭಾಗಿಗಳಾಗಿದ್ದರು. ಶ್ರೀಸ್ವಾಮಿಗಳವರು ಈ ಸಮಾರಂಭಕ್ಕೆ ಮುಖ್ಯಪ್ರೇರಕರಾಗಿಯೂ ಪ್ರೋತ್ಸಾಹಕರಾಗಿಯೂ ಇದ್ದರು. ಅದಕ್ಕಾಗಿ ಅವರು ಕ್ರಿ.ಶ. 1907ರಲ್ಲಿ—ಎಂದರೆ ಕಳೆದ ಸೌಮ್ಯಸಂವತ್ಸರದಲ್ಲಿ ಕಾಲಟಿಗೆ ಯಾತ್ರೆ ಬೆಳೆಸಿ ಅಲ್ಲಿ ಪೂರ್ಣಾನದೀತಟದಲ್ಲಿ ಶಂಕರರ ಜನನಸ್ಥಾನದಲ್ಲಿ ಗುರುಭವನವನ್ನು ಕಟ್ಟಿಸಿ ಅದರಲ್ಲಿ ಅಮೃತಶಿಲಾಮಯವಾದ ಶಂಕರವಿಗ್ರಹವನ್ನು ಪ್ರತಿಷ್ಠೆಗೊಳಿಸಿ ಆ ಬಳಿಕ ಶಾರದಾದೇವೀ ಭವನವನ್ನು ನಿರ್ಮಾಣಗೊಳಿಸಿ ಆ ಬಳಿಕ ಶೃಂಗಗಿರಿಗೆ ಹಿಂದಿರುಗಿದರು. ಈ ದೇಶಪರ್ಯಟನ ಮಹೋತ್ಸವವು ನಾಲ್ಕು ವರ್ಷಗಳ ಕಾಲ ನಡೆಯಿತು. ಶ್ರೀಯವರು ಚಿತ್ತೈಸಿದ ಸ್ಥಳಗಳಲ್ಲೆಲ್ಲಾ ಜನರು ತೋರಿದ ಸಂಭ್ರಮವೂ, ಭಕ್ತಿಯೂ ಹರ್ಷಜನಕಗಳಾಗಿದ್ದವು. ರಾಜಾಧಿರಾಜರಲ್ಲಿ ತೋರುವ ಗೌರವಕ್ಕಿಂತ ಹತ್ತರಷ್ಟು ಮಿಗಿಲಾದ ಸನ್ಮಾನವನ್ನು ಜನರು ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ಜಗದ್ಗುರುಗಳ ವಿಷಯದಲ್ಲಿ ತೋರಿಸುತ್ತಿದ್ದರು. ಹಿಂದೂಗಳ ಮತೋತ್ಸಾಹವು ಇನ್ನೂ ಉಳಿದಿದೆಯೆಂಬುದಕ್ಕೂ, ವೇದಧರ್ಮೋಜ್ಜೀವನದ ಆಸೆಗೆ ಇನ್ನೂ ಆಸ್ಪದವಿದೆಯೆಂಬುದಕ್ಕೂ, ಸದ್ಗುರುಸೇವಾಸಕ್ತಿಯು ಈ ದೇಶದವರಲ್ಲಿ ಇನ್ನೂ ಸಂಪೂರ್ಣವಾ

ನಷ್ಟವಾಗಿಲ್ಲವೆಂಬುದಕ್ಕೂ ಆಗ ಶಿಷ್ಯಕೋಟಿಯು ತೋರಿದ ಔತ್ಸುಕ್ಯವು ದೃಷ್ಟಾಂತವಾಗಿದೆ. ಹಿಂದೂಗಳು ಮಾತ್ರವೇ ಅಲ್ಲ. ಮಹಮ್ಮದೀಯರು ಮೊದಲಾದ ಇತರ ಮತಗಳವರೂ ಶ್ರೀಗಳವರನ್ನು ಪೂಜಿಸಿ ಅವರ ಆಶೀರ್ವಾದವನ್ನು ಪಡೆಯಲು ನಾವು ಮುಂದೆ ತಾವು ಮುಂದೆ ಎಂದು ಬರುತ್ತಿದ್ದರು. ಈ ವಿಜಯಯಾತ್ರೆಯ ಪ್ರಾರಂಭದಲ್ಲಿಯೇ ಸ್ವಾಮಿಗಳವರು ಬೆಂಗಳೂರಿಗೆ ದಯಮಾಡಿಸಿ ಇಲ್ಲಿ ನಮ್ಮೆಲ್ಲರಿಗೂ ದರ್ಶನವನ್ನಿತ್ತರಲ್ಲದೆ, ಪ್ರತಿದಿನವೂ ನಮ್ಮ ಸ್ಮರಣೆಗೆ ವಿಷಯರಾಗಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡುವುದಕ್ಕೋಸ್ಕರವೋ ಎಂಬಂತೆ ಇಲ್ಲಿ ಶಂಕರಾಲಯವನ್ನು ನಿರ್ಮಿಸಿ ಈ ದಿವ್ಯ ಭವನಕ್ಕೆ ಶಂಕುಸ್ಥಾಪನೆ ಮಾಡಿಸಿದರು. ಹಿಂದಿರುಗುವಾಗಲೂ ಈ ಪಟ್ಟಣಕ್ಕೆ ಬಂದು ಇದೇ ಕಟ್ಟಡದಲ್ಲಿದ್ದು ಶಿಷ್ಯರನ್ನನುಗ್ರಹಿಸಿದರಲ್ಲದೆ, ಇಲ್ಲಿ ಗೀರ್ವಾಣ ಪ್ರೌಢ ಕಲಾಶಾಲೆಯನ್ನೂ ಏರ್ಪಡಿಸಿದರು.

ಈ ರೀತಿ ಬಹು ವಿಧದಲ್ಲಿ ಸದ್ಧರ್ಮ ಪ್ರಚಾರಕ್ಕಾಗಿ ಶ್ರಮಿಸಿ ಮೂರು ನಾಲ್ಕು ಬಾರಿ ದೂರದೇಶಕ್ಕೆ ಸಂಚಾರ ಮಾಡಿ, ನಾನಾ ಜನರ ಗೌರವಕ್ಕೆ ಪಾತ್ರರಾಗಿ ಅವರ ಭಗವದ್ಭಕ್ತಿ ಸಪ್ರ್ವರ್ತನೆಗಳಿಗೆ ಪ್ರೇರೇಪಕರಾಗಿದ್ದ ಮಹನೀಯರು—ನಮ್ಮ ದುರದೃಷ್ಟದಿಂದ—ವೃದ್ಧರಾಗುವವರೆಗೂ ದೇಹಧಾರಣೆ ಮಾಡದೆ ಹೋದರು. ಈಗಿನ ನಮ್ಮ ಆಪತ್ಕಾಲದಲ್ಲಿ ಅಂತಹವರ ಅನುಗ್ರಹವು ಅತ್ಯಂತಾವಶ್ಯಕವಾಗಿದೆ. ಬಹುಶಃ ಅವರು ಇನ್ನೂ ಕೆಲವು ಕಾಲ ಸಶರೀರವಾಗಿ ಇದ್ದಿದ್ದರೆ ನಮ್ಮ ಸಮಾಜದಲ್ಲಿ ಈಚಿಗೆ ತಲೆದೋರಿರುವ ಅನೇಕ ವ್ಯಾಧಿಗಳು ಪ್ರಬಲಿಸುವಂತೆ ಆಗುತ್ತಿರಲಿಲ್ಲವೆಂದು ನಾವು ಧಾರಾಳವಾಗಿ ನಂಬಬಹುದು. ಬಹುಶಃ ನಮ್ಮ ಧರ್ಮೋಪೇಕ್ಷೆಗಾಗಿ ನಮ್ಮನ್ನು ಶಿಕ್ಷಿಸಿ ನಾವು ತಕ್ಕ ಬುದ್ಧಿ ಕಲಿಯುವಂತೆ ಮಾಡುವುದಕ್ಕೋಸ್ಕರವೋ ಎಂಬಂತೆ ಅವರು ನಮ್ಮ ಸಾಮಾಜಿಕ ರೋಗಗಳು ಉತ್ಕಟಾವಸ್ಥೆಗೆ ಬರುವುದಕ್ಕೆ ಮುಂಚೆಯೇ ನಮ್ಮನ್ನು ಬಿಟ್ಟು ತೆರಳಿದರು. ಕಾಲಟಿಗೆ ಪ್ರಯಾಣಬೆಳಸುವುದಕ್ಕೆ ಮುಂಚೆಯೇ ಅವರು ದೇಹದಾರ್ಢ್ಯವಿಲ್ಲದವರಾಗಿದ್ದರು. ಯತ್ಯಾಶ್ರಮಿಗಳು ನಿಶ್ಚಿಂತರು. ವೈಭವಪಟ್ಟು ಸುಖಿಸುವುದಕ್ಕೆ ಅವರಿಗಿರುವಷ್ಟು ಅನುಕೂಲಗಳು ಮತ್ತಾರಿಗೂ ಇಲ್ಲವೆಂದು ಸಾಮಾನ್ಯರಲ್ಲಿ ಬಹುಮಂದಿ ತಿಳಿದುಕೊಂಡಿರುವರು. ಕೆಲವುಂದಿ ಮಠಾಧಿಪತಿಗಳ ಚರ್ಯೆಯನ್ನು ನೋಡಿದರೆ ಅದು ನ್ಯಾಯವೆಂದೂ ಕಾಣಬಹುದು. ಆದರೆ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತಿಗಳವರನ್ನು ನೋಡಿ. ಅಥವಾ ಅವರ ವೃತ್ತಾಂತವನ್ನು ಕೇಳಿರುವವರು ಅವರ ವ್ರತನಿಯಮಗಳು ಅತಿಗಹನವಾದವೆಂಬುದನ್ನು ಬಲ್ಲರು. ನಿಜವಾದ ಬ್ರಹ್ಮಜ್ಞಾನವನ್ನು ಪಡೆದವರು ಎಲ್ಲಿಯೂ ದೇಹಾಭಿಮಾನವನ್ನು ತೋರುವುದಿಲ್ಲ. ದೇಹವು ಬರಿಯ ಕಟ್ಟಿಗೆ. ನಶಿಸಲು ಯೋಗ್ಯವಾದುದು—ಎಂಬ ಭಾವನೆಯಿಂದ ದೇಹವನ್ನು ದಂಡಿಸಿ, ಪಾರ್ಥಿವಾಂಶಗಳನ್ನು ಕಳೆದುಕೊಳ್ಳುವುದು ಅವರ ಪದ್ಧತಿ. ಇಟಲೀ ದೇಶದಲ್ಲಿ ಕ್ರಿ.ಶ. 12ನೆಯ ಶತಮಾನದಲ್ಲಿ ಲೋಕೋಪಕಾರಿಯಾಗಿ ಬಾಳಿದ ಸೆಂಟ್ ಫ್ರಾನ್ಸಿಸ್ ಎಂಬ ಸಾಧುವು ದೇಹವನ್ನು ತಕ್ಕಂತೆ ಪೋಷಿಸದೆ ನಿರಾಕರಿಸಿದ್ದನಾದಕಾರಣ ಆತನು ಅವಸಾನ ಕಾಲದಲ್ಲಿ ದೇಹವನ್ನು "ಎಲೈ ಪ್ರಿಯ ಸಹೋದರನಾದ ಗಾರ್ದಭನೆ" ಎಂದು





ಅನುತಾಪದಿಂದ ಸಂಬೋಧಿಸಿ ಅವರ ಕ್ಷಮಾಪಣೆಯನ್ನು ಬೇಡಿಕೊಂಡನಂತೆ. (ಆ ದೇಶದಲ್ಲಿ ಗಾರ್ದಭವು ಕುದುರೆಯಂತೆ ಒಂದು ವಾಹನ : ಆತನು ದೇಹವನ್ನು ಜೀವನ ವಾಹನವೆಂದು ಭಾವಿಸಿದ್ದನು. ಸಕಲ ಜೀವರಾಶಿಗಳನ್ನೂ ಅಣ್ಣ. ತಮ್ಮ. ಅಕ್ಕ. ತಂಗಿ ಎಂದು ಸಂಬೋಧಿಸಿ ಪ್ರೀತಿಸುವುದು ಆತನಿಗೆ ವಾಡಿಕೆಯಾಗಿತ್ತು.) ನಮ್ಮ ದೇಶದ ಯತಿ ಸಾಧುಗಳಂತೂ ಕಾಯಕ್ಲೇಶಗಳನ್ನು ಸಹಿಸುವುದರಲ್ಲಿ ನಿಸ್ಸೀಮರು. ನಮ್ಮ ಸ್ವಾಮಿಗಳವರು ಸ್ವತಃ ಬಾಹ್ಯಾಚಾರಗಳಲ್ಲಿ ದೃಷ್ಟಿಯಿಡಬೇಕಾದವರಲ್ಲದೇ ಇದ್ದರೂ, ಶಿಷ್ಯಮಂಡಲಿಗೆ ಮಾರ್ಗದರ್ಶಕರಾಗಿರುವುದಕ್ಕೋಸ್ಕರ ಆರ್ಷೇಯವಾಗಿ ಬಂದ ಸಂಪ್ರದಾಯಗಳನ್ನು ಸ್ವಲ್ಪವೂ ತಪ್ಪದೆ ನೆರವೇರಿಸುತ್ತಿದ್ದರು. ಅವರ ಕಾಲದಲ್ಲಿ ಸೋಮಾರಿತನದಿಂದಲಾಗಲಿ. ಬೇಸರದಿಂದಲಾಗಲಿ. ಪೊಳ್ಳು ಹರಟೆಯಿಂದಲಾಗಲಿ ವ್ಯರ್ಥವಾಗಿ ಕಳೆಯಲು ಅರೆನಿಮಿಷವೂ ಇರಲಿಲ್ಲ. ಮೂರು ಹೊತ್ತೂ ಸ್ನಾನ, ಧ್ಯಾನ, ಜಪ, ಪೂಜೆ. ಪಾಠ, ವ್ಯಾಖ್ಯಾನ ಇವು ಎಡೆಬಿಡದೆ ನಡೆಯುತ್ತಿದ್ದವು. ನಿದ್ರಾಹಾರಗಳಲ್ಲಿ ಅವರು ವ್ರತವುಳ್ಳವರಾಗಿ. ಉಪವಾಸಕ್ಕೆ ಹೆದರದವರಾಗಿದ್ದರು. ಇಂತಹವರ ಶರೀರವು ಬೇಗನೆ ಗಳಿತವಾದುದು ಸ್ವಾಭಾವಿಕವಾದುದೆಂದೇ ಹೇಳಬೇಕು. ಶ್ರೀ ಆದಿಶಂಕರರ ಚರಿತ್ರೆಯಿಂದ ಅವರಿಗೂ ಹೀಗೆಯೇ ಆಯಿತೆಂದು ತಿಳಿಯಬರುವುದು. ನಮ್ಮ ಸ್ವಾಮಿಗಳವರು ಶೃಂಗಗಿರಿಗೆ ಹಿಂದಿರುಗುವಾಗ ವ್ಯಾಧಿಗ್ರಸ್ತರಾಗಿದ್ದು, ಅಲ್ಲಿ ಸೇರಿದ ಮೇಲೆ ಹಾಸಿಗೆ ಹಿಡಿಯಬೇಕಾಯಿತು. ಆದರೂ ಆ ಯಾತನೆಯನ್ನನುಭವಿಸುತ್ತಿದ್ದಾಗಲೂ ಅವರು ಯಾವ ನಿಯಮವನ್ನೂ ಬಿಟ್ಟವರಲ್ಲ ; ಅವರ ಪ್ರಸನ್ನತೆಯೂ ಪ್ರಶಾಂತತೆಯೂ ಅರೆಕ್ಷಣವೂ ಅವರಿಂದ ಅಗಲಲಿಲ್ಲ. ಅವರು ಎಂದಿನಂತೆಯೇ ನಗುಮೋರೆಯುಳ್ಳವರಾಗಿ ದೇಹದ ನೋವನ್ನು ಗಮನಿಸದೆ, ಶ್ರೀಮನ್ಮಹಾರಾಜರವರು ಕಳುಹಿದ ಘನವೈದ್ಯರ ಪ್ರಯತ್ನಗಳೆಲ್ಲವೂ ನಿರರ್ಥಕವಾಗುತ್ತಿರಲು, ಕಡೆಗೆ 1912ನೇ ಇಸ್ವಿ ಮಾರ್ಚಿ 20ಕ್ಕೆ ಸರಿಯಾದ ಪರೀಧಾವಿ ಸಂ॥ ಚೈತ್ರ ಶುದ್ಧ ದ್ವಿತೀಯಾ ದಿವಸ ಜೀರ್ಣಕಳೇಬರವನ್ನು ತ್ಯಜಿಸಿ ಬ್ರಹ್ಮೈಕ್ಯವನ್ನು ಹೊಂದಿದರು. ಆದರೆ ಅವರ ಯಶಃಕಾಯವು ಎಂದಿಗೂ ನಷ್ಟವಾಗತಕ್ಕುದಲ್ಲ.

ಅವರು ಸಶರೀರರಾಗಿಯೇ ಮುಕ್ತಾವಸ್ಥೆಯನ್ನಡರಿದ್ದರೆಂಬುದು ಬಹುಮಂದಿಗೆ ತಿಳಿದಿರುವ ವಿಷಯ. ಅವರು ಜೀವನ್ಮುಕ್ತರಾಗಿದ್ದ ಶ್ರೀ ಸದಾಶಿವ ಬ್ರಹ್ಮೇಂದ್ರರನ್ನೇ ಆದರ್ಶವಾಗಿಟ್ಟುಕೊಂಡು. ಆಗಾಗ ಆ ಯೋಗಿವರ್ಯರ 'ಆತ್ಮವಿದ್ಯಾವಿಲಾಸ'ವೆಂಬ ಗ್ರಂಥದ ಶ್ಲೋಕಗಳನ್ನು ಕೇಳುವ ಮತ್ತು ಹೇಳುವ ಆನಂದದಲ್ಲಿ ಮಗ್ನರಾಗಿರುತ್ತಿದ್ದರು. ಸ್ವಾಮಿಗಳವರ ಅದ್ವೈತ ತತ್ತ್ವಪ್ರತಿಪಾದಕಗಳಾದ ವಾಕ್ಯಗಳಿಂದಲೂ, ಅವರ ಕಡೆಯ ದಿನಗಳ ವರ್ತನೆಯಿಂದಲೂ ಅವರು ಬ್ರಹ್ಮಸಾಕ್ಷಾತ್ಕಾರವನ್ನು ಪಡೆದಿದ್ದವರೆಂಬುದು ವಿಶದವಾಗಿ ತೋರಿಬರುವುದು. ಅವರು ಸರ್ವದಾ ಪ್ರಶಾಂತರಾಗಿ. ಪ್ರಸನ್ನವದನರಾಗಿ. ಮೃದುವಚನರಾಗಿ. ಸಕಲರ ವಿಷಯದಲ್ಲಿಯೂ ಏಕರೀತಿಯಾದ ಕರುಣೆಯನ್ನು ತೋರುವವರಾಗಿದ್ದರು. ಪಂಡಿತರಿಗೆ ಹೇಗೆಯೋ ಪಾಮರರಿಗೂ ಹಾಗೆಯೇ. ಧನಿಕರಿಗೆ ಹೇಗೆಯೋ ಧನಹೀನರಿಗೂ ಹಾಗೆಯೇ.

ಪ್ರಬಲರಿಗೆ ಹೇಗೆಯೋ ಸಾಮಾನ್ಯರಿಗೂ ಹಾಗೆಯೇ, ವೃದ್ಧರಿಗೆ ಹೇಗೆಯೋ ಬಾಲಕರಿಗೂ ಹಾಗೆಯೇ ಸುಲಭರಾಗಿ, ಪ್ರಿಯರಾಗಿ ಇರುತ್ತಿದ್ದರು.

ಈ ದಿನ ಬೆಳಿಗ್ಗೆ ವೇದಮೂರ್ತಿ ಸೀತಾರಾಮ ಶಾಸ್ತ್ರಿಗಳವರು ಭಾವಗರ್ಭಿತ ವಾದ ಕಥೆಯೊಂದನ್ನು ಹೇಳಿದರು. ಶೃಂಗಗಿರಿಯಲ್ಲಿ ಸ್ವಾಮಿಗಳನ್ನು ಶರಣು ಹೊಂದಿ ಅವರ ವಿಶ್ವಾಸಕ್ಕೆ ಪಾತ್ರವಾಗಿದ್ದ ಪ್ರಾಣಿಗಳಲ್ಲಿ ನಾಯಿಯೊಂದಿತ್ತಂತೆ. ಅದಕ್ಕೆ ಅವರು "ಗುಂಡ"ನೆಂದು ಹೆಸರಿಟ್ಟಿದ್ದರಂತೆ. ಅದು ಅವರು ಹಾಕಿಸಿದ ಅನ್ನದ ವಿನಾ ಏನನ್ನೂ ತಿನ್ನದೆ ಸ್ವಾಮಿಗಳು ಹೊರಗೆ ಹೊರಟಾಗ ಅವರ ಹಿಂದೆಯೇ ತಿರು ಗಾಡುತ್ತಾ, ಉಳಿದ ಕಾಲದಲ್ಲಿ ಮಠದ ಬಾಗಿಲ ಬಳಿ ಮಲಗಿರುತ್ತಿತ್ತಂತೆ. ತುಂಗಾ ನದಿಯ ಮತ್ತೊಂದು ದಡದಲ್ಲಿರುವ ನೃಸಿಂಹವನದಲ್ಲಿ ಬಹುಕಾಲದಿಂದಿದ್ದ ಘಟ ಸರ್ಪವೊಂದನ್ನು ಸ್ವಾಮಿಗಳವರು ಗುರುತಿಟ್ಟುಕೊಂಡಿದ್ದರಂತೆ. ಅದು ಅವರ ಗುರುಗಳ ದಿನದಿಂದಲೂ ಆ ಕಾಡಿನಲ್ಲಿ ಸಂಚರಿಸುತ್ತಿತ್ತಂತೆ. ಒಂದಾನೊಂದು ದಿನ ಬೆಳಿಗ್ಗೆ ಯಾರೋ ಆ ಹಾವನ್ನು ಬಂದೂಕಿನಿಂದ ಹೊಡೆದು ಕೊಂದುಬಿಟ್ಟರಂತೆ. ಅದನ್ನು ಮೇಲೆ ಹೇಳಿದ ನಾಯಿಯು ಹೇಗೆಯೋ ತಿಳಿದುಕೊಂಡು, ಸ್ವಾಮಿಗಳವರು ಮಧ್ಯಾಹ್ನ ಸ್ನಾನಕ್ಕಾಗಿ ಹೊರಗೆ ಹೊರಟ ಕೂಡಲೆ ಅವರ ದಾರಿಗೆ ಅಡ್ಡಗಟ್ಟಿ, ನಿರ್ಬಂಧದಿಂದ ಅವರನ್ನು ಆ ಸರ್ಪಹತ್ಯೆಯ ಸ್ಥಳಕ್ಕೆ ಕರೆದುಕೊಂಡು ಹೋಯಿತಂತೆ. ಸ್ವಾಮಿಗಳ ವರು ಅದನ್ನು ಕಂಡಕೂಡಲೆ ಕನಿಕರಗೊಂಡವರಾಗಿ, "ಈ ಸ್ಥಳವು ಹಾವಿನದು; ಅದರ ಸ್ಥಳವನ್ನು ನಾವು ಆಕ್ರಮಿಸಿರುವುದೂ ಅಲ್ಲದೆ ಅದಕ್ಕೆ ಹಿಂಸೆ ಮಾಡಿ ಅದನ್ನು ಕೊಲ್ಲಬಹುದೇ" ಎಂದು ಮುಂತಾಗಿ ಹೇಳಿ ಬಹು ವ್ಯಸನವನ್ನು ಸೂಚಿಸಿದರಂತೆ ಈ ಬಗೆಯ ವಿಶ್ವಮೈತ್ರಿಯು ಬ್ರಹ್ಮವೇತ್ತರ ಲಕ್ಷಣ. ಈಶಾವಾಸ್ಯಾದ್ಯುಪ- ನಿಷತ್ತುಗಳಲ್ಲಿಯೂ ಭಗವದ್ಗೀತಾದಿ ಸಚ್ಛಾಸ್ತ್ರಗಳಲ್ಲಿಯೂ ಯಾವ ಸರ್ವಭೂತಹಿತ ನಿರತತೆಯನ್ನು ಪರಮೋತ್ತಮ ಗುಣವೆಂದು ಸೂಚಿಸಿರುವರೋ ಅದನ್ನು ಶ್ರೀ ಸ್ವಾಮಿ ಗಳವರು ತಮ್ಮ ದಿನಂಪ್ರತಿಯ ನಡವಳಿಕೆಯಲ್ಲಿ ತೋರಿಸುತ್ತಿದ್ದರು.

ಅವರು ಮಹಾ ಪಂಡಿತರಾಗಿದ್ದಂತೆಯೇ ಮಹಾ ಕವಿಯೂ ಆಗಿದ್ದರೆಂದು ತೋರುತ್ತದೆ. ಅವರು ಯಾವ ದೀರ್ಘವಾದ ಕಾವ್ಯವನ್ನೂ ಬರೆಯದೇ ಇದ್ದರೂ, 'ಭಕ್ತಿಸುಧಾತರಂಗಿಣಿ'ಯೆಂಬ ಗ್ರಂಥದಲ್ಲಿ ಸಂಕಲಿತವಾಗಿರುವ ಅವರ ಸ್ತೋತ್ರ ಪ್ರಕರಣಗಳಿಂದ ಅವರ ಹೃದಯದ ಸರಸತೆಯನ್ನೂ ಅವರ ಶೈಲಿಯ ಸರಳತೆಯನ್ನೂ ತಿಳಿಯಬಹುದು. ಮಾತುಕಥೆಯಲ್ಲಿಯೂ ಅವರು ಸರಸಿಗಳಾಗಿ ಭಾವಗರ್ಭಿತವಾದ ರೀತಿಯುಳ್ಳವರಾಗಿದ್ದರು. ಅವರು ಶಾಸ್ತ್ರ ಜಿಜ್ಞಾಸದಲ್ಲಿ ಹೇಗೆಯೋ ವಿನೋದದ ಪ್ರಸಂಗದಲ್ಲಿಯೂ ಹಾಗೆಯೇ ಅಸಮಾನರಾಗಿದ್ದರು

ಅವರು ಹಾಸ್ಯರಸವನ್ನರಿಯದವರೇನೂ ಆಗಿರಲಿಲ್ಲ. ಒಂದು ಸಮಯದಲ್ಲಿ ಒಂದು ಶ್ರೀಗಂಧದ ಮರದ ತುಂಡಿನಲ್ಲಿ ಒಂದು ಮರವನ್ನು ಕೆತ್ತಿ ಅದರಲ್ಲಿ ಬಳ್ಳಿ, ಎಲೆ, ಹೂವು, ಹಣ್ಣುಗಳನ್ನೂ ಕಪಿ-ಪಕ್ಷಿಗಳನ್ನೂ ತೋರಿಸಿದ ಚಿತ್ರವೊಂದನ್ನು

ತಂದು ಯಾರೋ ಸ್ವಾಮಿಗಳವರಿಗೆ ಒಪ್ಪಿಸಲು ಆಗ ಅವರು ಆ ಶಿಲ್ಪಿಕೌಶಲ್ಯವನ್ನು ಕುರಿತು ಹೇಳಿದ 'ಶ್ರೀಖಂಡಖಂಡಷಟ್ಪದೀ' ಎಂಬ ಪದ್ಯಗಳು ಅವರ ಕವಿತಾ ಚಾತುರ್ಯವನ್ನು ತೋರಿಸುತ್ತವೆ.

ನ್ಯಾಯ ಮೀಮಾಂಸಾದಿ ಶಾಸ್ತ್ರಗಳಲ್ಲಿ ಸ್ವಾಮಿಗಳವರು ಭರತಖಂಡದಲ್ಲೆಲ್ಲಾ ಅದ್ವಿತೀಯರಾದ ಪಂಡಿತರಾಗಿದ್ದರೆಂಬುದೂ, ಅದ್ವೈತ ವಿದ್ಯೆಯಲ್ಲಿ ಅವರು ಪರಾಕಾಷ್ಠ ದಶೆಯನ್ನು ಹೊಂದಿದ್ದರೆಂಬುದೂ ಎಲ್ಲರಿಗೂ ತಿಳಿದ ವಿಷಯಗಳಾಗಿವೆ. ಪ್ರಖ್ಯಾತರಾದ ದಿವಾನ್ ಸರ್ ಕೆ. ಶೇಷಾದ್ರಿ ಅಯ್ಯರ್‌ರವರು ಶ್ರೀ ಸ್ವಾಮಿಗಳವರಲ್ಲಿ ಅನನ್ಯವಾದ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡು ಅವರ ಪಾದಸೇವೆಯೇ ತಮಗೆ ಸದ್ಗತಿದಾಯಕವೆಂದು ನಂಬಿಕೊಂಡಿದ್ದರು.

ನಮ್ಮ ಹಿಂದಿನ ಮಹಾರಾಜರವರು ಸ್ವಾಮಿಗಳನ್ನು ಪರದೇವತಾ ಸ್ವರೂಪ ವೆಂದು ಭಾವಿಸಿ ಅವರಿಂದ ಮಂತ್ರೋಪದೇಶವನ್ನು ಪಡೆದುಕೊಂಡಿದ್ದರು. ಅದ ರಂತೆಯೇ ನಮ್ಮ ಈಗಿನ ಮಹಾರಾಜರವರು ಶ್ರೀ ಗುರುಗಳವರಲ್ಲಿ ಅನನ್ಯವಾದ ಭಕ್ತಿಯನ್ನು. ಅದನ್ನು ಅನೇಕ ರೀತಿ ಪ್ರಕಾಶಗೊಳಿಸಿರುವುದು ನಮಗೆಲ್ಲರಿಗೂ ಗೊತ್ತೇ ಇದೆ. ಈ ಸಭಾಮಂದಿರದಲ್ಲಿ ಸ್ವಾಮಿಗಳವರು ಭಾರತೀಯ ಗೀರ್ವಾಣ ಪ್ರೌಢ ವಿದ್ಯಾಶಾಲೆಯನ್ನು ಪ್ರತಿಷ್ಠಾಪಿಸಿದ ಕಾಲದಲ್ಲಿ ಶ್ರೀಮನ್ಮಹಾರಾಜರವರು ಇಲ್ಲಿ ಭಕ್ತಿಶ್ರದ್ಧೆಗಳಿಂದ ಕುಳಿತು ಸಭಾಸಂತೃಪ್ತಿಯನ್ನುಂಟುಮಾಡಿದುದು ತಮಗೆಲ್ಲರಿಗೂ ಜ್ಞಾಪಕವಿರಬಹುದು.

ಸ್ವಾಮಿಗಳವರು ವಿಶ್ವಪ್ರಿಯರಾಗಿ, ಸಕಲ ಜಗತ್ತಿಗೂ ಮಂಗಳಾಕಾಂಕ್ಷಿಗಳಾಗಿ ಇದ್ದರೂ, ಅವರಿಗೆ ದೇಶಾಭಿಮಾನವೇನೂ ಕಡಮೆಯಾಗಿರಲಿಲ್ಲ. ಶ್ರೀಮನ್ಮಹಾರಾಜ ರನ್ನಾಶೀರ್ವದಿಸಿ ಅವರು ಹೇಳಿದ

ಶ್ರೀರಾಮಲಕ್ಷ್ಮಣಾವಿವ ಸೌಹಾರ್ದಂ ಪ್ರಾಪ್ಯ ಸುಸ್ಥಿರಂ ಸುಚಿರಂ ॥
ಶ್ರೀ ಚಾಮರಾಜ ಪುತ್ರೌ ಜೀಯಾಸ್ತಾಂ ಶಾರದಾಂಬ ತವ ಕೃಪಯಾ ॥

ಇತ್ಯಾದಿ ಪದ್ಯಗಳು ಮುಖಸ್ತೋತ್ರವಲ್ಲ. ರಾಷ್ಟ್ರಾಭಿಮಾನದ ಉದ್ರೇಕದ ಸೂಚನೆಗಳು. ಸ್ವಾಮಿಗಳವರು ತಮ್ಮ ಗುರುಗಳನ್ನು—

"ಭಾರತ ಜನ ಪುಣ್ಯನಿಧೀನ್"

—ಎಂದು ಕರೆದು ತಮ್ಮ ದೇಶೀಯ ಮಮತೆಯನ್ನು ಆ ಮೂಲಕ ವ್ಯಕ್ತಪಡಿಸಿ ರುವರು. ಮತ್ತೊಂದೆಡೆಯಲ್ಲಿ ಶಾರದಾಂಬೆಯನ್ನು ಕುರಿತು—

ಪ್ರವರ್ತಯಾ ಸೇತು ತುಷಾರಶೈಲಂ
ಸದ್ಧರ್ಮಮೇನಂ ಜಗತಾಂ ಹಿತಾಯ ॥

—ಎಂದು ಪ್ರಾರ್ಥಿಸಿ, ತಮ್ಮ ದೇಶಾಭಿಮಾನ, ಲೋಕಹಿತಬುದ್ಧಿ ಇವೆರಡನ್ನೂ ವ್ಯಕ್ತಗೊಳಿಸಿದ್ದಾರೆ. ಇದೇ ಅರ್ಥವನ್ನೇ ಕೊಡುವ ವಾಕ್ಯಗಳು ಇನ್ನೂ ಅನೇಕವಾಗಿ ದೊರೆಯುವವು.

ಹಾಗಾದರೆ ಮಠಗಳ ಕರ್ತವ್ಯಗಳ ವಿಷಯದಲ್ಲಿ ಸ್ವಾಮಿಗಳವರು ಯಾವ ಅಭಿಪ್ರಾಯವನ್ನಿಟ್ಟುಕೊಂಡಿದ್ದರು ಎಂದು ಯಾರಾದರೂ ಕೇಳಬಹುದು. ಮಠಾಧಿಪತಿಯಾಗಿ ಗುರುಪದವಿಯನ್ನಂಗೀಕರಿಸಿದ್ದವರ ಕರ್ತವ್ಯಗಳು ಅತ್ಯಂತ ಗೌರವವುಳ್ಳವುಗಳೆಂಬುದನ್ನು ಅವರು ತಿಳಿಯದೆ ಇರಲಿಲ್ಲ—"ನಾನು ದಂಡ ಕಮಂಡಲ ಜಪಮಾಲೆಗಳಿಂದ ಗೃಹಸ್ಥರನ್ನು ಮರುಳುಮಾಡುತ್ತಿದ್ದೇನೆ. ಈ ಸಂನ್ಯಾಸಿಗೆ ಹಣವೇಕೆ. ಅಲಂಕಾರವೇಕೆ. ಈ ಪಟಾಟೋಪವೇಕೆ? ಎಂದು ನನ್ನನ್ನು ಲೋಕವು ನಿಂದಿಸುತ್ತಿದೆ. ಇಂತಹ ನನ್ನನ್ನು ಕಾಪಾಡು"—ಎಂದು ಮುಂತಾಗಿ ಅವರು ಆಗಾಗ ಶಾರದಾಂಬೆಯಲ್ಲಿಯೂ, ತಮ್ಮ ಗುರುಗಳಲ್ಲಿಯೂ ಮೊರೆಯಿಡುತ್ತಿದ್ದರು. ಒಂದು ಸಲ ಶಂಕರಾಚಾರ್ಯ ಸ್ತುತಿಯಲ್ಲಿ—

ತಸ್ಮಾತ್ ಸ್ಥಾನಮಿದಂ ಗುರೂತ್ತಮ ಕೃಪಾವಾರ್ಧೇ ತ್ವಮೇವಾಶ್ರಯ

"ಗುರೂತ್ತಮರೇ, ತಾವು ಸ್ಥಾಪಿಸಿದ ಈ ಪೀಠವನ್ನು ತಾವೇ ಪುನಃ ಅಲಂಕರಿಸುವವರಾಗಿರಿ" ಎಂದು ಪರಿಪರಿಯಾಗಿ ಪ್ರಾರ್ಥಿಸಿದರು. ಇದರಿಂದ ಆ ಸ್ಥಾನದ ಧರ್ಮಗಳನ್ನು ನೆರವೇರಿಸಲು ಬೇಕಾದ ಸಂಪತ್ಸಾಧನಗಳು ತಮಗೆ ಇರಲಿಲ್ಲವೆಂಬುದೇ ಅವರ ಕೊರತೆಯಾಗಿತ್ತೆಂದು ನಾವು ಅನುಮಾನಿಸಬಹುದು. ಸದ್ಗುರುಲಕ್ಷಣವೆಂತಹುದೆಂಬುದನ್ನು ಅವರೇ ವಿವರಿಸುವರು :

ನಿರ್ಹೇತುಕ ಕರುಣಾಜನಿಭೂಮಿಃ ಸಂತ್ಯಕ್ತ ವಿಷಯೇಚ್ಛಃ ।
ಲುಪ್ತ ಸ್ವಪರತ್ವಮತಿಃ ಸ್ಮಿತಲಸದಾಸ್ಯಾಂಬುಜಃ ಸತತಂ ॥

ಶೀಲಿತನಿಗಮಾನ್ತತತಿಃ ಪಾಲಿತಮೈತ್ರೀಪ್ರಮುಖ್ಯ ಗುಣಜಾಲಃ ।
ತತ್ತ್ವೋಪದೇಶನಿರತಃ ಸತ್ವರಮೇವಾಂಘ್ರಿನಮ್ರ ಲೋಕಾನಾಂ ॥

ಸಕ್ರೋಧಾನಕ್ರೋಧಾನ್ಮಾಗಾಧ್ಯಾನ್ಮಾಗನಿರ್ಮುಕ್ತಾನ್ ।
ಕುರ್ವಾಣೋ ವಿಷಯೇಷ್ವತಿ ವೈರಸ್ಯಂ ಬೋಧಯಂಸ್ತರಸಾ ॥

ಲೋಕಾರ್ಥಮಾಶ್ರಮೋಚಿತಚರ್ಯಾನಿರತಃ ಸಮಾಧಿರಹಿತೇಷು
ಕಾಲೇಷು ಕಿಂಚ ಕೃಷ್ಣದ್ವೈಪಾಯನಸೂತ್ರಜಾಲಬೋಧಯಿತಾ ॥

[ಸದ್ಗುರುವು ಅವ್ಯಾಜಕೃಪೆಗೆ ಜನ್ಮಭೂಮಿಯಂತಿರುವವನು ; ಭೋಗಗಳಲ್ಲಿ ಆಶೆಯಿಲ್ಲದವನು ; ತನ್ನದು ಇನ್ನೊಬ್ಬರದು ಎಂಬ ಭೇದವಿಲ್ಲದವನು ; ಯಾವಾಗಲೂ ಮುಗುಳ್ನಗೆಯಿಂದ ಕೂಡಿದವನು ; ವೇದಾಂತವನ್ನು ತಿಳಿದವನು ; ಸ್ನೇಹಪಕ್ಷಮಾದಿ ಗುಣಗಳುಳ್ಳವನು : ಶಿಷ್ಯಮಂಡಲಿಗೆ ಸದುಪದೇಶ ಮಾಡುವುದರಲ್ಲಿಯೇ ನಿರತನಾಗಿರುವವನು : ಕೋಪಿಷ್ಠರನ್ನು ಕೋಪವಿಲ್ಲದವರನ್ನಾಗಿಯೂ, ವ್ಯಾಮೋಹಗ್ರಸ್ತರಾದವರನ್ನು ಮೋಹರಹಿತರನ್ನಾಗಿಯೂ ಮಾಡಬಲ್ಲವನು : ವಿಷಯಸುಖಗಳಲ್ಲಿ ಬೇಸರವನ್ನುಂಟುಮಾಡುವವನು ; ಲೋಕದವರು ಅನುಸರಣೆ ಮಾಡುವುದಕ್ಕೋಸ್ಕರ ತನ್ನ ಆಶ್ರಮದ ವ್ರತನಿಯಮಗಳನ್ನು ಆಚರಣೆಮಾಡತಕ್ಕವನು : ತಾನು ಯೋಗಾಭ್ಯಾಸಮಾಡುವ ಕಾಲ ವಿನಾ ಮಿಕ್ಕ ಕಾಲದಲ್ಲಿ ಬ್ರಹ್ಮಸೂತ್ರಾರ್ಥಗಳನ್ನು ವಿವರಣೆ ಮಾಡತಕ್ಕವನು ; ಇಂತಹವನೇ ಸದ್ಗುರುವು.]

ಈ ವರ್ಣನೆಯು ಅದನ್ನು ಬರೆದವರ ವಿಷಯದಲ್ಲಿಯೇ ಸಂಪೂರ್ಣವಾಗಿ ಅನ್ವಯಿಸತಕ್ಕುದೆಂದು ಅವರನ್ನು ಬಲ್ಲವರೆಲ್ಲರೂ ಐಕಕಂಠ್ಯದಿಂದ ಹೇಳುತ್ತಿರುವರು. ನಮ್ಮ ಈಗಿನ ಮಠಾಧಿಪತಿಗಳೆಲ್ಲರೂ ಇಂತಹವರೇ ಆಗಲೆಂಬುದು ಆಸ್ತಿಕಮಂಡಲಿಯ ಹಾರೈಕೆಯಾಗಿರುವ ವಿಷಯದಲ್ಲಿ ಸಂದೇಹವೇನೂ ಇರದು.

ಈಚೆಗೆ ನಮ್ಮ ಮಠಗಳಿಗೂ ಶಿಷ್ಯಮಂಡಲಿಗೂ ಇರಬೇಕಾದ ಬಾಂಧವ್ಯವು ಸಡಿಲವಾಗಿ ಹೋಗಿದೆಯೆಂಬುದು ನಿಜ. ಇದಕ್ಕೆ ಕಾರಣಗಳು ಒಂದೆರಡಲ್ಲ. ಆದುದರಿಂದ ದೋಷವು ಇವರದೇ ಸರಿ, ಇವರದಲ್ಲ ಎಂದು ನಾವು ಈಗ ನಿರ್ಧರಿಸುವುದು ಸುಲಭವಲ್ಲ. ನವನಾಗರಿಕರು ಧರ್ಮಗಳನ್ನು ಹಾಳುಮಾಡಿದರೆಂದು ವೈದಿಕರು ಬಯ್ಯುವುದೂ, ಗೊಡ್ಡು ವೈದಿಕರು ದೇಶಕ್ಕೆ ಭಾರವಾಗಿರುವರೆಂದು ನವನಾಗರಿಕರು ಬಯ್ಯುವುದೂ ಈಚೆಗೆ ವಾಡಿಕೆಯಾಗಿದೆ. ಆದರೆ ಈ ಪರಸ್ಪರ ದೋಷೋದ್ಘಾಟನೆಯು ಪ್ರಯೋಜನಕಾರಿಯಲ್ಲವೆಂದೂ, ಅದು ನ್ಯಾಯವೂ ಅಲ್ಲವೆಂದೂ ವಿಚಾರಶೀಲರೆಲ್ಲರೂ ಒಪ್ಪುವರು. ದೇಶದ ಪ್ರಜಾಮಂಡಲಕ್ಕೆ ಒಂದು ರಾಜಾಸ್ಥಾನವು ಹೇಗೋ, ಸಮಾಜಮಂಡಲಕ್ಕೆ ಒಂದು ಗುರುಪೀಠವು ಹಾಗೆ ಕೇಂದ್ರಪ್ರಾಯವಾಗಿರುವುದು. ರಾಜದಂಡವಿಲ್ಲದಿದ್ದರೆ ನಮ್ಮ ಲೌಕಿಕಕ್ಷೇಮವು ನ್ಯೂನತೆ ಹೊಂದುವುದು. ಹಾಗೆಯೇ ಗುರುನಿಯಮವಿಲ್ಲದಿದ್ದರೆ ನಮ್ಮ ಸಾಮಾಜಿಕ ವ್ಯವಸ್ಥೆಯು ಬಿಗಿ ತಪ್ಪಿ, ಮೇರೆ ತಪ್ಪಿ, ಒಡೆದುಹೋಗುವುದು. ರಾಜಭೀತಿಯಿಲ್ಲದಿದ್ದರೂ ಸನ್ಮಾರ್ಗವನ್ನು ಬಿಡದವರು ನೂರರಲ್ಲಿ ಒಬ್ಬಿಬ್ಬರಿರಬಹುದು. ಹಾಗೆಯೇ ಗುರುವಿಧಿಯಿಲ್ಲದಿದ್ದರೂ ಧರ್ಮಮಾರ್ಗದಿಂದ ತಪ್ಪದವರು ವಿರಳರಾಗಿರಬಹುದು. ಆದರೆ ಜನಸಾಮಾನ್ಯದ ಲೌಕಿಕ ನೀತಿರಕ್ಷಣೆಗೆ ರಾಜ್ಯಸಂಸ್ಥೆಯು ಆವಶ್ಯಕ. ಅದರಂತೆಯೇ ಅವರ ಸಮಾಜ-ಧರ್ಮರಕ್ಷಣೆಗೆ ಗುರು ಸಂಸ್ಥೆಯು ಆವಶ್ಯಕ. ಆಜನ್ಮಜ್ಞಾನಿಗಳೂ ಆಶ್ರಮಾತೀತರೂ ಧರ್ಮಮೂಲವನ್ನರಿತವರೂ ಆದವರಿಗೆ ಮಠಗಳು ಅನಾವಶ್ಯಕ. ಹುಟ್ಟು ಕವಿಗಳಿಗೆ ಪಾಠಶಾಲೆಗಳೂ ಉಪಾಧ್ಯಾಯರೂ ಅನಾವಶ್ಯಕ. ಶುಕರಂತೆಯೂ ವ್ಯಾಸರಂತೆಯೂ ಇರುವವರು ಹೊರಗಣ ನಿರ್ಬಂಧಗಳಿಗೆ ತಕ್ಕವರಲ್ಲ. ಅವರು ಅವುಗಳನ್ನು ಸಹಿಸಬೇಕಾದುದೂ ಇಲ್ಲ. ಆದರೆ ಆ ಸ್ವಾತಂತ್ರ್ಯವು ಸಾಮಾನ್ಯರಿಗೆ ಸಲ್ಲದು. ಇವರಿಗಾಗಿ ರಾಜರೂ ಇರಬೇಕು ಪಾಠಶಾಲೆಗಳೂ ಇರಬೇಕು ; ಮಠಗಳೂ ಇರಬೇಕು. ಆದರೆ ಸದ್ಯಃ ನಮ್ಮ ಮಠಗಳು ತೃಪ್ತಿಕರವಾದ ಸ್ಥಿತಿಯಲ್ಲಿಲ್ಲ ; ಅವುಗಳ ಶಿಷ್ಯರೂ ತೃಪ್ತಿಕರವಾದ ಸ್ಥಿತಿಯಲ್ಲಿಲ್ಲ. ಅವರು ಬಹುದಿನಗಳಿಂದ ಪರಸ್ಪರ ಉದಾಸೀನ ಭಾವವನ್ನವಲಂಬಿಸಿದ್ದಾರೆ. ಅವರಿಬ್ಬರೂ ಈಗ ಎಚ್ಚೆತ್ತು ಪರಸ್ಪರ ವಿಶ್ವಾಸ ಗೌರವಗಳನ್ನು ತೋರಿದಲ್ಲದೆ ನಮ್ಮ ಸಮಾಜವು ಉದ್ಧಾರವಾಗಲಾರದು, ನಮ್ಮ ಸಮಾಜವೂ ನಮ್ಮ ಧರ್ಮವೂ ಉಜ್ಜೀವಿಸಲಾರದು. ಈ ಪ್ರಸ್ತಾವದಲ್ಲಿ ನಮ್ಮ ಸ್ವಾಮಿಗಳವರ ಬಾಯಿಂದ ಬಂದ ಒಂದು ಮಾತು ನನಗೆ ಜ್ಞಾಪಕಕ್ಕೆ ಬರುತ್ತದೆ. ಹಿಂದೆ ಅವರು ಬೆಂಗಳೂರಿಗೆ ಬಂದಿದ್ದಾಗ ಒಂದು ದಿನ ಬೆಳಿಗ್ಗೆ ಅವರ ಸವಾರಿಯು ಚಾಮರಾಜಪೇಟೆಯ ಕಡೆ ದಯಮಾಡಿಸುತ್ತಿದ್ದಾಗ ಪಾಲಕಿಯ ಬಳಿ ಬರುತ್ತಿದ್ದ ಅನ್ಯಮತೀಯರಾದ ಒಬ್ಬ ದೊಡ್ಡಮನುಷ್ಯರು ಸ್ವಾಮಿಗಳೊಡನೆ ಸಂಭಾಷಣೆ

ಬೇಕೆನ್ನುತ್ತಾ ತಮ್ಮ ಮಠದವಿಷಯದಲ್ಲಿ ಅಸಮಾಧಾನದ ಧ್ವನಿಯಿಂದ ಮಾತನಾಡಿದರು. ಆಗ ಶ್ರೀ ಸ್ವಾಮಿಗಳವರು ಅವರನ್ನು ನಿಲ್ಲಿಸಿ—"ರಾಯರೆ, ಶಿಷ್ಯರು ಹೇಗೆ ನಡಸಿಕೊಳ್ಳುವರೋ ಮಠವೂ ಹಾಗೆ ನಡೆದುಕೊಳ್ಳುವುದು" ಎಂಬ ಉತ್ತರವನ್ನು ಕೊಟ್ಟರು. ಅದನ್ನು ನನ್ನ ಕಿವಿಯಿಂದಲೇ ಕೇಳಿದೆ. ಆ ಮರ್ಮವನ್ನು ಹಿಂದೂ ಮತಾಭಿಮಾನಿಗಳಾದವರೆಲ್ಲರೂ ಜ್ಞಾಪಕದಲ್ಲಿರಿಸಿ ನಡೆಯಬೇಕು. ಮಠಗಳು ತಮ್ಮ ಕಾರ್ಯಗಳನ್ನು ಸರಿಪಡಿಸಲು ಶಿಷ್ಯರಿಗೆ ಅವಕಾಶಗಳನ್ನು ಕಲ್ಪಿಸಬೇಕು. ಶಿಷ್ಯರಾದವರು ಮಠದ ಗೋಜು ತಮಗೆ ಬೇಡವೆಂಬ ಔದಾಸೀನ್ಯವನ್ನೂ, ಮಠವನ್ನು ಕಟ್ಟಿಕೊಂಡು ಪ್ರಯೋಜನವಿಲ್ಲವೆಂಬ ಜಗಳದ ಮಾತನ್ನೂ, ಮಠವು ತಮ್ಮ ಇಚ್ಛೆಯನ್ನೇ ಅನುಸರಿಸಬೇಕೆಂಬ ವಿಪರೀತ ಭಾವನೆಯನ್ನೂ ಬಿಟ್ಟು, ಸಮಾಜವ್ಯವಸ್ಥೆಯ ವಿಷಯದಲ್ಲಿ ಮರಾಲೋಚನೆಯುಳ್ಳವರಾಗಿರಬೇಕು. ಈಗ ನಮ್ಮ ಧರ್ಮದ ಪುನಸ್ಸಂಸ್ಥಾಪನೆಗಾಗಿಯೂ, ನಮ್ಮ ಸಮಾಜದ ಜೀರ್ಣೋದ್ಧಾರಕ್ಕಾಗಿಯೂ ನಡೆಯಬೇಕಾದ ಕಾರ್ಯಗಳು ಅನೇಕವಿವೆ. ನವನಾಗರಿಕತೆಯ ಕ್ರಮಗಳೆಲ್ಲವೂ ಸರಿಯೆಂದು ಯಾರೂ ಹೇಳುವುದಿಲ್ಲ. ಹಾಗೆಯೇ ನಮ್ಮ ಹಳೆಯ ಪದ್ಧತಿಗಳೆಲ್ಲವೂ ಈ ಕಾಲಕ್ಕೆ ಅವಶ್ಯಕವೆಂದೂ ಉಚಿತವೆಂದೂ ಯಾರೂ ಹೇಳಲಾರರು. ಮಾನುಷ ಸಮಾಜದ ಪ್ರತಿಯೊಂದು ಕಟ್ಟುಪಾಡಿನಲ್ಲಿ ಮಾನುಷ ದೇಹದಲ್ಲಿ ನಡೆಯುವಂತೆ— ಆಗಾಗ ತಿದ್ದುಪಾಟುಗಳಾಗುತ್ತಲೇ ಇರಬೇಕು. ಅದಕ್ಕೆ ವೈದಿಕರೂ ಲೌಕಿಕರೂ ಇಬ್ಬರೂ ಕಲೆತು ಕೆಲಸ ಮಾಡಬೇಕು. ಅವರಲ್ಲಿ ಅನ್ಯೋನ್ಯವಿಶ್ವಾಸವಿಲ್ಲದೆ ಅಸೂಯಾಸಹನೆಗಳು ಹುಟ್ಟಿರುವುದೇ ನಮ್ಮ ಈಗಿನ ಸ್ಥಿತಿಗೆ ಪ್ರಬಲವಾದ ಒಂದು ಕಾರಣ. ಇಂತಹ ದುಷ್ಟ ಭಾವನೆಗಳು ತೊಲಗಿ, ನಮ್ಮ ಸಮಾಜವು ಪುನಃ ಪಾರಿಶುದ್ಧ್ಯವನ್ನೂ ಸುಸ್ಥಿತಿಯನ್ನೂ ಪಡೆದು, ನಮ್ಮ ಧರ್ಮವು ಪ್ರಕಾಶಗೊಂಡು ಜಗತ್ತನ್ನು ಬೆಳಗುವಂತಾಗಬೇಕೆಂಬುದು ನಮ್ಮ ಆಶೆಯಾಗಿರುವ ಪಕ್ಷದಲ್ಲಿ ನಾವು ನಮ್ಮ ಸ್ವಾಮಿಗಳವರು ತೋರಿದ ಮಾರ್ಗದಲ್ಲಿ ಭಕ್ತಿಶ್ರದ್ಧೆಗಳಿಂದ ನಡೆಯಬೇಕು. ಈಗ ಲೋಕವೆಲ್ಲವೂ ಸಂಕ್ಷೋಭೆ ಹೊಂದಿ, ಶಾಂತಿಗೆ ಹಾದಿ ಯಾವುದೆಂಬುವನ್ನರಿಯಲಾರದೆ, ವಿವಿಧ ಮತಗಳು ವ್ಯರ್ಥಗಳಾಗುತ್ತಿರುವುದನ್ನು ಕಂಡು ಸತ್ಯಧರ್ಮವನ್ನು ತಿಳಿಯಬೇಕೆಂದು ಹಂಬಲಿಸುತ್ತಿದೆ. ಇಂತಹ ಕಾಲದಲ್ಲಿ ವೈದಿಕವಿಭೂತಿಯನ್ನೂ, ವೇದಾಂತವಿದ್ಯೆಯನ್ನೂ ತತ್ಫಾರ್ಥಗಳಾದ ಸದಾಚಾರ ಸತ್ಸಂಪ್ರದಾಯಗಳನ್ನೂ ಕಾಪಾಡಿ. ಅವುಗಳ ಫಲಿತಾಂಶಗಳನ್ನು ಲೋಕಕ್ಕೆ ತೋರಿಸುವುದು ಋಷಿವಂಶಜರಾದ ನಮ್ಮಗಳ ಮೇಲಿರುವ ಭಾರ. ಈ ಮಹತ್ತಾದ ಕರ್ತವ್ಯವನ್ನು ನೆರವೇರಿಸುವುದಕ್ಕೆ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರಂತಹ ಮಹಾತ್ಮರ ಧ್ಯಾನವೂ ಪೂಜೆಯೂ ಪ್ರಬಲ ಸಾಧಕಗಳಾಗಿರುತ್ತವೆ. ಅವರ ಅನುಗ್ರಹವು ಆರ್ಯಸಮಾಜದವರಲ್ಲಿ ಶಾಶ್ವತವಾಗಿರಲಿ!

# ರಾಷ್ಟ್ರಸ್ವಾತಂತ್ರ್ಯ ಮತ್ತು ಕಾವ್ಯಸ್ಫೂರ್ತಿ*

ರಾಷ್ಟ್ರಸ್ವಾತಂತ್ರ್ಯಕ್ಕೂ ಕಾವ್ಯಸ್ಫೂರ್ತಿಗೂ ಸಂಬಂಧವೇನು ? – ಎಂದು ಯಾರಾದರೂ ಕೇಳಿಯಾರೆ ? ಸ್ವಾತಂತ್ರ್ಯವು ನಮ್ಮ ಜೀವನಕ್ಕೆ ಸಂಬಂಧಪಟ್ಟದ್ದೆಂದು ನಂಬಿರುವವರೆಲ್ಲ ಅದು ಕಾವ್ಯಕ್ಕೂ ಸಂಬಂಧಪಟ್ಟದ್ದೆಂದು ಒಪ್ಪಲೇಬೇಕು ; ಏಕೆಂದರೆ ಮನುಷ್ಯನ ಜೀವನರಂಗದಲ್ಲಿ ಕವಿಯನ್ನು ಬರಮಾಡಿಕೊಳ್ಳದ ಸ್ಥಳ ಒಂದಂಗುಲವೂ ಇಲ್ಲ. ಎಲ್ಲೆಲ್ಲಿ ನಮ್ಮ ಮನಸ್ಸು ಹೋಗಬಹುದೋ ಅಲ್ಲೆಲ್ಲ ಕವಿಗೆ ಪ್ರವೇಶವುಂಟು. ನಮ್ಮ ಹೃದಯಜೀವನದ ಏರಿಳಿತಗಳೇ ಕಾವ್ಯ. ಸ್ವಾತಂತ್ರ್ಯದಿಂದ ಜನಜೀವನವು ಒಂದು ನವೀನತೆಯನ್ನು ಪಡೆಯುವುದಾದರೆ, ಆ ನವ್ಯಚೈತನ್ಯವು ಕಾವ್ಯಕ್ಕೆ ಒಂದು ನವ್ಯಸ್ಫೂರ್ತಿಯನ್ನು ಕೊಡಬಲ್ಲದಾಗುತ್ತದೆ. ಹಾಗೆಯೇ ಕವಿಯು ಜನಸ್ವಾತಂತ್ರ್ಯದ ಸಾಧ್ಯಫಲವಾಗಿ ಒಂದು ನವೀನ ಜೀವನಸೌಂದರ್ಯವನ್ನು ಕಂಡವನಾದರೆ, ಆ ಅಂತರ್ದರ್ಶನ ಅವನ ಕಾವ್ಯದಲ್ಲಿ ರೂಪಗೊಂಡು ಜನಕ್ಕೆ ನವೀನ ಸ್ಫೂರ್ತಿಯಾಗುತ್ತದೆ. ನಮ್ಮ ಜೀವಿತಮುಕುಲದ ವಿಕಾಸಕ್ಕೆ ಸ್ವಾತಂತ್ರ್ಯದ ಸೂರ್ಯರಶ್ಮಿ ಪ್ರೇರಕವಾದರೆ, ಅದರ ಸಾಫಲ್ಯಕ್ಕೆ ಕಾವ್ಯದ ಪೃಥ್ವೀರಸ ಸಾರಪ್ರದವಾಗುತ್ತದೆ. ಹೀಗೆ ಸ್ವಾತಂತ್ರ್ಯದ ಪರಮ ಸಾರ್ಥಕ್ಯವು ಸತ್ಕಾವ್ಯೋದಯದಲ್ಲಿ, – ಮತ್ತು ಸತ್ಕಾವ್ಯ ಪ್ರಭಾವದಿಂದ.

ಸ್ವಾತಂತ್ರ್ಯದ ಫಲವಾಗಿ ಈಗ ನಾವು ಬಯಸಬೇಕಾದದ್ದು ಎಂಥ ನವಜೀವನವನ್ನ ? ಇಂಡಿಯವು ಎರಡನೆಯ ಇಂಗ್ಲೆಂಡ್ ಆಗಬೇಕೆಂದೆ ? ರಷ್ಯದ ಛಾಯೆಯಾಗಬೇಕೆಂದೆ ? ಅಮೆರಿಕದ ಪ್ರತಿಬಿಂಬವಾಗಬೇಕೆಂದೆ ? ಬಾಂಬಿನ ತಯಾರಿಯಲ್ಲಿ ಎಲ್ಲಕ್ಕಿಂತ ದೊಡ್ಡದೆನಿಸಬೇಕೆಂದೆ ? ಅಥವಾ ಬಾಂಬನ್ನು ಅನವಶ್ಯ ಮಾಡಬಲ್ಲ ಸಾತ್ವಿಕ ಚಿಕಿತ್ಸೆಯನ್ನು ತೋರಿಸಬೇಕೆಂದೆ ? ಪಾಶ್ಚಾತ್ಯ ದೇಶಗಳ ಅನುಕರಣವೇ ಇಂಡಿಯದ ಸ್ವಾತಂತ್ರ್ಯಕ್ಕೆ ಪೂರ್ಣಫಲವೆನ್ನುವುದಾದರೆ ಅದರ ವಿಷಯದಲ್ಲಿ ಯಾರೂ ಉತ್ಸಾಹಪಡರು.

---

* 15–8–1954 ರಂದು ಮೈಸೂರು ಆಕಾಶವಾಣಿಯಿಂದ ಪ್ರಸಾರವಾದ ಭಾಷಣ.

ಹಾಗಲ್ಲದೆ ಇಂಡಿಯವು ಇಂಡಿಯವಾಗಿ ಬಾಳುವುದೇ, – ಹಿಂದಿಗಿಂತ ಪ್ರಶಸ್ತವಾದ ಇಂಡಿಯವಾಗುವುದೇ, – ಸ್ವಾತಂತ್ರ್ಯದ ಪರಮ ಪ್ರಯೋಜನವೆನ್ನುವುದಾದರೆ ಆಗ ನಮಗೊಂದು ಸ್ವಧರ್ಮಕುತೂಹಲವುಂಟಾದೀತು, ಲೋಕಕ್ಕೊಂದು ಹೊಸ ಶುಭಾಪೇಕ್ಷೆ ಹುಟ್ಟೀತು. ಆ ಇತೋಪ್ಯಧಿಕವಾದ ಇಂಡಿಯದ ರೂಪರೇಖೆ ಎಂಥಾದ್ದು ? ಆ ನೂತನ ಇಂಡಿಯದ ಜೀವನಪೂರ್ಣತೆ ಎಂಥಾದ್ದು ? ಈ ಪ್ರಶ್ನೆಗಳಿಗೆ ಉತ್ತರ ದೊರಕಿಸಬೇಕಾದವರು ನಮ್ಮ ನವ್ಯ ಕವಿಗಳು.

ಕವಿಯೆಂಬಾತನಲ್ಲಿ ಇತರ ಮನುಷ್ಯರಲ್ಲಿ ಸ್ಫುಟವಾಗಿ ಕಾಣಬಾರದ ಮೂರು ಅಂತರಂಗ ಶಕ್ತಿಗಳು ವಿಶೇಷವಾಗಿರುತ್ತವೆ : ಮೊದಲನೆಯದು, ಲೋಕಜೀವನದ ಸೂಕ್ಷ್ಮ ರಹಸ್ಯವೇದಿಕೆ. ಇದೇ ಅಂತರನುಭವ. ಇದೇ ಪ್ರತಿಭೆ. ಎರಡನೆಯದು ಆ ರಹಸ್ಯಾನುಭವದಿಂದ ಒದಗಿದ ಸಾಮಗ್ರಿಯ ಮೇಲೆ ಸ್ವೋಪಜ್ಞತೆಯ ಪ್ರಯೋಗದಿಂದ, – ಅವನ ರಮ್ಯಾರಮ್ಯ ವಿವೇಕದಂತೆ, – ಅವನ ಹಿತಾಹಿತ ನಿಷ್ಕರ್ಷೆಯಂತೆ, – ಅವನ ಮನೋರಂಗದಲ್ಲಿ ಆದ ನೂತನ ಕಥಾವಿರ್ಭಾವ. ಇದೇ ಕಲ್ಪನ ಸ್ಫೂರ್ತಿ. ಕವಿಯ ಮೂರನೆಯ ಶಕ್ತಿ, ಹಾಗೆ ಸಿದ್ಧವಾದ ಅಂತಸ್ಸೃಷ್ಟಿಯ ಬಹಿರ್ನಿರೂಪಣೆ. ಇದೇ ಕಾವ್ಯರಚನೆ. ಇದೇ ವಾಕ್ಸಿದ್ಧಿ.

ಕವಿಯ ಹೃದಯಗುಹೆಯಲ್ಲಿ ನಿದ್ರಿಸುತ್ತಿರುವ ಸ್ಫೂರ್ತಿಯನ್ನು ಚುಚ್ಚಿ ಎಬ್ಬಿಸಬಲ್ಲ ಸಲಾಕಿ ಅವನ ಸುತ್ತಮುತ್ತಣ ಪ್ರಪಂಚದ್ದು. ಹೊರಗೆ ಮಹಾನುಭವವಾದಾಗ ಅವನ ಒಳಗೆ ಮಹಾಸ್ಫೂರ್ತಿ. ಎಷ್ಟೋ ಸಹಸ್ರ ವರ್ಷಗಳ ಹಿಂದೆ ಈ ದೇಶದಲ್ಲಿ ಜನಪದ ಜೀವನಕ್ಕೆ ಕೇಂದ್ರವಾಗಿದ್ದ ಒಂದು ಕುಟುಂಬದ ಹಾಲಿನ ಪಾತ್ರೆಯಲ್ಲಿ ಯಾರೋ ಹುಳಿ ಹಿಂಡಿದರು ; ತ್ಯಾಗ ವೀರಗಳು ಉಕ್ಕಿದವು ; ವಾಲ್ಮೀಕಿಯ ಕಂಠ ಕರುಣಗದ್ಗದಿತವಾಯಿತು. ಇನ್ನೊಮ್ಮೆ ರಾಷ್ಟ್ರದ ನಡುವಣ ಮನೆಯೊಲೆಯಲ್ಲಿ ಯಾರೋ ಹಸಿ ಸೌದೆಯಿಂದ ಹೊಗೆ ಹಾಕಿದರು. ಧರ್ಮ ಶೌರ್ಯಗಳು ಮೈತುಂಬಿ ನಿಂತವು ; ವ್ಯಾಸನ ಕಣ್ಣು ಕರುಣಗಂಭೀರವಾಯಿತು. ಒಮ್ಮೆ ಇಟಲಿಯಲ್ಲಿ ಸಮಾಜವನ್ನು ಧಾರ್ಮಿಕ ಸಂದೇಹಗಳೂ ನೀತಿಚಾಂಚಲ್ಯಗಳೂ ಕುಲುಕಿಸುತ್ತಿದ್ದುವು : ಡಾಂಟೆಯ ಮನಸ್ಸು ಚಿಂತೆಯಿಂದ ಅಂತರ್ಮುಖಿಯಾಯಿತು. ಮತ್ತೊಮ್ಮೆ ಇಂಗ್ಲೆಂಡಿನಲ್ಲಿ ಜನತೆಯನ್ನು ಮಹಾಸಾಹಸಗಳೂ ಮಹೋತ್ಸಾಹಗಳೂ ಸಂಭ್ರಮಪಡಿಸಿದ್ದವು ; ಷೇಕ್ಸ್‌ಪಿಯರನ ದೃಷ್ಟಿ ಮಾನುಷ ಸೂಕ್ಷ್ಮದರ್ಶಿನಿಯಲ್ಲಿ ಏಕಾಗ್ರವಾಯಿತು. ಹೀಗೆ ಲೋಕಜೀವನದಲ್ಲಿ ಪ್ರಶ್ನೆ ತೋರಿದರೆ ಕವಿಯ ಅಂತಃಕರಣದಲ್ಲಿ ಪ್ರತ್ಯುತ್ತರ ಹೊರಡುತ್ತದೆ.

ಇಂದಿನ ಜಗಜ್ಜೀವನದಲ್ಲಿ ಪ್ರಶ್ನೆಯಿಲ್ಲವೆಂದು ಯಾರಾದರೂ ಹೇಳಿಯಾರೆ ? ನಮಗೆ ಪ್ರಗತಿಗುರುವೆನಿಸಿದ್ದ ಪಾಶ್ಚಾತ್ಯಲೋಕವು ಆ ಪ್ರಗತಿಯಿಂದ ಪಡುತ್ತಿರುವ ಪಾಡನ್ನು ಈಹೊತ್ತು ನಾವು ಕಾಣುತ್ತಿದ್ದೇವೆ. ಅಲ್ಲಿಯ ಪ್ರಕೃತಿ ವಿಜ್ಞಾನದಿಂದ ಒಪ್ಪಿದ್ಧಿ ಅಹಿತಸಮೃದ್ಧಿಗಳೆರಡೂ ಆಗಿವೆ. ಹಳೆಯ ಮತಧರ್ಮಗಳು ಪ್ರಪಂಚ

ವಸ್ತುಗಳಿಗೆ ಕಟ್ಟಿದ್ದ ಬೆಲೆಗಳನ್ನು ವಿಜ್ಞಾನದ ಅತಿರೇಕವೂ ಆತುರವೂ ಬದಲಾಯಿ
ವಿಜ್ಞಾನ ಸಂಧಾನದ ಭೋಗೋಪಕರಣ ಮಹಿಮೆಯಿಂದ ಲೋಭ ಮೋಹಗ
ನಮ್ಮ ಜೀವಿತದ ಮೇಲೆ ಪೂರ್ಣಾಧಿಕಾರ ದೊರೆತಿದೆ. ಇಹ ಜೀವನದ ಅಂತಸ್ತ
(Standard of Living) ಹೆಚ್ಚಿಸಿಕೊಳ್ಳಬೇಕೆಂಬುದೊಂದೇ ಈಗ ಜನ ಜನಾಂಗ
ಪರಮ ಧ್ಯೇಯವಾಗಿದೆ. ಇದಕ್ಕಾಗಿ, – ಭೂಸ್ವಾಮ್ಯಕ್ಕಾಗಿ, ಲೋಹಕ್ಕಾಗಿ, ಕಲ್ಲಿ
ಗಾಗಿ, ಕಲ್ಲೆಣ್ಣೆಗಾಗಿ, ಕಾಡಿಗಾಗಿ, ಕಾರ್ಖಾನೆಯ ಸರಕಿಗಾಗಿ, ವ್ಯಾಪಾರದ ಗಿರಾಕಿಗಾ
– ದೇಶದೇಶಕ್ಕೆ, ಜಾತಿಜಾತಿಗೆ, ಮನುಷ್ಯ ಮನುಷ್ಯನಿಗೆ ಸ್ಪರ್ಧೆ, ಅಸೂಯೆ, ಯು
ಯುದ್ಧಭಯ, ಯುದ್ಧಸಿದ್ಧತೆ, – ಇವು ಸಂಭವಿಸಿವೆ. ಭೂಮಂಡಲದೊ
ನೆಮ್ಮದಿಯ ನೆಲೆ ಎಲ್ಲಿಯೂ ಕಾಣಬಾರದು. ಬಾಳಿನಲ್ಲಿ ಹಳೆಯ ಚೆಂದ ಹೋಗಿ
ಹೊಸ ಚೆಂದದ ಸೂಚನೆ ಬಾರದಿದೆ. ಈ ವಿಷಮ ಸಂಧಿಯಲ್ಲಿ ನಮ್ಮ ಕವಿಗಳ ಕಣ್
ಏನಾದರೂ ಒಂದು ನವ್ಯ ಕಲ್ಯಾಣದ ದರ್ಶನ ದೊರೆತೀತೆ—ಎಂಬುದು ನಮ್ಮ ಆ

ಈ ಭ್ರಾಂತಿ ಸಂಕ್ಷೋಭೆಯ ಶತಚಕ್ರಕೋಟೆಯನ್ನು ಲೋಕವು ಧರ್
ಪ್ರಭೆಯಿಂದ ದಾಟಲಾದೀತೆಂದು ಹೇಳುವುದಾದರೆ ಅದು ಸದ್ಯಕ್ಕೆ ಬರಿ
ಮಾಮೂಲಿನ ಹರಕೆ ಮಾತಿಗಿಂತ ಹೆಚ್ಚಿನದೆನಿಸಲಾರದು. ಧರ್ಮವೆಂದರೆ ಏನು
ಅದರ ಮೂಲತತ್ತ್ವಗಳು ನಮ್ಮ ವೇದಶಾಸ್ತ್ರಗಳಲ್ಲಿವೆ ಎನ್ನೋಣವೆ ? ಪುಸ್
ಮಾತ್ರದಲ್ಲಿದ್ದು ಪ್ರಯೋಗದಲ್ಲಿ ಕಾಣಬಾರದ ತತ್ತ್ವವು ಗಾಜಿನ ಪೆಟ್ಟಿಗೆಯೊಳಗಿರು
ನಿರ್ಜೀವ ದೇಹದಂತೆ ತಾನೆ ? ಒಂದು ತತ್ತ್ವವು ಜೀವವಂತವೆನಿಸಬೇಕಾದರೆ ಅ
ಲೋಕಪ್ರಸಂಗಗಳಿಗೆ ಅನ್ವಯಿಸಿಕೊಂಡಿರಬೇಕು. ಅನುಷ್ಠಾನ ಸಾಧ್ಯವಲ್ಲದ ತತ್
ಎಷ್ಟು ಉದಾತ್ತವಾಗಿದ್ದರೆ ಏನು ? ಮಹರ್ಷಿಗಳು ಸಾರಿರುವ ತತ್ತ್ವಗಳನ್ನು ಇಂ
ಪ್ರಶ್ನೆಗಳಿಗೆ ಅನ್ವಯ ಮಾಡುವುದು ಹೇಗೆ ? ನಮ್ಮ ಸಮಾಜದ ತಳಹದಿ ಕ
ಹೋಗಿದೆ. ಹಿಂದಿನಿಂದ ಬಂದ ಆಚಾರ ಸಂಪ್ರದಾಯಗಳು ಅಳಿಸಿಹೋಗುತ್ತಿ
ಹಳೆಯ ನಂಬಿಕೆಗಳು ಮಾಸಿವೆ. ಮನು ಪರಾಶರರ ಕಟ್ಟುಪಾಡುಗಳನ್ನು ಇಂ
ಪರಿಸ್ಥಿತಿಯಲ್ಲಿ ಅಕ್ಷರಶಃ ಪಾಲಿಸಲಾದೀತೆ ? ಇಂದಿನ ಪ್ರಪಂಚದಿಂದ ನಾ
ಬೇರೆಯಾಗಿ ಬಾಳುವುದು ಸಾಧ್ಯವೆ ? ಅದು ಅವಶ್ಯವೆ ? ಅದು ಯುಕ್ತವೆ
ಅಥವಾ ಈ ಪುರಾತನ ಸಮಾಜವನ್ನು ನೂತನ ಭಾವನೆಗಳಿಗೆ ಒಪ್ಪುವಂತೆ,—
ವ್ಯಕ್ತಿಯ ಸ್ವಾತಂತ್ರ್ಯವೂ ಸಮಷ್ಟಿಯ ನಿಯಮವೂ ಹೊಂದಿಕೊಂಡಿರುವಂತೆ,—
ಪುನರ್ವ್ಯವಸ್ಥೆ ಮಾಡುವುದು ಸಾಧ್ಯವೆ ? ಇದು ಪ್ರಶ್ನೆ. ಇಂದಿನ ನವನಾಗರಿಕ
ಯೆಲ್ಲವೂ ತುಚ್ಛವೆನ್ನುವುದು ನ್ಯಾಯವಾಗದು. ಈ ನಾಗರಿಕತೆ ಮನುಷ್ಯನ ಸ್ವಭಾವ
ಸಿದ್ಧವಾದ ಪ್ರಗತಿಯಲ್ಲಿ ಒಂದು ಘಟ್ಟ. ಅದನ್ನು ದೂಷಿಸಲು ಕಾರಣವಿಲ್ಲ. ಅದನ
ಅರ್ಥಮಾಡಿಕೊಳ್ಳುವುದು ಪ್ರಯೋಜನದ ದಾರಿ. ದೋಷವಿರುವುದು ಭೌ
ವಿಜ್ಞಾನದಲ್ಲಲ್ಲ,–ಭೌಮ ಸಂಪತ್ತಿನಲ್ಲೂ ಅಲ್ಲ ; ಆ ವಿಜ್ಞಾನವನ್ನೂ ಆ ಸಂಪತ್ತನ್ನೂ
ನಾವು ಉಪಯೋಗಿಸಿಕೊಳ್ಳುತ್ತಿರುವ ರೀತಿಯಲ್ಲಿ. / ನಮ್ಮ ಉದ್ದೇಶ ವಿಧಾನಗಳಲ್ಲಿ
ನಾವು ದೋಷವನ್ನು ಹುಡುಕಿಕೊಳ್ಳುವುದು ಯುಕ್ತವಾಗಿದೆ. ಹೀಗೆ ನಮಗೆ ಈ

ಆಗಬೇಕಾಗಿರುವುದು ನೀತಿ ಪರಿಶೋಧನೆ ಮತ್ತು ಒಂದು ನವನೀತಿ ಶಾಸನ. ನೀತಿಯಾದರೋ ಹೃದಯ ಬುದ್ಧಿಗಳ ಶಿಶು. ಆ ಅಂತರಂಗ ದಂಪತಿಗಳಲ್ಲಿ ಹೃದಯವನ್ನು ಸೊಗಸುಗೊಳಿಸಿ ಅದರ ಪ್ರಭಾವದಿಂದ ಬುದ್ಧಿಯನ್ನು ತಿದ್ದಿಸುವ ಕೆಲಸ ಕಾವ್ಯದ್ದು.

ಈಗ ಲೋಕ ಕಾದಿರುವುದು ಅಂಥ ಮಹಾಕಾವ್ಯಕ್ಕಾಗಿ. ಕಾವ್ಯದಿಂದ ನಮಗೆ ಈಗ ಆಗಬೇಕಾದದ್ದು ಮನೋರಂಜನೆ ಮಾತ್ರವಲ್ಲ, ಮಹತ್ತ್ವದರ್ಶನ. ಅಷ್ಟಿಷ್ಟು ಸ್ವಾರಸ್ಯವುಳ್ಳ ಕಾವ್ಯ ಎಲ್ಲ ದೇಶಗಳಲ್ಲೂ ಯಾವಾಗಲೂ ಇರುತ್ತದೆ. ವಿರಳವಾದದ್ದು ಉದ್ಧಾರಕವಾದಕಾವ್ಯ. ಒಂದು ಹೊಸ ವಿಶ್ವಧರ್ಮದರ್ಶನ, ಒಂದು ಹೊಸ ಜೀವಿತಾರ್ಥ ದೃಷ್ಟಾಂತ, ಒಂದು ಹೊಸ ಇಹಪರ ಸಮನ್ವಯಾದರ್ಶ – ಇದನ್ನು ದೊರಕಿಸಬಲ್ಲ ಕಾವ್ಯ ಇಂದು ನಮಗೆ ಬೇಕಾದದ್ದು. ಅದು ಮಹಾಭಾರತದ 19 ನೆಯ ಪರ್ವವೆನಿಸಬೇಕು: ಡಿವೈನ್ ಕಾಮೆಡಿಯ (Divine Comedy) 4 ನೆಯ ಉಲ್ಲಾಸವೆನಿಸಬೇಕು. ಅದು ಪದ್ಯವೋ, ಗದ್ಯವೋ, ನಾಟಕವೋ, ಕಾದಂಬರಿಯೋ, ಚರಿತ್ರೆಯೋ, ಮನನ ಮಾಲೆಯೋ, ಯಾವ ಶೈಲಿಯೋ, ಯಾವ ಪಾಕವೋ— ನಮಗೆ ಅದರಿಂದ ಆಗಬೇಕಾದ ಉಪಕಾರ ಜೀವ ನವೀಕರಣ. ಅದು ಕೇವಲ ಭಾವಾವೇಶವಾಗಿದ್ದರೆ ಸಾಲದು: ಅದರಲ್ಲಿ ತತ್ತ್ವಚಿಂತನೆಯ ಸಾರದ್ರವ್ಯವೂ ಇರಬೇಕು. ಹೃದಯ ರಸ ಪ್ರವಾಹವು ಪ್ರಾಶ್ನಿಕ ಬುದ್ಧಿಯನ್ನು ಸಮಾಧಾನಗೊಳಿಸುವಂತೆ ಹರಿಯಬೇಕು. ವಿಶ್ವಜೀವನದ ನಾನಾ ಶಕ್ತಿವೈಭವಗಳೂ ನಾನಾ ವಿಚಾರವಾಹಿನಿಗಳೂ ನಾನಾ ರಾಗವಿಲಾಸಗಳೂ ಅದರಲ್ಲಿ ಕೂಡಿಕೊಂಡು ನಮಗೊಂದು ಹೊಸ ಆಶೆಯನ್ನೂ ಹೊಸ ಬೆಳಕನ್ನೂ ಸೂಸಬೇಕು.

ಇಂಥ ಜೀವತಾರಕ ಕಾವ್ಯದ ಉತ್ಪತ್ತಿಗೆ ಬೇಕಾದ ಸ್ಫೂರ್ತಿಯು ತಪಸ್ಸಿಲ್ಲದೆ ಲಭ್ಯವಾದೀತೆ? ತಪಸ್ಸು ಮಾಡಬೇಕಾದವರು ಕವಿತಾ ಸಾಮರ್ಥ್ಯವುಳ್ಳವರು ಮಾತ್ರವೇ ಅಲ್ಲ: ದೇಶದ ಎಲ್ಲ ವಿದ್ಯಾವಂತರೂ ಎಲ್ಲ ವಿಚಾರಶೀಲರೂ ತಮ್ಮ ತಮ್ಮ ಜೀವನ ಕ್ಷೇತ್ರಗಳಲ್ಲಿ ತಪಸ್ಸು ಮಾಡಬೇಕು. ರಾಮಾವತಾರಕ್ಕಾಗಿ ಋಷಿಗಳು ತಪಸ್ಸು ಮಾಡಿದರು. ದಶರಥನು ಯಾಗ ಮಾಡಿದನು. ಮಹಾಕಾವ್ಯೋದಯಕ್ಕಾಗಿ ದೇಶದ ಮಹಾಜನರು ಮಡಿಯುಡಬೇಕು. ಕವಿಯು ದೀಕ್ಷೆ ತೊಡಬೇಕು. ಇಂಡಿಯದ ರಾಷ್ಟ್ರಕರು ಗತಾನುಗತಿಕತೆಯಿಂದ ತೃಪ್ತರಾಗದೆ ದೇಶದ ಸ್ವಭಾವವನ್ನು, ಅದರ ಸನ್ನಿವೇಶಗಳನ್ನು, ಅದರ ಇತಿಹಾಸವನ್ನು, ಅದರ ಆತ್ಮದೊಳಗೆ ಅಡಗಿರುವ ಗುಣರುಚಿ ಪ್ರವೃತ್ತಿಗಳನ್ನು ಪರೀಕ್ಷಿಸಿ ಸ್ವಧರ್ಮದ ಪುನರ್ದರ್ಶನವನ್ನು ಸಂಪಾದಿಸಬೇಕು. ಕವಿಯು ಲೋಕದ ಹೃದಯಾಂತರಾಳದಲ್ಲಿ ಕುದಿಯುತ್ತಿರುವ ಕೊರಗು ಕೋರಿಕೆಗಳ ಕಾವನ್ನು ತಾನು ಅನುಭವಿಸಿ ಉದಾತ್ತ ಜೀವನ ಚಿತ್ರವನ್ನು ಕನಸು ಕಾಣಬೇಕು. ಈ ವಿಧವಾದ ಧರ್ಮಪರಾಮರ್ಶೆಗಾಗಿ ಸ್ವಾತಂತ್ರ್ಯವು ಉಪಯುಕ್ತವಾದರೆ ಆ ಪರಾಮರ್ಶೆಯಿಂದ ಆಗುವ ನೂತನ ಮನೋಬುದ್ಧಿವಿಕಾಸವು ನವಕಾವ್ಯಕ್ಕೆ ಸ್ಫೂರ್ತಿಪ್ರದವಾದೀತು.

ಜಗತ್ತಿನಲ್ಲಿ ಎಷ್ಟೋ ದೇಶಗಳು ಎಷ್ಟೋ ಕಾಲದಿಂದ ಸ್ವತಂತ್ರವಾಗಿ
ಇವೆ. ಅಲ್ಲೆಲ್ಲ ಮಹಾಕಾವ್ಯಗಳು ಎಷ್ಟೆಷ್ಟು ಉದಿಸಿವೆಯೆಂದು ನೋಡಿದರೆ, ಕಾವ್ಯ
ನಿಜವಾದ ಉತ್ಪತ್ತಿಸ್ಥಾನ ಸ್ವಾತಂತ್ರ್ಯವಲ್ಲ, ಸ್ವಾತಂತ್ರ್ಯದ ವಿನಿಯೋಗನ
ಎಂದು ತೋರಿಬರುತ್ತದೆ. ಕಾವ್ಯಶ್ರೀ ಸಮುದಯವಾಗುವುದು ಜನತಾ ಹೃದ
ಸಮುದ್ರದಿಂದ,—ಕವಿಕೃತಮಂಥನದಿಂದ. ಈ ಸಮುದ್ರಮಥನಕ್ಕೆ ಅವಕಾ
ವನ್ನೂ, ಪ್ರೇರಣೆಯನ್ನೂ ಒದಗಿಸುವುದು ರಾಷ್ಟ್ರಸ್ವಾತಂತ್ರ್ಯ.

# ಕವಿಚಕ್ರವರ್ತಿ ರನ್ನ*

ಈ ಸಭೆಗೆ ನಾನು ಬಹು ಭಯ ಭಕ್ತಿಗಳಿಂದ ಬಂದಿದ್ದೇನೆ. ಕಾರಣ—ಇದು ಸಾಮಾನ್ಯ ಸಭೆಯಲ್ಲ, ಇದು ಒಡ್ಡೋಲಗ. ಕವಿರಾಜನ,—ಕವಿ ಚಕ್ರವರ್ತಿ ರನ್ನನ,—ಒಡ್ಡೋಲಗ. ರಾಜಾಧಿರಾಜ ತೈಲಪ ಚಕ್ರವರ್ತಿಯೇ ರನ್ನನು ಚಕ್ರವರ್ತಿಯೆಂದು ಅಂಗೀಕರಿಸಿದ್ದಾನೆ. ಅಂಥವನ ದರ್ಬಾರು ಈ ದಿವಸದ ಈ ನಮ್ಮ ಸಭೆ.

ಇದುವರೆಗೂ ಈ ದೇಶದಲ್ಲಿ ಎಷ್ಟೋ ಮಂದಿ ರಾಜರೂ ಚಕ್ರವರ್ತಿಗಳೂ ಆಗಿಹೋಗಿದ್ದಾರೆ. ಅವರಲ್ಲಿ ಅನೇಕರನ್ನು ಜನ ಮರೆತೂ ಹೋಗಿದ್ದಾರೆ. ಆದರೆ ನಮ್ಮ ಇಂದಿನ ಚಕ್ರವರ್ತಿ ಮಾತ್ರ ಸರ್ವೋನ್ನತ ಸ್ಥಾನದಲ್ಲಿದ್ದಾನೆ; ಕವಿ ಕಾವ್ಯಗಳ ದೆಸೆಯಿಂದ ಹೆಮ್ಮೆಪಡುವ ಎಲ್ಲ ಕನ್ನಡಿಗರ ಹೃದಯದಲ್ಲಿಯೂ ಅವನು ಸಿಂಹಾಸನಸ್ಥನಾಗಿದ್ದಾನೆ. ಅವನ ಪದವಿಗೆ ಎಂದೆಂದಿಗೂ ಚ್ಯುತಿ ಬಾರದು. ಅವನ ರಾಜ್ಯ ಕನ್ನಡಿಗರಲ್ಲಿ ಮನುಷ್ಯ ಸ್ವಭಾವವಿರುವಷ್ಟು ಕಾಲವೂ ಶಾಶ್ವತವಾಗಿ ನಿಲ್ಲತಕ್ಕದ್ದು. ಈ ಹೊತ್ತು ಇಲ್ಲಿ ನಡೆಯುತ್ತಿರುವುದು ಆತನ ದರ್ಬಾರು.

ಯಾವ ದೈವ ಕನ್ನಡ ದೇಶವನ್ನು ಇಂದಿನವರೆಗೂ ಕಾಪಾಡಿಕೊಂಡು ಬಂದಿದೆಯೋ.—ಯಾವ ದೈವ ಸಾವಿರ ವರ್ಷಗಳ ಹಿಂದೆ ನಮ್ಮ ಜನಕ್ಕೆ ರನ್ನ ಕವಿಯನ್ನು ಅನುಗ್ರಹಮಾಡಿತೋ.—ಯಾವ ದೈವ ಈ ಹೊತ್ತಿನವರೆಗೂ ಅಂಥ ಕವಿಯ ಮಹಿಮೆಯನ್ನರಿತು ಹೆಮ್ಮೆಪಡುವ ಹೃದಯವನ್ನು ಕನ್ನಡಿಗರಿಗೆ ಕೊಟ್ಟಿದೆಯೋ. ಆ ದೈವಕ್ಕೆ ಕೃತಜ್ಞತೆಯ ನಮಸ್ಕಾರಗಳನ್ನು ಸಮರ್ಪಿಸುವ ಹಬ್ಬ ಈ ದಿವಸದ್ದು.

ರನ್ನಕವಿ ಎಂಥ ಕಾವ್ಯ ಬರೆದಿದ್ದಾನೆ. ಎಂಥ ವಿಷಯವನ್ನು ವಸ್ತುವಾಗಿ ಆರಿಸಿಕೊಂಡಿದ್ದಾನೆ. ಎಂಥ ಉದಾತ್ತವಾದ ಧ್ಯೇಯವನ್ನು ಅದರಲ್ಲಿ ಪ್ರತಿಪಾದಿಸ ಹೊರಟಿದ್ದಾನೆ.—ಈ ವಿಚಾರಗಳನ್ನು ಆಲೋಚಿಸುತ್ತ ಹೋದರೆ ಆತನು ಇಂದಿಗೂ

---

* ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ರನ್ನನ ಸಹಸ್ರ ವಾರ್ಷಿಕೋತ್ಸವ ಪ್ರಾರಂಭದಲ್ಲಿ ತಾ|| 16-12-1949 ನೆಯ ದಿನ ಶ್ರೀ ಡಿ. ವಿ. ಜಿ. ಅವರು ಅಧ್ಯಕ್ಷರಾಗಿ ಮಾಡಿದ ಭಾಷಣದ ಸಾರಾಂಶ.

ನಮ್ಮ ಹೃದಯ ಸಾಮ್ರಾಜ್ಯಗಳಿಗೆ ಚಕ್ರವರ್ತಿಯಾಗಿರಲು ತಕ್ಕವನೆಂಬುದು ಎಲ್ಲರಿ ತಾನಾಗಿಯೇ ತೋರುವುದೆಂದು ನಾನು ನಂಬಿದ್ದೇನೆ. ಕೇವಲ ಪುರಾತನತೆ ದೃಷ್ಟಿಯಿಂದ ನೋಡುವುದಾದರೆ, ಇಂಗ್ಲೆಂಡಿನ ಚಾಸರನೂ ಇಂಗ್ಲಿಷ್ ಸಾಹಿ ಸಾರ್ವಭೌಮ ಷೇಕ್ಸ್‌ಪಿಯರನೂ ನಮ್ಮ ರನ್ನನ ಮುಂದೆ ನಿನ್ನೆ ಮೊನ್ನೆ ಹುಡುಗರು. ಇಟಲಿಯ ಡ್ಯಾಂಟೆ ಕೂಡ ಹುಡುಗನೇ. ಜರ್ಮನಿಯ ಗಯ ಅಂಬೆಗಾಲು ಮಗು.

ಕೆಲವು ವಾರಗಳ ಹಿಂದೆ ಗಯಟೆ ಕವಿಯ 200 ನೆಯ ವರ್ಷದ ಹುಟ್ ಹಬ್ಬವನ್ನು ಪ್ರಪಂಚದ ನಾನಾ ಭಾಗಗಳಲ್ಲಿ ಆಚರಿಸಿದರು. ನಮ್ಮ ಬೆಂಗಳೂ ನಲ್ಲಿಯೂ ಒಂದೆರಡು ಕಡೆ ಆ ಉತ್ಸವ ನಡೆಯಿತು. ಪ್ರಪಂಚ ರಾಷ್ಟ್ರಸಂಸ್ಥೆಯವ (Unesco) ಅದನ್ನು ವಿಶೇಷವಾಗಿ ಮಾಡಿದರು. ಅಂಥಾದ್ದು ಯುರೋ ಯನ್ನರು ತಮ್ಮ ಕವಿಗಳ ವಿಷಯದಲ್ಲಿ ತೋರುವ ಸಂಭ್ರಮ. ಷೇಕ್ಸ್‌ಪಿಯರ ಅವತಾರ ದಿವಸದಲ್ಲಿ ಆತನ ಜನ್ಮಸ್ಥಳವಾದ ಸ್ಟ್ರ್ಯಾಟ್‌ಫರ್ಡ್-ಆನ್–ಆ್ಯವನ್ ಎಂಬ ಕ ವರ್ಷವರ್ಷವೂ ಪರಿಷೆ ಸೇರುತ್ತದೆ. ನಾಲ್ಕೆಂಟು ದಿವಸ ಅಲ್ಲಿ ನಾಟಕ, ಸಂಗೀ ವಿನೋದ ಸಂಭ್ರಮಗಳು ನಡೆಯುತ್ತವೆ. ಆ ಉತ್ಸವಗಳಲ್ಲಿ ದೇಶನಾಯಕ ಉತ್ಸಾಹದಿಂದ ಭಾಗವಹಿಸುತ್ತಾರೆ. ಆದರೆ ನಮ್ಮಲ್ಲಿ ಸಾವಿರ ವರ್ಷಗಳ ಕೆ ಹುಟ್ಟಿ ಉತ್ತಮ ಕಾವ್ಯ ರಚಿಸಿ ಕವಿಚಕ್ರವರ್ತಿಯೆನ್ನಿಸಿಕೊಂಡ ರನ್ನನ ಸಹಸ ವಾರ್ಷಿಕೋತ್ಸವದಲ್ಲಿ ನಮ್ಮ ಮಂತ್ರಿಗಳೆಲ್ಲಿ ? ಶಾಸನ ಸಭಾಧ್ಯಕ್ಷರೆಲ್ಲಿ ? ಪ್ರಮು ನಾಯಕರೆಲ್ಲಿ ? ಹೀಗಿದೆ ನಮ್ಮ ದೇಶದ ಸ್ಥಿತಿ.

ಒಂದೆರಡು ವರ್ಷಗಳ ಹಿಂದೆ ಇಂಗ್ಲೆಂಡಿನಲ್ಲಿ ಡಿಕನ್ಸ್ ಕಾದಂಬರೀಕಾರ ಜ್ಞಾಪಕೋತ್ಸವವನ್ನು ಮಾಡಿದರು. ಅಂದು ಲಂಡನ್ನಿನಲ್ಲಿ ಏನು ಉತ್ಸಾಹ ಆತನು ವಾಸವಾಗಿದ್ದ ಜಾಗಕ್ಕೆ ಮೆರವಣಿಗೆ, ಆತನ ಕಥೆಗಳಲ್ಲಿರುವ ಪ್ರಸಿದ್ಧ ಪಾತ್ರಗ ವೇಷಗಳು, ಆ ಕಥೆಗಳ ರಂಗಸ್ಥಳಗಳಿಗೆ ಯಾತ್ರೆಗಳು–ಇದನ್ನೆಲ್ಲ ಏರ್ಪಡಿಸಿದ್ದರು

ಇಲ್ಲಿ ನಾವು ರನ್ನನ ಜನ್ಮಸ್ಥಳಕ್ಕೆ—ಮುಧೋಳಿಗೆ—ಯಾತ್ರೆ ಏರ್ಪಡಿಸಬಹ ದಾಗಿತ್ತು ; ಅಲ್ಲಿ ಪರಿಷೆ ಸೇರಬಹುದಾಗಿತ್ತು. ಶ್ರವಣಬೆಳಗೊಳಕ್ಕಾದರೂ ಯಾತ್ ಹೋಗಿ. ಅಲ್ಲಿ ರನ್ನನ ಕೈಬರಹವೆನಿಸಿಕೊಂಡಿರುವ ಶಿಲಾಲಿಪಿಗಾದರೂ ಕೈಮುಗಿದ ಸಂತೋಷಪಡಬಹುದಾಗಿತ್ತು. ಯಾವ ಒಂದು ಪೌರುಷಗುಣವನ್ನು,—ಯಾ ಒಂದು ಮನೋದಾರ್ಢ್ಯವನ್ನು—ರನ್ನನು ತನ್ನ ಕಾವ್ಯದಲ್ಲಿ ಎಲ್ಲ ಗುಣಗಳಿಗಿಂ ಮೇಲಾಗಿ ಎತ್ತಿಹಿಡಿದಿದ್ದಾನೆಯೋ ಆ ಗುಣ—ಆ ಸಾಹಸಪ್ರೀತಿ, ಆ ಗೌರವನಿಷ್ ಆ ವೀರಮನೋವೃತ್ತಿ—ಇಂದಿನ ಕನ್ನಡಿಗರಲ್ಲಿ ತಕ್ಕಷ್ಟು ಸಾಲದೆ ಇರುವುದರಿಂ ನಾವು ಇಂಥ ಸಣ್ಣ ಸಮಾರಂಭಗಳಿಂದಲೇ ಈ ಹೊತ್ತು ಸಮಾಧಾನ ತಂದುಕೊಳ್ ಬೇಕಾಗಿದೆ.

ರನ್ನಕವಿ ಹುಟ್ಟಿದ್ದು ಮುಧೋಳಿನಲ್ಲಿ ಎಂದು ಹೇಳಿದೆನಲ್ಲವೆ ? ಅಲ್ ಹೆಸರೊಂದನ್ನು ಬಿಟ್ಟರೆ ಆತನ ಕಾಲದ ಗುರುತಿನ್ನೊಂದೂ ಇಲ್ಲ. ಶ್ರವಣಬೆಳಗೊ

ದಲ್ಲಿ ರನ್ನನ ಕೈಬರಹವೆಂದು ಹೇಳುವ ಲಿಪಿ ರನ್ನನದೆಂಬುದೂ ಊಹೆಯ ಮಾತು. ಆತನ ನಾಲ್ಕು ಕಾವ್ಯಗಳಲ್ಲಿ ಸದ್ಯಕ್ಕೆ ದೊರೆತಿರುವ ಎರಡರ ಹೊರತು ಆತನ ಜ್ಞಾಪಕವಸ್ತು ನಮಗೆ ಯಾವುದೂ ಇಲ್ಲ. ನಮಗೆ ದೊರೆಯದೆ ನಷ್ಟವಾಗಿ ಹೋಗಿರುವ ಎರಡು ರನ್ನಕಾವ್ಯಗಳು 'ಚಕ್ರೇಶ್ವರ ಚರಿತೆ' ಮತ್ತು 'ಪರಶುರಾಮ ಚರಿತೆ.' ನಮಗೆ ದೊರೆತಿರುವ ಎರಡು 'ಅಜಿತ ಪುರಾಣ' ಮತ್ತು 'ಸಾಹಸ ಭೀಮ ವಿಜಯ' ಅಥವಾ 'ಗದಾಯುದ್ಧ.' ಈ ಎರಡರ ಶೈಲಿಯ ಧೋರಣೆಯನ್ನೂ ರಸಪಾಕವನ್ನೂ ನೋಡಿದರೆ, ನಮಗೆ ಸಿಕ್ಕದೆಹೋಗಿರುವ ಆ ಎರಡೂ ಇನ್ನೆರಡು ರತ್ನಗಳಾಗಿಯೇ ಇದ್ದಿರಬೇಕೆಂದೆನಿಸುತ್ತದೆ. ರನ್ನನ ಕೈವಾಡ ಅಂಥಾದ್ದು; ಮುಟ್ಟಿದ್ದಕ್ಕೆ ಕಳೆಕೊಟ್ಟು ಜೀವರಸ ತುಂಬುವ ಶಕ್ತಿ ಅವನದು. ನಮಗೆ ಲಭ್ಯವಾಗದೆ ಹೋಗಿರುವ 'ಚಕ್ರೇಶ್ವರ ಚರಿತೆ,' ಬಹುಶಃ 'ಅಜಿತ ಪುರಾಣ' ದಂತೆ ಧಾರ್ಮಿಕ ಗ್ರಂಥವೋ ಏನೋ! 'ಪರಶುರಾಮ ಚರಿತೆ' ಮಾತ್ರ 'ಸಾಹಸಭೀಮ ವಿಜಯ'ದಂತೆ ಶುದ್ಧ ಕಾವ್ಯವಾಗಿಯೇ ಇದ್ದಿರಬೇಕೆಂದು ನನ್ನ ಮನಸ್ಸಿಗನ್ನಿಸುತ್ತದೆ. ಭೀಮಕಥೆಯಂತೆಯೇ ಪರಶುರಾಮ ಕಥೆ ವೀರರಸಕ್ಕೆ ಆಸ್ಪದವುಳ್ಳದ್ದು.

ರನ್ನನು ಗಂಡುಕವಿ : ಆತನಿಗೆ ಓಜಸ್ತೇಜಃಪ್ರಧಾನಗಳಾದ ಪಾತ್ರಗಳು ಬಹು ಪ್ರಿಯವಾದವುಗಳಾಗಿರಬೇಕು. ತನ್ನ ಎದೆಯೊಲವನ್ನು ಮನಸಾರ ಹೊರಹರಿಸಲು ಪರಶುರಾಮನ ಕ್ಷಾತ್ರ ಸಾಹಸಗಳಲ್ಲಿ ರನ್ನನಿಗೆ ಯಥೇಷ್ಟ ಅವಕಾಶ ದೊರೆತಿದ್ದಿರಬೇಕು. ಅಂಥಾ ವೀರಾವೇಶದ ಚಿತ್ರಗಳನ್ನು ನೋಡುವ ಭಾಗ್ಯ ನಮ್ಮ ಪಾಲಿಗೆ ಇಲ್ಲವಾಯಿತಲ್ಲಾ ಎಂಬುದು ರನ್ನನನ್ನು ಸ್ಮರಿಸಿದಾಗ ನನ್ನ ಮನಸ್ಸಿಗಾಗುವ ಕೊರತೆ.

ಅಂಥಾ ವೀರಕವಿಯ ಪ್ರತ್ಯಕ್ಷ ಜ್ಞಾಪಕವೊಂದು ನಮ್ಮ ಜನಕ್ಕೆ ಬೇಡವೆ ? ರನ್ನನಿಗೆ ಏನೂ ಬೇಕಾಗಿಲ್ಲ. ನಮ್ಮ ಪೂಜೆಪುರಸ್ಕಾರಗಳು ಆತನನ್ನು ಮುಟ್ಟುವ ಹಾಗಿಲ್ಲ. ಆತನ ಕಾವ್ಯಗಳಿಂದ ನಿಲ್ಲಲಾರದ ಕೀರ್ತಿ ನಾವು ನೆಡಬಹುದಾದ ಕಂಬ ಕಟ್ಟಡಗಳಾಗಿ ನಿಲ್ಲಬಲ್ಲುದೆಂದು ಯಾರೂ ತಿಳಿದುಕೊಂಡಿಲ್ಲ. ಹಾಗಾದರೆ ನಾವು ಸ್ಮಾರಕಚಿಹ್ನೆಯನ್ನು ನಿಲ್ಲಿಸಬೇಕೆನ್ನುವುದು ಯಾರಿಗೋಸ್ಕರ ? ಇನ್ನು ಮುಂದೆ ಬರಲಿರುವ ಕನ್ನಡ ಜನಾಂಗಕ್ಕೋಸ್ಕರ. ಅವರು,—ಇನ್ನು ಐವತ್ತು ವರ್ಷ ನೂರು ವರ್ಷಗಳ ತರುವಾಯ ಈ ನಾಡಿನಲ್ಲಿ ಬಾಳುವ ಜನರು,—ರನ್ನನ ಕಾವ್ಯವನ್ನೋದಿದ ಬಳಿಕ—"ಒಳ್ಳೆಯದು : ಇಂಥಾ ಮಹಾಕವಿಯ ಸಹಸ್ರವಾರ್ಷಿಕ ಸಮಯದಲ್ಲಿ ಬದುಕಿದ್ದ ನಮ್ಮ ಪೂರ್ವಿಕರು ಆ ಕವಿಯ ಮಹಿಮೆಯನ್ನು ಕಂಡಿದ್ದರೆ ? ಕಂಡಿದ್ದಿದ್ದರೆ ಅವರು ಆ ಕವಿಯ ಹೆಸರಿಗೆ ಯಾವ ಕಾಣಿಕೆಯನ್ನೂ ಅರ್ಪಿಸುತ್ತಿರಲಿಲ್ಲವೆ ?" ಎಂದು ಕೇಳಿಕೊಳ್ಳಲಾರರೆ ? ಆ ಭಾವೀ ಲೋಕದ ಮೂದಲಿಕೆಗೆ ಹೆದರಿಯಾದರೂ ನಾವು ನಮ್ಮ ಕೃತಜ್ಞತೆಯನ್ನು ಒಂದು ಶಾಶ್ವತಾಕಾರದಲ್ಲಿ ಪ್ರತ್ಯಕ್ಷಗೊಳಿಸಬೇಡವೆ ? ಪರಿಷತ್ತು ಈ ವಿಚಾರವನ್ನು ಕುರಿತು ಆಲೋಚನೆ ನಡಸೀತೆಂದು ನನಗೆ ನಂಬಿಕೆಯಿದೆ. ಮುಧೋಳಿನಲ್ಲಿ ಒಂದು ರನ್ನವಿಜಯಸ್ತಂಭವನ್ನು ನೆಡುವುದು ಯುಕ್ತವೆಂದು ನನಗೆ ತೋರುತ್ತದೆ. ನಮ್ಮ ಕಾಲದ ತಮಿಳು ಕವಿ ಭಾರತಿಯವರ ಜ್ಞಾಪಕಾರ್ಥ

ವಾಗಿ ತಮಿಳರು ಆಗಲೇ ಆತನ ಊರು ಎಟ್ಟಿಯಾಪುರದಲ್ಲಿ ಮಂಟಪ ಕಟ್ಟಿದ್ದಾರೆ. ಗವರ್ನರ್–ಜನರಲ್ ಶ್ರೀಮಾನ್ ರಾಜಗೋಪಾಲಾಚಾರ್ಯರವರೇ ಆದ ಪ್ರವೇಶೋತ್ಸವವನ್ನು ನೆರವೇರಿಸಿದ್ದು ನಿಮಗೆ ಜ್ಞಾಪಕವಿರಬಹುದು. ತಮಿಳ ವಾಲ್ಮೀಕಿಯೆನಿಸಿರುವ ಕಂಬರ್ ಕವಿಯ ಜನ್ಮಸ್ಥಳದಲ್ಲಿ ಸ್ಮಾರಕ ಪ್ರತಿಷ್ಠೆ ಮಾಡು ಯತ್ನವೂ ನಡೆಯುತ್ತಿದೆ. ಆಂಧ್ರರು ತಮ್ಮ ಪೋತನ ಕವಿಯ ಪುಣ್ಯಸ್ಮೃತಿಯನು ಪ್ರತ್ಯಕ್ಷರೂಪದಲ್ಲಿ ನಿಲ್ಲಿಸಿಕೊಂಡಿದ್ದಾರೆ. ಕನ್ನಡಿಗರು ಕೃತಜ್ಞತೆಯಿಲ್ಲದವರೇನು?

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತಾರು ಮಂದಿ ಪ್ರಸಿದ್ಧ ಕವಿಗಳಿದ್ದಾರೆ ಅವರಲ್ಲಿ ರನ್ನನಿಂದೀಚಿನವರನೇಕರು ಕವಿಶ್ರೇಷ್ಠರು ಆತನನ್ನು ಕವಿಚಕ್ರವರ್ತಿಯೆಂದು ಹೊಗಳಿದ್ದಾರೆ. ಏತಕ್ಕಾಗಿ? ರನ್ನನ ಕವಿತಾಧೋರಣೆಗಾಗಿ. ರನ್ನನ ಶೈಲಿ ಪಂಪ ಕವಿಯ ಶೈಲಿಯಷ್ಟು ಕ್ಲಿಷ್ಟವಲ್ಲ; ನಾರಣಪ್ಪನ ಶೈಲಿಯಷ್ಟು ಸಾಧಾರಣವಲ್ಲ ಪಂಡಿತರಂಜಕವಾಗಿಯೂ ಹಾಗೆಯೇ ಅಷ್ಟು ಪಂಡಿತರಲ್ಲದ ಸಾಮಾನ್ಯರಿಗೂ ರಸಾನುಭವವನ್ನುಂಟುಮಾಡಬಲ್ಲದ್ದಾಗಿಯೂ ಇರುವ ಶೈಲಿ ರನ್ನನದು. ಅದರಲ್ಲಿ ಪ್ರತ್ಯಕ್ಷ ವಸ್ತುವರ್ಣನೆಯೂ ಅಪ್ರತ್ಯಕ್ಷ ಭಾವಸೂಚನೆಯೂ—ಎಂದರೆ ವಾಚ್ಯವೂ ಧ್ವನಿಯೂ —ಇಂಪಾಗಿ ಸೇರಿ ಹೊಂದಿಕೊಂಡಿವೆ. ಇಂಥಾ ನಿರೂಪಣೆ ಧ್ವನಿಗಳೆರಡೂ ಕೂಡಿಕೊಂಡಿರುವ ಕಾವ್ಯಲಕ್ಷಣವನ್ನು "ಗುಣೀಭೂತವ್ಯಂಗ್ಯ"ವೆಂದು ಕರೆಯುವುದುಂಟು. ರನ್ನನ ಕಾವ್ಯ ಆ ಜಾತಿಯದು.

ರನ್ನ ಗಂಡುಕವಿ. ಇಲ್ಲಿ ಗಂಡೆಂಬ ಮಾತು ದೇಹಲಕ್ಷಣಕ್ಕೆ ಸೇರಿದ್ದಲ್ಲ, ಮನಃ ಪ್ರವೃತ್ತಿಗೆ ಸೇರಿದ್ದು. ಗಂಡು ಹುಡುಗರು ಜೈತಲೆ ಬಾಚಿಕೊಂಡೂ ಹೆಣ್ಣುಮಕ್ಕಳು ಪಾಯಿಜಾಮಾ ತೊಟ್ಟುಕೊಂಡೂ ನಲಿದಾಡುತ್ತಿರುವ ಈ ಕಾಲದಲ್ಲಿ ರನ್ನನನ್ನು ನಾನು ಗಂಡುಕವಿಯೆಂದದ್ದಕ್ಕಾಗಿ ಯಾರೂ ಕೋಪಮಾಡಲಾರರೆಂದು ನಂಬಿದ್ದೇನೆ. ಹೊರ ವೇಷ ಚೇಷ್ಟೆಗಳ ಪರಿಣಾಮ ಅಂತರಂಗದ ಮೇಲೆ ಉಂಟೋ ಇಲ್ಲವೋ ನಾನು ಹೇಳಲಾರೆ. ಒಟ್ಟಿನಲ್ಲಿ ಗಂಡುತನಕ್ಕೂ ಲೋಕದಲ್ಲಿ ಒಂದು ಸ್ಥಾನ ಉಂಟೆಂದು ತಿಳಿದುಕೊಂಡಿದ್ದೇನೆ. ಆ ಕಾರಣದಿಂದ ರನ್ನನ ಕಾವ್ಯಗುಣಕ್ಕೆ ಹೆಚ್ಚಿನ ಬೆಲೆ ಕೊಟ್ಟಿದ್ದೇನೆ.

ಸಾಮಾನ್ಯವಾಗಿ ನಮ್ಮ ಕಾವ್ಯದ ವಿಷಯಗಳು ಮೂರು ಜಾತಿಯವು: (1) ಶೃಂಗಾರ, (2) ಮತಧರ್ಮ, (3) ವೀರ. ಈ ಮೂರರಲ್ಲಿ ಬಹು ವಿರಳವಾದದ್ದು ವೀರ. ಬಹುಮಂದಿ ಕವಿಗಳು ಕೈಹಚ್ಚದಿರುವ ವೀರ ಕಥೆಯನ್ನು ರನ್ನನು ತೆಗೆದುಕೊಂಡು ಕೃತಕಾರ್ಯನಾಗಿದ್ದಾನೆ. ರಾಮಾಯಣ ಮಹಾಭಾರತ ಗ್ರಂಥಗಳನ್ನು ಬಿಟ್ಟರೆ ವೀರರಸವನ್ನು ಇಷ್ಟು ಪುಷ್ಟಿಯಿಂದ ಪ್ರತಿಪಾದಿಸಿ ಬರೆದ ಗ್ರಂಥಗಳು ಸಂಸ್ಕೃತದಲ್ಲಿಯೂ ವಿರಳ. ಕಾಳಿದಾಸನು ವೀರರಸದಲ್ಲಿ ಕೀರ್ತಿ ಪಡೆದವನಲ್ಲ. ಕನ್ನಡದಲ್ಲಿ ವೀರರಸಕ್ಕಾಗಿ ಪರಿಶ್ರಮಿಸಿದ ಕವಿಗಳು ಬಹುಶಃ ಯಾರೂ ಇಲ್ಲ; ಇದ್ದರೆ ಅವರ ಹೆಸರು ಪ್ರಸಿದ್ಧವಾಗಿಲ್ಲ. ಸಂಸ್ಕೃತದ "ವೇಣೀಸಂಹಾರ" ನಾಟಕಕರ್ತನ ತರುವಾಯ ರನ್ನನಷ್ಟು ಸೊಗಸಾಗಿ ಈ ರಸವನ್ನು ನಿರ್ವಹಿಸಿರುವವರು ಇಲ್ಲವೆಂದೇ ಹೇಳಬಹುದು.

ವೀರರಸಪ್ರಧಾನವಾದ ಕಾವ್ಯದಲ್ಲಿ "ಓಜಸ್ಸು" ಎದ್ದು ಕಾಣುತ್ತಿರಬೇಕು. ಆ ಗುಣವನ್ನು ತೇಜಸ್ಸು ಎಂದೂ ಕರೆಯಬಹುದು. ಇಲ್ಲಿ ಓಜಸ್ಸು ಎಂಬುದು ಬರಿಯ ವಾಕ್ಯಶೈಲಿಯ ಅಥವಾ ಪ್ರಬಂಧರೀತಿಯ ಮಾತಲ್ಲ. ವೇದಗಳು ಉಪಯೋಗಿಸಿರುವ ಅರ್ಥವಲ್ಲಿ "ಓಜಸ್ಸು" ಎಂಬ ಪದವನ್ನು ನಾನು ಇಲ್ಲಿ ಉಪಯೋಗಿಸುತ್ತಿದ್ದೇನೆ. ನಮ್ಮ ಆತ್ಮದಲ್ಲಿ ವೀರ್ಯವನ್ನು ತುಂಬತಕ್ಕ ಶಕ್ತಿ ಯಾವುದೋ—ಮನಸ್ಸಿಗೆ ಉತ್ಕರ್ಷ ಸ್ಥಿತಿಯನ್ನು ತರತಕ್ಕದ್ದು ಯಾವುದೋ—ಜನವನ್ನು ಜಡತೆಯಿಂದ ಮೇಲಕ್ಕೆತ್ತತಕ್ಕದ್ದು ಯಾವುದೋ ಅಂಥ ತೇಜಸ್ಸು ಅಥವಾ ಓಜಸ್ಸು ಜೀವಿಕೆಗೆ ಸಾರ್ಥಕ್ಯ ತರಬಲ್ಲದ್ದು. ಅಂಥ ಓಜೋಗುಣ ನಮ್ಮಲ್ಲಿ ಹಿಂದೆ ಎಂದೋ ಇತ್ತೆಂದು ರನ್ನನ 'ಗದಾಯುದ್ಧ' ಜ್ಞಾಪಕ ಕೊಡುತ್ತದೆ. ರನ್ನಕವಿ ಅಂಥ ಪೌರುಷ ಸಾಹಸದ ಕಾವ್ಯವನ್ನು ರಚಿಸಿ ನಮ್ಮ ದೇಶಕ್ಕೆ ಪ್ರಕೃತೋಚಿತವಾದ ಸಂದೇಶವನ್ನು ಕೊಟ್ಟಿದ್ದಾನೆ. ಈ ಕಾರಣಗಳಿಂದಲೇ ನಾನು ರನ್ನನನ್ನು ಗಂಡು ಕವಿ ಎಂದು ಕರೆದದ್ದು.

ಈ ಉತ್ಸವದಲ್ಲಿ ರನ್ನನ ಕೃತಿರತ್ನಗಳನ್ನು ಕುರಿತು ಐದಾರು ಮಂದಿ ರಸಿಕ ವಿದ್ವಾಂಸರುಗಳು ಉಪನ್ಯಾಸ ಮಾಡುವವರಾಗಿದ್ದಾರೆ. ಅವರೆಲ್ಲ ವಿಮರ್ಶನ ಚತುರರು, ವಿಶದವಾದ ವಾಕ್ಸಂಪತ್ತುಳ್ಳವರು. ಅವರ ಭಾಷಣಗಳನ್ನು ಕೇಳಲು ನಿಮಗೆ ಹೇಗೋ ನನಗೂ ಹಾಗೇ ತುಂಬ ಕುತೂಹಲವಾಗಿದೆ. ನಾಲ್ವರೈವರು ಗಮಕಿಗಳು ಕಾವ್ಯವಾಚನ ಮಾಡತಕ್ಕವರಾಗಿದ್ದಾರೆ. ಅದು ಕಿವಿಗಳಿಗೂ ಮನಸ್ಸುಗಳಿಗೂ ಔತಣವಾಗುತ್ತದೆ ಎಂಬುದರಲ್ಲಿ ನನಗೆ ಸಂಶಯವಿಲ್ಲ. ಸಮಾಪ್ತಿಮಂಗಳವಾಗಿ "ಯುನೈಟಡ್ ಆರ್ಟಿಸ್ಟ್ಸ್" ಎಂಬ ಕಲೆಗಾರ ಸಂಘದ ಸಹಾಯದಿಂದ ನಾಟಕವನ್ನೇರ್ಪಡಿಸಿದ್ದಾರೆ. ಅದಂತೂ ನನಗೆ ಅತ್ಯಂತ ಪ್ರಿಯವಾದ ಏರ್ಪಾಟು. ಅದರಿಂದ ನಮ್ಮ ದಿವಂಗತ ಮಿತ್ರರೂ ಪರಮಪ್ರಿಯರೂ ಪೂಜ್ಯರೂ ಆದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಸ್ಮರಣೆ ಒತ್ತೊತ್ತಿಕೊಂಡು ಬರುತ್ತದೆ. ವಾಸ್ತವವಾಗಿ ಈ ಉತ್ಸವದಲ್ಲಿ ಅಧ್ಯಕ್ಷರಾಗಿದ್ದಿರಬೇಕಾದವರು ಅವರು. 'ಗದಾಯುದ್ಧ ನಾಟಕ' ಅವರದು. ಅದರಲ್ಲಿ ರನ್ನನ ಭಾಗ ಎಷ್ಟೋ ಶ್ರೀಕಂಠಯ್ಯನವರದೂ ಸುಮಾರು ಅಷ್ಟಿದೆ. ರನ್ನನು ಶ್ರೀಕಂಠಯ್ಯನವರಿಗೆ ಒಪ್ಪಿಕೆಯಾದ ಕವಿ ಎಂದ ಮಾತ್ರದಿಂದಲೇ ಅವನು ಲೋಕದ ಆದರಣೆಗೆ ಅರ್ಹನಾದ ಕವಿಯೆಂಬುದೂ ಸಿದ್ಧವಾಗುತ್ತದೆ. ಕನ್ನಡ ಸಾಹಿತ್ಯ ಭಂಡಾರದ ನವರತ್ನಗಳಲ್ಲಿ 'ಗದಾಯುದ್ಧ' ಒಂದೆಂದು ಧಾರಾಳವಾಗಿ ಹೇಳಬಹುದು. ಇಂಥ ಕೃತಿರಚನೆ ಮಾಡಿದ ಕವಿ ರನ್ನ ಚಕ್ರವರ್ತಿಯನ್ನು ನಾವು ಇಂದು ನೆನೆದು ಆತನ ಉತ್ಸವವನ್ನು ಆಚರಿಸುವುದು ಕರ್ತವ್ಯವಾಗಿದೆ ; ಕರ್ತವ್ಯ ಮಾತ್ರವಲ್ಲ, ನಮಗೆ ಅದು ಶ್ರೇಯಸ್ಸಾಧನೆಯ ಮಾರ್ಗವಾಗಿದೆ. ರನ್ನನ ವೀರವಾಣಿ ನಮ್ಮ ಯುವಜನರ ಅಂತರಂಗದಲ್ಲಿ ಸರ್ವದಾ ಪ್ರತಿಧ್ವನಿಯೇಳಿಸುತ್ತಿರಲಿ. ಕನ್ನಡಿಗರು ರನ್ನನಿಗೆ ತಕ್ಕ ಜನವಾಗಲಿ.

# ‘ ಕಲೆ’ ಎಂದರೆ ಏನು?

1

‘ಕಲೆ’ ಎಂಬುದು ಒಂದು ಹೃದಯಪರಿಪಾಕ ಸಂವಿಧಾನ—ಎಂದರೆ ಮನುಷ್ಯನ ಹೃದಯವೆಂಬ ಅಂಗವನ್ನು ವಿಕಸನಗೊಳಿಸಿ ಶೋಧಿಸಿ ಉನ್ನತಿಗೆ ತರುವ ಉಪಾಯ ಸಮೂಹ.

ಹೃದಯವೆಂಬುದು ನಮ್ಮ ಅಂತರಂಗದೊಳಗಿನ ಒಂದು ಅಂಶ. ಮನುಷ್ಯನ ಅಂಗಾಂಗ ಸಮೂಹವನ್ನು ಅಂತರಂಗವೆಂದೂ ಬಹಿರಂಗವೆಂದೂ ಎರಡು ದೃಶ್ಯ ಭಾಗಗಳಾಗಿ ಸಮಾಲೋಚಿಸುವುದು ಒಂದು ಪ್ರಾಚೀನ ಪದ್ಧತಿ. ಇವರಲ್ಲಿ ಬಹಿರಂಗವು ಕರಚರಣಾದಿ ದೃಶ್ಯವಾದ ಅವಯವಗಳನ್ನೊಳಗೊಂಡದ್ದು.

ಅಂತರಂಗವು ಹೊರಕ್ಕೆ ಕಾಣದೆ ನಮ್ಮ ಒಳಗಡೆ ಇರುವ ಅವಯವ ಸಾಮಗ್ರಿ. ಇದು ನಾಲ್ಕು ಅಂಶಗಳುಳ್ಳದ್ದೆಂದು ಒಂದು ಶಾಸ್ತ್ರ ಸಂಕೇತ: (1) ಮನಸ್ಸು; (2) ಬುದ್ಧಿ; (3) ಚಿತ್ತ; (4) ಅಹಂಕಾರ.

ಇದು ಸರ್ವಸಂಪೂರ್ಣವಾದ ಅಂತಃಕರಣಪಟ್ಟಿಕೆ ಎಂದು ಹೇಳಲಾಗುವುದಿಲ್ಲ. ಸ್ಮೃತಿ ಅಥವಾ ನೆನಪು ಇವರಲ್ಲಿ ಸೇರಿಲ್ಲ. ಅದೂ ಒಂದು ಮಹಾಶಕ್ತಿ ಎಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಹಾಗೆಯೇ ಪ್ರತಿಭೆ ಮೊದಲಾದ ಅಂತಶ್ಶಕ್ತಿಗಳು ಇರುತ್ತವೆ. ಆದರೆ ಇದು ಸದ್ಯಕ್ಕೆ ಬೇರೆ ವಿಷಯ.

ಮೇಲೆ ಹೇಳಿದ ಅಂತಶ್ಶಕ್ತಿಗಳಲ್ಲಿ ನಾಲ್ಕು—ಅಂತಃಕರಣ ಚತುಷ್ಟಯ ಮುಖ್ಯವೆಂದು ಹೇಳಿದೆ.

ಅವುಗಳಲ್ಲಿ —

(1) **ಮನಸ್ಸು:** ಪ್ರಪಂಚದಿಂದ ವಿಷಯಗಳನ್ನು ಸಂಗ್ರಹಿಸುತ್ತದೆ. ವಿಷಯಗ್ರಹಣ ಇದರ ಕಾರ್ಯ.

(2) **ಬುದ್ಧಿ**: ಇದು ಮನಸ್ಸು ಗ್ರಹಿಸಿದ ವಿಷಯಗಳ ಯೋಗ್ಯತಾಯೋಗ್ಯತೆಗಳನ್ನು ಪರೀಕ್ಷಿಸಿ ಗೊತ್ತುಮಾಡುತ್ತದೆ. ಹೀಗೆ ವಿವೇಚನೆ ಅಥವಾ ವಿವೇಕ ಬುದ್ಧಿಯ ಕಾರ್ಯ.

(3) **ಚಿತ್ತ**: ಬುದ್ಧಿಯು ನಿಶ್ಚಯ ಮಾಡಿದ ಮೇಲೆ ಆ ನಿಶ್ಚಯವನ್ನು ಆಚರಣೆಗೆ ತರುವೆನೆಂಬ ದೃಢಸಂಕಲ್ಪ ಚಿತ್ತದ ಕಾರ್ಯ.

(4) **ಅಹಂಕಾರ**: ಅಹಂಕಾರವು ಒಂದು ಕಾರ್ಯದ ಫಲಾಫಲಗಳು ತನಗೆ ಸೇರತಕ್ಕವು, ತನ್ನನ್ನು ಹೊಂದಿದವು ಎಂಬ ಜವಾಬ್ದಾರಿಯ ಹೊರೆ. ಅಹಂಕಾರದ ಕಾರ್ಯವು ಜವಾಬ್ದಾರಿ.

ಈ ನಾಲ್ಕರಲ್ಲಿ ಇಲ್ಲಿ ನಮಗೆ ಅತಿ ಮುಖ್ಯವಾದವು ಮನಸ್ಸು ಬುದ್ಧಿಗಳು.

ಮನಸ್ಸು ಎಂಬುದು ಗ್ರಹಣ ಶಕ್ತಿ ಎಂದು ಹೇಳಿದ್ದಾಯಿತು. ಅದು ವಿಷಯ ಸಂಗ್ರಹ ಮಾಡಿದಾಗ ಹೃದಯವಾಗುತ್ತದೆ. ಸಾಮಾನ್ಯವಾಗಿ ನೀರು ತಿಳಿಯಾಗಿರುತ್ತದೆ. ರುಚಿ ಇರುವುದಿಲ್ಲ. ಆದರೆ ಅದರಲ್ಲಿ ಉಪ್ಪನ್ನೋ ಸಕ್ಕರೆಯನ್ನೋ ಮಣ್ಣನ್ನೋ ಒಂದು ಗಡ್ಡೆ ಹಾಕಿದರೆ ಆ ಪದಾರ್ಥದ ರೂಪ ಬದಲಾಯಿಸುವುದಲ್ಲದೆ ಆ ನೀರೂ ಮಾರ್ಪಡುತ್ತದೆ. ಅದು ತಿಳಿಯಾಗಿರುವುದು ಹೋಗಿ ಕೊಂಚ ಮಂದವಾಗುತ್ತದೆ. ಅದಕ್ಕೆ ರುಚಿ ಬರುತ್ತದೆ. ಹಾಗೆಯೇ ಮನಸ್ಸು ಪ್ರಪಂಚ ವಿಷಯ ಸಂಗ್ರಹ ಮಾಡಿದ ಮೇಲೆ ಅದು ಕೊಂಚ ಭಾರವಾಗುತ್ತದೆ. ಮಂದವಾಗುತ್ತದೆ, ರುಚಿಯುಳ್ಳದ್ದಾಗುತ್ತದೆ. ಆಗ ಹಾಗೆ ಮಾರ್ಪಟ್ಟ ಮನಸ್ಸು ಹೃದಯವೆನ್ನಿಸಿಕೊಳ್ಳುತ್ತದೆ. ಈ ಹೃದಯವೇ ಜೀವದ ಸತ್ಪ್ರವೃತ್ತಿ ದುಷ್ಪ್ರವೃತ್ತಿಗಳ ಮೂಲಸ್ಥಾನ. ಒಟ್ಟಿನಲ್ಲಿ ಮನುಷ್ಯನೆಂದರೆ ಹೃದಯ, ಹೃದಯವೆಂದರೆ ಮನುಷ್ಯ, ಎಂದು ಸೂತ್ರಪ್ರಾಯವಾಗಿ ಹೇಳಬಹುದು. ಹೃದಯದ ಮೂಲಕವೇ ನಮಗೆ ಒಂದು ಕಡೆ ಜಗತ್ತಿಗೂ ಇನ್ನೊಂದು ಕಡೆ ಜಗನ್ಮೂಲವಾದ ಪರಬ್ರಹ್ಮ ವಸ್ತುವಿಗೂ ಸಂಬಂಧ :

> ಅಗ್ನಿರ್ಮೇ ವಾಚಿ ಶ್ರಿತಃ । ವಾಗ್ ಹೃದಯೇ
> ಹೃದಯಂ ಮಯಿ । ಅಹಂ ಅಮೃತೇ । ಅಮೃತಂ ಬ್ರಹ್ಮಣಿ ॥
> ಸೂರ್ಯೋ ಮೇ ಚಕ್ಷುಷಿ ಶ್ರಿತಃ
> ಚಕ್ಷುರ್ಹೃದಯೇ ಹೃದಯಂ ಮಯಿ
> ಅಹಂ ಅಮೃತೇ ಅಮೃತಂ ಬ್ರಹ್ಮಣಿ ॥

ಇಂಥಾದ್ದು ಹೃದಯದ ಮಹತ್ತ್ವ. ಹೃದಯಕ್ಕೆ ವಿಧವಿಧವಾದ ಅನುಭವಗಳನ್ನು ತಂದುಕೊಡಬಲ್ಲ ಮಾನುಷ ಕೃತಿಯೇ ಕಲೆ.

ಈ ಕಲೆಯು ಎಷ್ಟೋ ಮಾರ್ಗಗಳಲ್ಲಿ ಸಾಗಬಹುದು. ಅವುಗಳಲ್ಲಿ ಮುಖ್ಯವಾದವು ಮೂರು :— ಮೂರು ಇಂದ್ರಿಯಗಳಿಗೆ ಸಂಬಂಧಪಟ್ಟವು : ಕಣ್ಣು, ಕಿವಿ, ನಾಲಿಗೆ—ಇವು ಮುಖ್ಯವಾದ ಇಂದ್ರಿಯಗಳು. (1) ಇವುಗಳಲ್ಲಿ ಕಣ್ಣು ಅತ್ಯಂತ

ಮುಖ್ಯವಾದದ್ದು. ಕಣ್ಣಿನ ಮೂಲಕ ಹೃದಯವನ್ನು ಸ್ಪರ್ಶಿಸುವ ಮಾನುಷಕೃತಿಗೆ ಶಿಲ್ಪ, ವರ್ಣಚಿತ್ರ, ನರ್ತನ—ಇವು ಉದಾಹರಣೆಗಳು. (2) ಸಂಗೀತ, ಗಮಕ—ಇವು ಕಿವಿಯ ಮೂಲಕ ಹೃದಯವನ್ನು ಸ್ಪರ್ಶಮಾಡುವ ಮಾನುಷ ಕೃತಿಗೆ ಉದಾಹರಣೆಗಳು. (3) ಘ್ರಾಣೇಂದ್ರಿಯ ರಸನೇಂದ್ರಿಯಗಳ ಮೂಲಕ ಹೃದಯವನ್ನು ಸ್ಪರ್ಶಮಾಡುವ ಕಲೆಗೆ ಪಾಕಶಾಸ್ತ್ರ, ಪರಿಮಳ ಶಾಸ್ತ್ರಗಳು ಉದಾಹರಣೆ.

ಏಕಕಾಲದಲ್ಲಿ ಮೂರು ನಾಲ್ಕು ಐದು ಇಂದ್ರಿಯಗಳನ್ನು ವಶಪಡಿಸಿಕೊಂಡು ತದ್ದ್ವಾರಾ ಹೃದಯವನ್ನು ಸ್ಪರ್ಶಿಸುವ ಮಾನುಷ ಕೃತಿಯೇ ಸಾಹಿತ್ಯ. ಈ ಅಭಿಪ್ರಾಯವನ್ನೇ ವೈಯಾಕರಣಶಿರೋಮಣಿ ಕೇಶಿರಾಜನು ಹೀಗೆ ಹೇಳಿದ್ದಾನೆ :

> ...ಅವಾವಿಂದ್ರಿಯದ ವಿಷಯಮಂಶ್ರೋತ್ರದೊಳು
> ದ್ಭಾವಿಪ...

ಈ ಕಾರಣದಿಂದಲೇ ಪದ್ಯ ಗದ್ಯ ರೂಪದ ಕಾವ್ಯಕ್ಕೆ ಸಾಹಿತ್ಯವೆಂಬ ಹೆಸರು ಸಾರ್ಥಕವಾಗುತ್ತದೆ. ಅದರಲ್ಲಿ ಸಮಸ್ತ ಇಂದ್ರಿಯಗಳ ಸಹಿತತ್ವವಿರುತ್ತದೆ : ಸಮಸ್ತ ಅನುಭವಗಳೂ ಒಟ್ಟುಗೂಡಿರುತ್ತವೆ. ಶಬ್ದಗಳ ಅರ್ಥಪುಷ್ಟಿ, ಭಾವಪುಷ್ಟಿ, ಅವುಗಳ ಯೋಜನೆಯಲ್ಲಿ ಛಂದಸ್ಸೆಂಬ ಒಂದು ಕ್ರಮ, ಗುರುಲಘುವಿನ್ಯಾಸ, ಪ್ರಾಸಾನುಪ್ರಾಸಗಳು, ಪದವೈವಿಧ್ಯ—ಇವೆಲ್ಲವೂ ಸಹಿತವಾಗಿ ಸೇರಿ ಹೃದಯದ ಮೇಲೆ ಕೆಲಸಮಾಡುತ್ತವೆ. ಅದರಿಂದ ಮನಸ್ಸು ವಿಕಸಿತವಾಗಿ ಅಲ್ಲಿ ಹೊಸ ಭಾವನೆಗಳು, ಹೊಸ ರಾಗರಂಜನೆಗಳು ಉಂಟಾಗುತ್ತವೆ. ಇದೇ ಸಾಹಿತ್ಯಕಾರ್ಯ.

ಒಂದಾನೊಂದು ಮಹೋದ್ದೇಶದಿಂದ ಒಂದಾನೊಂದು ನಿರ್ಮಲವಾದ ತಾತ್ಪರ್ಯದಿಂದ ಮನಸ್ಸಿನ ಮೇಲೆ ಹೃದಯರಂಗದಲ್ಲಿ ಕಾರ್ಯಮಾಡಿ ಪರಿಣಾಮ ಮಾಡಬಲ್ಲ ವಾಕ್ಪ್ರಯತ್ನವೇ, ಶಬ್ದಪ್ರಬಂಧವೇ ಸಾಹಿತ್ಯ.

## 2

ಕಲೆ ಎಂದರೆ ಹೃದಯಪರಿಪಾಕ.

ಕಲಾಕೃತಿಯು ಹೃದಯವನ್ನು ಹಿಗ್ಗಿಸುತ್ತದೆ, ಕುಗ್ಗಿಸುತ್ತದೆ, ಮತ್ತು ಕರಗಿಸುತ್ತದೆ, ಹರಳುಗಟ್ಟಿಸುತ್ತದೆ—ಹೀಗೆ ನಾನಾ ವಿಧವಾಗಿ ಸಂಸ್ಕಾರಪಡಿಸಿ ಒಂದು ಹದಕ್ಕೆ ತರುತ್ತದೆ. ಈ ಹದವೇ ಪರಿಪಾಕವೆಂಬುದು.

ಕಲೆಯು ಹೃದಯವನ್ನು ಮುಟ್ಟಿ ಸಂಸ್ಕಾರಮಾಡುವುದು ಮುಖ್ಯವಿಷಯ. ಆದರೆ ಅದು ಹೃದಯವನ್ನು ಮುಟ್ಟುವುದು ನಮ್ಮ ಪಂಚೇಂದ್ರಿಯಗಳ ಮೂಲಕ. ಅದು ಒಂದು ಇಂದ್ರಿಯವನ್ನಾದರೂ ಉಪಯೋಗಿಸಿಕೊಳ್ಳಬಹುದು, ಎರಡು ಮೂರನ್ನಾದರೂ ಉಪಯೋಗಿಸಿಕೊಳ್ಳಬಹುದು. ಎಲ್ಲ ಕಲೆಯ ಪ್ರವೇಶ ಇಂದ್ರಿಯಗಳ ಮೂಲಕ.

ಹೀಗಿರುವುದರಿಂದ ಕಲೆಯನ್ನು ಲಲಿತಕಲೆಯೆಂದು ಕರೆಯುವುದು ವಾಡಿಕೆ.

ಇಂದ್ರಿಯಗಳು ಐದು : ಶಬ್ದ, ಸ್ಪರ್ಶ, ರೂಪ, ರಸ, ಗಂಧ—ಇವುಗಳಿಗೆ ಸಂಬಂಧಪಟ್ಟ ಕಲೆಗಳನ್ನು ನೋಡೋಣ.

(1) **ಶಬ್ದ ಅಥವಾ ಕಿವಿ :** ಸಂಗೀತ, ಛಂದೋಬದ್ಧವಾದ ವಾಕ್ಯ, ಒಳ್ಳೆಯ ಸಂಭಾಷಣೆ, ಕಲಕಲಧ್ವನಿ ಇತ್ಯಾದಿ. ಇವು ಕಲೆಯ ಒಂದು ರೂಪ : ಇವುಗಳಲ್ಲಿ ಮುಖ್ಯವಾದದ್ದು ಸಂಗೀತ ಕಲೆ : ಶ್ರೋತ್ರದ ಮೂಲಕ ಹೃದಯವನ್ನು ಹಿಡಿಯತಕ್ಕದ್ದು.

(2) **ಸ್ಪರ್ಶ :** ಮೈಗೆ ಸೋಕತಕ್ಕದ್ದು. ಕಲೆಯಲ್ಲಿ ಇದು ಅಷ್ಟು ಪ್ರಶಸ್ತವಾಗಿಲ್ಲ. ಸ್ಯಾಟಿನ್ ಎಂಬ ರೇಷ್ಮೆಯ ಬಟ್ಟೆ, ಮಗುಟ, ಪೀತಾಂಬರ—ಇವು ಸ್ಪರ್ಶೇಂದ್ರಿಯ ಸಂಬಂಧಿಯಾದ ಕಲೆ.

(3) **ರೂಪ :** ಇದೇ ಕಲೆಯಲ್ಲಿ ಮುಖ್ಯವಾದ ಭಾಗ. ಇದು ಎರಡು ಮೂರು ಬಗೆಗಳಲ್ಲಿರುತ್ತದೆನ್ನಬಹುದು : ಅಭಿನಯ, ವರ್ಣಚಿತ್ರಣ, ಶಿಲ್ಪ, ಶಿಲಾಶಿಲ್ಪ, ದಾರುಶಿಲ್ಪ ಇತ್ಯಾದಿ.

(4) **ರಸ :** ರಸನೇಂದ್ರಿಯ ನಾಲಗೆ : ಇದೂ ಕಲೆಗಳಲ್ಲಿ ಅಷ್ಟು ಪ್ರಶಸ್ತವಲ್ಲ. ಆದರೆ ಇದೂ ಒಂದು ಕಲೆಯೇ. ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ಮಾಡುವುದು ಒಂದು ಕಲಾಶಕ್ತಿಯೇ. ಅದರಲ್ಲಿ ಹದ ತಿಳಿಯುವುದು ಬಹುಮುಖ್ಯ.

(5) **ಗಂಧ :** ಇದು ಘ್ರಾಣೇಂದ್ರಿಯವಾದ ಮೂಗಿಗೆ. ಇದಕ್ಕೂ ಕಲೆಯೆಂಬ ಗಣನೆ ಬಂದಿಲ್ಲ. ಆದರೂ ಬಗೆಬಗೆಯ ಪರಿಮಳ ದ್ರವ್ಯಗಳನ್ನೂ ಭೋಜ್ಯದ್ರವ್ಯಗಳನ್ನೂ ಕಲಸುವುದರಲ್ಲಿ ಒಂದು ನೈಪುಣಿ ಇರುತ್ತದೆ.

ಹೀಗೆ ನಮ್ಮ ಇಂದ್ರಿಯ ಇಂದ್ರಿಯಕ್ಕೂ ಸಂಬಂಧಪಟ್ಟಂತೆ ಕಲೆಗಳಿರುತ್ತವೆ. ಆದರೆ ವಾಡಿಕೆಯಲ್ಲಿ ಕಣ್ಣು ಕಿವಿಗಳಿಗೆ ಸಂಬಂಧಪಟ್ಟ ಹೃದಯಪಾಕವಿಧಾನಗಳಿಗೆ ಮಾತ್ರ ಕಲೆಯೆಂಬ ಹೆಸರು ಪ್ರಚಾರದಲ್ಲಿದೆ.

ಕಣ್ಣು ಕಿವಿಗಳ ಮೂಲಕ ಆಗುವ ಪರಿಣಾಮವು ಮಿಕ್ಕವುಗಳಿಗಿಂತ ಹೆಚ್ಚು ಕಾಲ ನಿಲ್ಲತಕ್ಕವು. ಒಂದು ಹಾಡನ್ನು ಕೇಳಿದಾಗಲೋ ಒಂದು ರೂಪವನ್ನು ನೋಡಿದಾಗಲೋ ಮನಸ್ಸು ಕೆರಳಿ ಸಂತೋಷ, ವಿಷಾದ, ಆಶೆ, ನಿರಾಶೆ ಮೊದಲಾದ ಭಾವಗಳನ್ನು ತಾಳುತ್ತದೆ. ಹೃದಯವಾದರೋ ಮನಸ್ಸಿನ ಕೇಂದ್ರಭಾಗ. ಭಾವವಿಭಾವೋತ್ಪಾದಕವಾದ ಮನಃಕಾರ್ಯ ನಡೆಯುವುದು ಹೃದಯದಲ್ಲಿ : ಹೃದಯವು ಮನಸ್ಸಿನ ಕಾರ್ಯರಂಗ. ಹೀಗೆ ಹೃದಯದ ಮೂಲಕ ಹೊರಜಗತ್ತಿಗೂ ಒಳಗಿನ

ಅಂತರಾತ್ಮಕ್ಕೂ ಸಂಬಂಧ. ಹೃದಯವೇ ಎರಡು ಪ್ರಪಂಚಗಳಿಗೂ ನಡುವಣ ಸೇತು. ಅಂತರಾತ್ಮವೂ ಬಹಿಃಪ್ರಪಂಚದ ಸಾರಭಾಗವೂ ಹೃದಯ ಕ್ಷೇತ್ರದಲ್ಲಿ ಸಂಯೋಗಗೊಂಡಾಗ ಉತ್ಪನ್ನವಾಗುವ ಸುಖಾನುಭವವೇ ರಸ. ಆದದ್ದರಿಂದಲೆ ಉತ್ತಮ ಕಲೆಯನ್ನು ಲಲಿತ ಕಲೆ ಎನ್ನುವುದು. ಪ್ರಪಂಚವಸ್ತುವಿನ ಸಾರವೂ ಅಂತರಾತ್ಮದ ಚಿದಂಶವೂ ಸಂಧಿಯಾದಾಗ ಹುಟ್ಟುವುದೇ ರಸ.

ರಸೋ ವೈ ಸಃ।
ರಸಗ್ಂ ಹ್ಯೇವಾಯಂ ಲಬ್ಧ್ವಾऽऽನಂದೀ ಭವತಿ॥

ಅರಿಶಿನದ ಗಂಧವೂ ಸುಣ್ಣದ ತಿಳಿಯೂ ಬೆರೆತಾಗ ಅಕ್ಷತೆ.

# ಸಂಸ್ಕೃತಿ *

ಸಂಸ್ಕೃತಿಯೆಂದರೆ ಮನುಷ್ಯರ ಅನ್ಯೋನ್ಯ ಸಂಬಂಧಗಳಲ್ಲಿ ನಯವಿನಯಗಳ ಸೊಬಗು.—ಸ್ವಗುಣ ಪರಗುಣಗಳ ಸಂಮಿಶ್ರಿತ ಕಾಂತಿ. ಈ ಸಂಸ್ಕೃತಿ ಮೂಲದಲ್ಲಿ ನಮ್ಮ ಅಂತರಂಗ ಜೀವನಕ್ಕೆ ಸಂಬಂಧಪಟ್ಟದ್ದು. ಅದು ನಮ್ಮ ಒಳಸಂಪತ್ತು. ಅದರ ಜಾಗ ಮನಸ್ಸು ಮತ್ತು ಹೃದಯ. ಅದರಿಂದ ಬೇರೆಯಾದದ್ದು ನಮ್ಮ ಬಹಿರಂಗ ಜೀವನ. ಇದರವು ಮನೆ, ವಾಹನ, ಒಡವೆ, ಹಣ ಮೊದಲಾದ ಘನ ವಸ್ತುಗಳು. ಕಳೆದ ಐವತ್ತು ವರ್ಷಗಳಲ್ಲಿ ಈ ಹೊರ ಸೌಕರ್ಯಗಳ ವಿಚಾರದಲ್ಲಿ ನಮ್ಮ ದೇಶ ಬಹುಮಟ್ಟಿಗೆ ಮುಂದುವರಿದಿದೆ. ಹಿಂದೆ ಮೋಟಾರುಗಳೂ ವಾಯು ವಿಮಾನಗಳೂ ಈಗಿನಂತೆ ಇರಲಿಲ್ಲ. ಈಗಿನಷ್ಟು ವಿದ್ಯಾಶಾಲೆಗಳೂ ವೈದ್ಯಶಾಲೆಗಳೂ ರೈಲುಗಳೂ ಬ್ಯಾಂಕುಗಳೂ ಕಾರ್ಖಾನೆಗಳೂ ವ್ಯಾಪಾರ ವಿಸ್ತಾರವೂ ಆಗ ಇರಲಿಲ್ಲ ಈ ಬಾಹ್ಯ ಸಂಪತ್ತಿನಲ್ಲಿ ನಾವು ಅಭಿವೃದ್ಧಿ ಕಂಡಿದ್ದೇವೆ. ಆದರೆ ಅಂತರಂಗ ಸಂಪತ್ತಿನಲ್ಲಿ ಹಾಗೆ ಬೆಳೆದಿಲ್ಲ. ಇನ್ನೂ ಬಡವಾಗಿದ್ದೇವೆ ಎಂದೇ ನನ್ನ ಎಣಿಕೆ. ಈ ಬಡತನವನ್ನು ಐದಾರು ಪ್ರಸ್ತಾವಗಳ ಮೂಲಕ ನಿದರ್ಶನಪಡಿಸಬೇಕೆಂಬುದು ನನ್ನ ಈಗಿನ ಉದ್ದೇಶ.

ಮೊದಲು, ಮನುಷ್ಯಸ್ಥಾನಕ್ಕೆ ಯಂತ್ರ ಬರುತ್ತಿದೆ. ಹೃದಯದ ಕಾರ್ಯಗಳನ್ನು ಯಂತ್ರಗಳ ಮೂಲಕ ನಿರ್ವಾಹ ಮಾಡುವ ಅಭ್ಯಾಸವನ್ನು ಬೆಳಸಿಕೊಳ್ಳುತ್ತಿದ್ದೇವೆ. ಐವತ್ತು ವರ್ಷಗಳ ಹಿಂದೆ ಮದುವೆಗೆ ಕರೆಯೋಲೆ ಕೈಬರಹದಲ್ಲಿರುತ್ತಿತ್ತು, ಈಗ ಅಚ್ಚಿನಲ್ಲಿದೆ. ಕೈಯಿಂದ ಬರೆಯುವಾಗ ಮನಸ್ಸು ಉದ್ದೇಶದಲ್ಲಿರುವಾತನ ಯೋಗ್ಯತೆಯನ್ನು, ಆತನಿಗೆ ಸಲ್ಲಬೇಕಾದ ಪ್ರೀತಿ ಗೌರವಗಳನ್ನು, ನೆನೆದುಕೊಳ್ಳುತ್ತಿತ್ತು. ಅದು ಹೃದಯಸ್ಪರ್ಶ, ಇಂಗ್ಲಿಷಿನಲ್ಲಿ ಹೇಳುವಂತೆ personal touch. ಸಾಕ್ಷಾತ್ತಿನ ಕಲ್ಪನೆ. ಈಗ ಅದು ಅಪ್ಪಾಗಿರದು : ಅಚ್ಚಿನ ಅಹ್ವಾನ ನ್ಯೂಸ್ ಪೇಪರಿನಂತೆ, ಸಾವಿರ ಮಂದಿಗೆ ಹೋಗುತ್ತದೆ. ಅದಕ್ಕೆ ತಾರತಮ್ಯ ವಿಚಾರಬೇಕಿಲ್ಲ.

---

* 10–5–1957 ರಂದು ಬೆಂಗಳೂರು ಆಕಾಶವಾಣಿಯಿಂದ ಪ್ರಸಾರವಾದ ಭಾಷಣ.

ಹಿಂದೆ ಮನೆಗೆ ಇಷ್ಟರು ಬಂದರೆ ಅವರಿಗೆ ಫಲಾಹಾರಕ್ಕಾಗಿ ಮನೆಯಲ್ಲಿ ಮಾಡಿದ್ದ ತಿಂಡಿಯನ್ನು ಮುಂದಿರಿಸುತ್ತಿದ್ದರು. ಈಗ ಹೋಟಲ್ಲಿನ ಸಾಮಾನನ್ನು ತರಿಸುತ್ತೇವೆ, ಅಥವಾ ಹೋಟಲಿಗೇ ಅವರನ್ನು ಸಾಗಿಸಿಕೊಂಡು ಹೋಗುತ್ತೇವೆ. ಹೋಟಲು ತಿಂಡಿ ಹೆಚ್ಚು ರುಚಿಯಿರಬಹುದು, ಆದರೆ ಮನೆಯ ಜನದ ಪ್ರೀತಿ ವಿಶ್ವಾಸ ಅದರಲ್ಲಿರುತ್ತದೆಯೆ ?

ಹಿಂದೆ ಮನೆಯಲ್ಲಿ ಒಬ್ಬ ಬಸುರಿ ಹೆಂಗಸಿದ್ದಾಗ ಆಕೆಗೆಂದು, ಕೈಯಿಂದ ಚಕ್ಕುಲಿ ಸುತ್ತಿ, ಕರಿಯುತ್ತಿದ್ದರು. ಈಗ ಅಂಥ ತಿರುತಿರುಪಣೆಯ ಚಕ್ಕುಲಿ ಕಣ್ಣಿಗೆ ಅಪರೂಪ ವಾಗಿದೆ. ಆಗ ಬೆರಳು ಮಾಡುತ್ತಿದ್ದ ಕೆಲಸವನ್ನು ಈಗ ಒರಳು ಮಾಡುತ್ತದೆ. ಬೆರಳಿನ ಹಿಂದೆ ಕರುಳಿರುತ್ತಿತ್ತು. ಕರುಳಿಗೂ ಒರಳಿಗೂ ಅಷ್ಟು ಹತ್ತಿರದ ಸಂಬಂಧವಿಲ್ಲ.

ಆಗ ಮದುವಣಿಗರು ಹಸೆಯ ಮೇಲೆ ಕುಳಿತರೆ ಹೆಣ್ಣುಮಕ್ಕಳು ಕೊರಳ ಜಂಬದಿಂದಲೂ ಮುದುಕಿಯರು ಮಮತೆಯ ಉತ್ಸಾಹದಿಂದಲೂ ಹಾಡು ಹೇಳು ತ್ತಿದ್ದರು. ಈಗಿನದು ಗ್ರಾಮಾಫೋನ್ ಸಂಗೀತ.

ಆಗ ಶ್ರೀಗಂಧ ತೆಯ್ದು ಕೇಸರಿ ಪಚ್ಚಕರ್ಪೂರ ಬೆರಸಿದ ಪರಿಮಳ; ಈಗ "ಸೆಂಟ್", ಸ್ವಾಭಾವಿಕದ ಸ್ಥಾನಕ್ಕೆ ಕೃತಕ ಬರುತ್ತಿದೆ.

ಇನ್ನೊಂದು ವಿಷಯಕ್ಕೆ ಹೋಗೋಣ. ಕಳೆದ ಐವತ್ತು ವರ್ಷಗಳಲ್ಲಿ ನಮ್ಮ ಜನದಲ್ಲಿ ಕೆಲಸಗಾರತನದ ಹೆಮ್ಮೆ ಕಳೆದುಹೋಗಿದೆ. ಹಿಂದೆ ಪ್ರತಿಯೊಬ್ಬರಿಗೂ ತಮ್ಮ ತಮ್ಮ ದಿನದಿನದ ಕೆಲಸದ ವಿಷಯದಲ್ಲಿ ಗೌರವವಿರುತ್ತಿತ್ತು—ಗಂಡಸಿಗೆ ತನ್ನ ಕಸಬಿನ ವಿಷಯದಲ್ಲಿ, ಹೆಂಗಸಿಗೆ ತನ್ನ ಅಡಿಗೆ ಗೃಹಕೃತ್ಯದಲ್ಲಿ. ರೈತ ತನ್ನ ನೇಗಿಲು ದನ ಉಳುಮೆಗಳನ್ನು ಕುರಿತು ಜಂಬವಿಟ್ಟುಕೊಂಡಿದ್ದ. ಬಡಗಿಯೂ ಗಾರೆಕಾರನೂ ತಮ್ಮ ಕೈಚಳಕಕ್ಕಾಗಿ ಹೆಮ್ಮೆಪಡುತ್ತಿದ್ದರು. ಕರಣಿಕನು ತನ್ನ ಅಕ್ಷರದ ಸೊಗಸಿಗಾಗಿ, ಪುರೋಹಿತನು ತನ್ನ ಮಂತ್ರೋಚ್ಚಾರಣೆಗಾಗಿ, ಉಪಾಧ್ಯಾಯನು ತನ್ನ ಪಾಠಶೀಲತೆ ಗಾಗಿ, ಕುಂಬಾರನು ತನ್ನ ಕೈಯ ನವುರಿಗಾಗಿ ಹಿಗ್ಗುತ್ತಿದ್ದ. ಕೆಲಸ ಕೂಲಿಗಾಗಿ ಎಂಬ ಭಾವನೆ ಆಗ ಅತಿಯಾಗಿರಲಿಲ್ಲ. ಸಂಪಾದನೆ ಅವರಿಗೆ ಬೇಕಾಗಿರಲಿಲ್ಲವೆಂದಲ್ಲ. ಅವರೂ ಬಡವರೇ. ಆದರೆ ತಾಟಾಪೋಟಿಯ ಕೆಲಸವನ್ನು ಅವರು ಅಭ್ಯಾಸ ಮಾಡಿಕೊಂಡಿರಲಿಲ್ಲ. ಅಡಕಸಬಿ ಬದುಕಿಗೆ ಅವರ ಮನಸ್ಸೊಪ್ಪದು. ದುಡಿಮೆ ಯಿಲ್ಲದ ಅನ್ನ ಮೈಹತ್ತದೆಂದು ಅಂದಿನವರ ನಂಬಿಕೆ. ಪ್ರಕೃತಿ ಹೇಗೆ ಕೆಲಸ ಮಾಡು ತ್ತದೆಯೋ ಹಾಗೆ ತಾವೂ ಕೈಗೆ ಬಂದ ಕೆಲಸವನ್ನು ಸಾಧ್ಯವಾದಷ್ಟು ಸೊಗಸಾಗಿ ಮಾಡಬೇಕೆಂಬುದು ಅವರ ನಿಯಮ. ಅವಸರವಸರವಾಗಿ, ಹೇಗೆಂದರೆ ಹಾಗೆ, ಕೆಲಸದ ನಟನೆ ಮಾಡಿ, ಆದಷ್ಟು ಕಡಮೆ ದುಡಿತಕ್ಕೆ ಆದಷ್ಟು ಹೆಚ್ಚು ಕೂಲಿ ಗಿಟ್ಟಿಸಿ ಕೊಳ್ಳುವ ಯೋಚನೆ ಆಗ ಬಂದಿರಲಿಲ್ಲ. ಈಚೆಗೆ ಹೊಸ ಹೊಸ ವ್ಯಾಪಾರಗಳೂ

ಹೊಸ ಹೊಸ ಕಸಬುಗಳೂ ಬಂದು ಉಪಾಯ ಜೀವನದ ಆಶೆ ಹರಡುತ್ತಿದೆ. ಪಟ್ಟಣದ ರೀತಿಗಳೂ ಡಾಂಭಿಕತೆಯೂ ಪ್ರಕಟನ ಸೌಲಭ್ಯವೂ ಪ್ರಾಮಾಣಿಕತೆಗೆ ಬಲ ತಪ್ಪಿಸಿ ಚಮತ್ಕಾರ ಚತುರೋಪಾಯಗಳಿಗೆ ಪ್ರೋತ್ಸಾಹ ಕೊಡುತ್ತಿವೆ. ಹೀಗೆ ಜನದ ಕಾರ್ಯಾರ್ಹತೆ ತಗ್ಗುತ್ತಿದೆ. ಸಮಾಜಕ್ಕೆ ಕೆಲಸಗಾರತನದ ಹೆಮ್ಮೆ ನಷ್ಟ ವಾಗುವುದಕ್ಕಿಂತ ದೊಡ್ಡ ನಷ್ಟ ಇರಲಾರದು.

ಈಗ ಮತ್ತೊಂದು ವಿಚಾರಕ್ಕೆ ಹೋಗೋಣ. ಇದು ಗೃಹಚ್ಛಿದ್ರದ್ದು. ಐವತ್ತು ವರ್ಷಗಳ ಹಿಂದೆ ಮೂವರು ನಾಲ್ವರು ಅಣ್ಣತಮ್ಮಂದಿರುಗಳೂ, ಅವರ ಮಕ್ಕಳು ಮೊಮ್ಮಕ್ಕಳೂ, ಅವರ ಅಕ್ಕತಂಗಿಯರಲ್ಲಿಯೂ ಅತ್ತಿಗೆ ನಾದಿನಿಯರಲ್ಲಿಯೂ ಮನೆತಪ್ಪಿದ್ದವರೂ, ಅವರ ಮಕ್ಕಳೂ ಸೇರಿ ಇಪ್ಪತ್ತು–ಇಪತ್ತೈದು ಮಂದಿ ಒಟ್ಟಿಗಿದ್ದ ಕುಟುಂಬಗಳು ಅಪರೂಪವಾಗಿರಲಿಲ್ಲ. ನೂರಕ್ಕಿಂತ ಹೆಚ್ಚು ಮಂದಿ ಇದ್ದ ಕುಟುಂಬಗಳನ್ನು ನಾನು ನೋಡಿದ್ದೇನೆ. ಆ ಸಂಯುಕ್ತಸಂಸಾರಗಳು ಒಬ್ಬ ಯಜಮಾನನ ಆಳಿಕೆಯಲ್ಲಿ ಬದುಕುತ್ತಿದ್ದವು. ಆಗ ಕಷ್ಟಗಳಿರಲಿಲ್ಲವೆಂದಲ್ಲ. ಈಗ ಅದೇನೂ ತಪ್ಪಿಲ್ಲ. ಆದರೆ ಈಗಣ ಕಷ್ಟದ ರೀತಿ ಬೇರೆ, ಆಗಣದರ ರೀತಿ ಬೇರೆ. ತಂಟೆ ತಕರಾರುಗಳ ಬೇರುಗಳು ಮನುಷ್ಯ ಸ್ವಭಾವದಲ್ಲಿ ಯಾವಾಗಲೂ ಇದ್ದೇ ಇರುತ್ತವೆ. ಒಟ್ಟು ಕುಟುಂಬದಲ್ಲಿ ಅವುಗಳನ್ನು ಸರಿಪಡಿಸುವ ಕ್ರಮವೂ ಒಂದಿತ್ತು. ಒಟ್ಟಿನಲ್ಲಿ ಅದು ಐಕಮತ್ಯಸಾಧನೆಯ ಕ್ರಮ. ಅದು ಒಂದು ತೆರದ ಡೆಮಾಕ್ರಸಿ —ಜನರಾಜ್ಯ, ಒಟ್ಟುಬದುಕು. ಈಗ ಆ ಸಂಸೃಷ್ಟಿಭಾವನೆ ಕರಗಿಹೋಗಿ, ಪ್ರತ್ಯೇಕತಾ ಭಾವನೆ ಬಲಪಡುತ್ತಿದೆ. ಅವನವನ ಪಾಡು ಅವನವನದು. ಗಟ್ಟಿಗ ಅಟ್ಟಕ್ಕೆ, ಹಿಂದಿನವ ಹಳ್ಳಕ್ಕೆ. ಹೀಗೆ ಒಂದಾಗಿದ್ದ ಮನೆ ಎರಡಾಗಿ, ನಾಲ್ಕಾಗಿ ಒಡೆಯುತ್ತಿದೆ.

ಒಂದು ಕುಟುಂಬದಲ್ಲಿಯೇ ದ್ವಿಮುಖ ಸರಕಾರ. ಈಚೀಚೆಗೆ ಬರುತ್ತಿರುವ ಮದುವೆಯ ಆಹ್ವಾನಪತ್ರಿಕೆಗಳಲ್ಲಿ ಇದು ಚೆನ್ನಾಗಿ ಕಾಣಬರುತ್ತದೆ. ಇಪ್ಪತ್ತೈದು ವರ್ಷಗಳ ಹಿಂದೆ ನಮ್ಮ ಮನೆಯ ಒಂದು ಶುಭ ಸಂದರ್ಭದಲ್ಲಿ ಆಹ್ವಾನ ಪತ್ರಿಕೆ ಯನ್ನು ನಮ್ಮ ತಂದೆಯ ಹೆಸರಿನಲ್ಲಿ ಕಳಿಸಿದ್ದಾಗಿತ್ತು. ಅದರಲ್ಲಿ ನನ್ನ ಹೆಸರೂ ಇರಬೇಕಾಗಿದ್ದ ಕಾರಣ, ನಮ್ಮ ತಂದೆಯ ಪರಿಚಯವಿಲ್ಲದಿದ್ದ ನನ್ನ ಸ್ನೇಹಿತರೂ ಬಂದರು, ಅವರಲ್ಲೊಬ್ಬರು ನಿಜವಾಗಿ ದೊಡ್ಡವರು, ವಯಸ್ಸಾದವರು, ಮೋಟಾರಿನಲ್ಲಿ ಬಂದು ಇಳಿದರು. ನಾನು ಅವರನ್ನು ಸ್ವಾಗತಿಸಿದೆ. ಅವರು "ಕಾರಿನಲ್ಲಿ ನೋಡಿ, ಅಲ್ಲೊಬ್ಬರಿದ್ದಾರೆ." ಎಂದರು. ಕಾರಿನಲ್ಲಿದ್ದವರು ಅವರ ಭಾರ್ಯೆ. ಆಕೆಗೂ ನನ್ನ ಪರಿಚಯವಿತ್ತು. ನಾನು ಆಕೆಯನ್ನು "ದಯಮಾಡಬೇಕು" ಎಂದು ಕರೆದೆ. ಆಕೆ ನಕ್ಕು, "ಹೆಂಗಸರು ಕರೆದಿಲ್ಲವಲ್ಲ!" ಎಂದರು. ನಾನು ಹೇಳಿದೆ: "ನಮ್ಮ ತಂದೆಯಿರುವ ಕಡೆ ನಮ್ಮ ತಾಯಿ. ಅವಳಿರುವ ಕಡೆ ನಾವೆಲ್ಲ, ಇರತಕ್ಕವರು. ನಮ್ಮ ತಂದೆ ನಮ್ಮ ಒಟ್ಟು ಕುಟುಂಬದ ಪರವಾಗಿ ನಿಮ್ಮ ಒಟ್ಟು ಕುಟುಂಬವನ್ನು ಕರೆದಿದ್ದಾರೆ." ಹೀಗೆ ನಾನು ಹೇಳಿದ್ದನ್ನು ಕೇಳಿ, ಆಕೆ—"ನೀವು ಪೂರ್ವಕಾಲದವರು" ಎನ್ನುತ್ತ ಬಂದು ಆಶೀರ್ವದಿಸಿ ತೆರಳಿದರು. ಈಗ ಗಂಡನ ಆಹ್ವಾನವೇ ಬೇರೆ. ಹೆಂಡತಿಯದೇ ಬೇರೆ.

ಈ ಹೊಸ ಮರ್ಯಾದೆ ಯೂರೋಪಿಯನ್ನರ ಅನುಕರಣ. ಆದರಲ್ಲಿ ಗಂಡಹೆಂಡಿರ ಏಕೀಭಾವದ ಸೂಚನೆಯಿಲ್ಲ, ಭಿನ್ನವ್ಯಕ್ತಿತ್ವದ ಸೂಚನೆಯುಂಟು. ಅದು ಸ್ತ್ರೀ ಪುರುಷರ ಸಮಾನತ್ವವಂತೆ ! ಹಾಗಾದರೆ ಗಂಡನ ಕುಲಗೋತ್ರಗಳನ್ನು ಹೆಂಡತಿಯೇಕೆ ಸ್ವೀಕರಿಸಬೇಕು ? ಅವನ ಹೆಸರಿನಲ್ಲಿ ಆಕೆಯೇಕೆ ಅಡಗಿಕೊಳ್ಳಬೇಕು ? ಶ್ರೀಮತಿ ಮತ್ತು ಶ್ರೀ ರಾಮಣ್ಣ (Mrs. & Mr. Ramanna) ಎಂಬುದಕ್ಕೆ ಬದಲಾಗಿ ಶ್ರೀಮತಿ ಮತ್ತು ಶ್ರೀ ಸೀತಮ್ಮ (Mr. & Mrs. Sitamma) ಎಂದೇ ಇಬ್ಬರೂ ಕರೆದುಕೊಳ್ಳಬಹುದಲ್ಲ ! ದಂಪತಿ ಎಂಬುದು ಒಂದು. — ಗಂಡನಲ್ಲಿ ಹೆಂಡತಿ ಒಂದಾಗಿದ್ದಾಳೆ— ಎಂಬುದು ಹಿಂದಿನ ಭಾವನೆ.

ಇನ್ನೊಂದು ವಿಚಾರ ನೋಡೋಣ. ಒಳ್ಳೆಯ ಸಮಾಜ ವ್ಯವಸ್ಥೆಯಲ್ಲಿ ವ್ಯಕ್ತಿಸಂಯಮ, ವ್ಯಕ್ತಿವಿಕಾಸ— ಈ ಎರಡು ಬಗೆಯ ಸಂಸ್ಕಾರಗಳಿಗೂ ಅವಕಾಶ ವಿರುತ್ತದೆ. ದಂಪತಿಗಳ ಜೀವನದಲ್ಲಿ ಗಂಡನು ದ್ರವ್ಯಾರ್ಜನೆಯ ವ್ಯವಹಾರದಲ್ಲಿ ತನ್ನ ವ್ಯಕ್ತಿತ್ವವನ್ನು ಬೆಳಸಿಕೊಳ್ಳುತ್ತಾನೆ ; ಹೆಂಡತಿ ಪಾಕ ಪರಿಟವಣೆಗಳಲ್ಲಿ, ಒಪ್ಪ ಓರಣಗಳಲ್ಲಿ ತನ್ನ ವ್ಯಕ್ತಿತ್ವವನ್ನು ಬೆಳಗುತ್ತಾಳೆ ; ಮಕ್ಕಳ ಲಾಲನೆ ಪಾಲನೆಗಳಲ್ಲಿಯೂ, ಬಂಧುಗಳ ಉಪಚಾರದಲ್ಲಿಯೂ ಇಬ್ಬರೂ ತಂತಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನು ವಿಲೀನ ವಾಗಿಸಿ ಏಕೀಭವಿಸುತ್ತಾರೆ. ಹೀಗೆ ಸಂಸೃಷ್ಟಿಯ ಶಿಕ್ಷಣದ ಜೊತೆಗೆ ವೈಶಿಷ್ಟ್ಯದ ಶಿಕ್ಷಣ ಸೇರಿಕೊಂಡಿರಬೇಕು. ಎಲ್ಲ ದೈವಭಕ್ತರಿಗೂ ಗುಡಿ ಒಂದು : ನಮಸ್ಕಾರ ಗಳು ಒಬ್ಬೊಬ್ಬರದೂ ಬೇರೆ ಬೇರೆ. ಈ ಪ್ರತ್ಯೇಕ ಧರ್ಮಾಭ್ಯಾಸಕ್ಕೆ ಹಿಂದೆ ಇದ್ದಷ್ಟು ಅವಕಾಶ ಈಗ ಇಲ್ಲ. ಈಗಣ ಸಂದರ್ಭ ಸರ್ವಸಾಂಕರ್ಯದ್ದು ; "ಸಬ್ ಏಕ್ ಲುಂಡ." ಸಮುದಾಯವೆಂಬ ಸಮುದ್ರದ ನೀರಿನಲ್ಲಿ ಈ ಹೊತ್ತು ಎಲ್ಲ ವ್ಯಕ್ತಿ ರಸಗಳೂ ಕರಗಿ ನೀರುಚಿಗಳಾಗುತ್ತಿವೆ. ಬಹು ಮಂದಿಯ ಮಾತು ಅವಕ್ಕೆ ಸಲ್ಲದ ಕಡೆಗಳಲ್ಲಿಯೂ ಅಧಿಕಾರ ಮಾಡುತ್ತದೆ. ಏನು ಭಕ್ಷ್ಯ ಮಾಡಿಸೋಣ ? ವೋಟಿಗೆ ಹಾಕಿ. ಯಾವ ರಾಗ ಹಾಡಿಸೋಣ ? ವೋಟಿಗೆ ಹಾಕಿ. ಯಾವ ವಿಷಯದ ಮೇಲೆ ಉಪನ್ಯಾಸವಿಡಿಸೋಣ ? ವೋಟಿಗೆ ಹಾಕಿ—ಇದು ಇಂದಿನ ರೀತಿ. ಹಿಂದೆ ಸಂಖ್ಯಾ ಬಲದ ಅತಿರೇಕ ಇರಲಿಲ್ಲ. ಈಚೀಚಿನ ರಾಜಕೀಯದಿಂದ ಬಂದಿರುವ ಈ ದೊಂಬಿಯ ದರ್ಬಾರಿನ ಜೊತೆಗೆ ಯಂತ್ರದಿಂದಾಗುವ ದೊಂಬಿಸೇವೆ ಸೇರಿಕೊಂಡಿದೆ. ಹಿಂದೆ ಊಟ ಮಾಡುವವರ ರುಚಿಯನ್ನು ನೋಡಿ ಅಡಿಗೆ, ಈ ಹೊತ್ತು ಹೋಟಲ್ಲಿನ ಅಡಿಗೆ. ಹಿಂದೆ ನಾಲಿಗೆ ಬೇಕೆಂದಂತೆ ಭಕ್ಷ್ಯ, ಈ ದಿನ ಕಾರ್ಖಾನೆಯ ವ್ಯಾಪಾರ ದೃಷ್ಟಿ ಯಿಂದ ಆದ ಹುರಿಗಾಳು ಬಿಸ್ಕತ್ತುಗಳು.

ಹಿಂದೆ ಪುರೋಹಿತರು ಸ್ವಂತ ತಕಲಿಯಿಂದ ನೂಲು ತೆಗೆದು ಮಾಡಿದ ಜನಿವಾರ ; ಈಗ ಮಿಲ್ಲು ದಾರದ ಹಾರ. ಹಿಂದೆ ಗೃಹಸ್ಥನು ತೋಟದಿಂದ ಬಿಡಿಸಿಕೊಂಡು ಬಂದ ಹೂ, ಮನೆಯಾಕೆ ಕಟ್ಟಿದ ಮಾಲೆ ; ಈಗ ಅಂಗಡಿಯಿಂದ ಬಂದ ಹೂವು—ಸೊಪ್ಪುಗಳ ಕಂತೆ. ಹಿಂದೆ ಮನೆಯ ಜನ ಕುಳಿತು ಹಚ್ಚಿದ ಊಟದೆಲೆ, ಈ ಹೊತ್ತು ಯಂತ್ರ ನಿರ್ಮಿತವಾದ ಲೋಹದ ತಟ್ಟೆ. ಪೂರ್ವಿಕರಲ್ಲಿ ತಮ್ಮ ಬಟ್ಟೆಯನ್ನು ತಮ್ಮ

ಕೈಯಿಂದ ತಾವೇ ಒಗೆದುಕೊಳ್ಳಬೇಕು, ತಮ್ಮ ಅಡಿಗೆಯನ್ನು ತಾವೇ ಮಾಡಿಕೊಳ್ಳಬೇಕು ಎಂಬ ನಿಯಮ ಸಾಮಾನ್ಯವಾಗಿತ್ತು. ಈಗ ಗಾಂಧಿಯವರ ಶಿಷ್ಯರು ತಮ್ಮ ಉಡಿಗೆಗೆ ಬೇಕಾದ ಬಟ್ಟೆಯ ನೂಲನ್ನು ತಾವೇ ಸ್ವಹಸ್ತದಿಂದ ನೂತುಕೊಳ್ಳಬೇಕೆಂದು ವ್ರತವಿಟ್ಟುಕೊಂಡಿದ್ದಾರಷ್ಟೇ ! ಈ ಸ್ವಯಂಪಾಕದಂಥ ನಿಯಮದಲ್ಲಿ ಒಂದು ಆತ್ಮಸಂಸ್ಕಾರದ ತತ್ತ್ವ ಅಂತರ್ಗತವಾಗಿದೆ. ಸ್ವತಶ್ಶ್ರಮವೂ ಸ್ವತಸ್ಸೇವೆಯೂ ಅಹಂಕಾರ ವರ್ಜನೆಯ ಪ್ರಯತ್ನಗಳು—ವಿನಯ ನಮ್ರಭಾವದ ಸೂಚನೆಗಳು. ಕೂಲಿಕೊಟ್ಟು ದೇವರ ಪೂಜೆ ಮಾಡಿಸಿ, ತಾನು ಕುಳಿತ ಕಡೆಗೆ ತೀರ್ಥ ಪ್ರಸಾದಗಳನ್ನು ತರಿಸಿಕೊಳ್ಳುವುದಕ್ಕಿಂತ, ತಾನೇ ಮೈಬಗ್ಗಿಸಿ ಮಾಡಿದ ನಮಸ್ಕಾರದಲ್ಲಿ ನಮ್ರತೆ ಹೆಚ್ಚು—ಎಂಬುದು ಹಿಂದಿನ ಭಾವನೆ. ತಂದೆ ಕಾಯಿಲೆಯಾದರೆ ತಾನೇ ಹತ್ತಿರ ನಿಂತು ಉಪಚರಿಸುವುದು ಹಿಂದಿನ ಸಂಪ್ರದಾಯ. ಕೂಲಿಯ 'ನರ್ಸ್'ಗಳನ್ನು ನಿಯಮಿಸುವುದು ಇಂದಿನ ಪಿತೃಭಕ್ತಿ. ಮಗುವಿನ ಹೊಟ್ಟೆಗೆ ಹೇಗೋ ಹಾಲ ಸೇರಿದ್ದು ಮುಖ್ಯ ಇಂದಿನವರಿಗೆ ; ಆ ಹಾಲು ತಾಯ ಸ್ತನದಿಂದ ಬಂದದ್ದು ಮುಖ್ಯ ಹಿಂದಿನವರಿಗೆ. ತನ್ನ ಶ್ರಮದ ಫಲ ತನ್ನ ಶ್ರದ್ಧೆಯ ಕಾಣಿಕೆ—ಎಂಬ ಸಂತೋಷದ ಕಲ್ಪನೆ ಈಗಿನವರಿಗೆ ಇಲ್ಲವಾಗುತ್ತಿದೆ. ಈ ಆತ್ಮಗುಣ ಸಂಕೋಚಕ್ಕೆ ಸಂಸೃಷ್ಟಿ ಪದ್ಧತಿಯಿಲ್ಲ ಕಾರಣ ; ಇಂದಿನ ಉದ್ದೇಶ ಸಾಂಕರ್ಯ ಸಹವಾಸ ಸಾಂಕರ್ಯಗಳು ಅದಕ್ಕೆ ಕಾರಣ.

ಕಡೆಯದಾಗಿ ಇನ್ನೊಂದು ವಿಷಯಕ್ಕೆ ಹೋಗೋಣ. ಅದು ಜೀವನದ ಮುಖ್ಯ ಗುರಿಯದು. ಪೂರ್ವಿಕರು ದೇವರ ಪ್ರೀತಿಗೆಂದು,—ಜನ್ಮ ಸಾರ್ಥಕವಾಗಲೆಂದು,—ಯಾವುದಾದರೊಂದು ದೊಡ್ಡ ಸಂಕಲ್ಪವನ್ನು ಮನಸ್ಸಿನಲ್ಲಿರಿಸಿಕೊಂಡು, ಅದು ಕೂಡಿಬರುವ ಕಾಲದ ನಿರೀಕ್ಷಣೆಯಲ್ಲಿ ಬಾಳ್ವೆ ನಡಸುತ್ತಿದ್ದರು. ಒಂದು ತೀರ್ಥಯಾತ್ರೆ, ಒಂದು ದೇವರ ಸೇವೆ, ಒಂದು ವ್ರತ, ಒಂದು ಸತ್ರ ಸ್ಥಾಪನೆ, ಒಂದು ರಾಮೋತ್ಸವ, ಒಂದು ದಾನ, ಒಂದು ಅನ್ನಸಂತರ್ಪಣೆ, ಒಂದು ಪುರಾಣ ಶ್ರವಣ—ಇಂಥ ಯಾವುದೋ ಒಂದು ದೊಡ್ಡ ಉದ್ದೇಶಕ್ಕಾಗಿ—ಸದ್ಯದ ಭೋಗ ಲಾಭಗಳಿಗೆ ಸಂಬಂಧಪಡದ ಸಂಕಲ್ಪಕ್ಕಾಗಿ ಅವರು ಯಾವಜ್ಜೀವವೂ ಹಂಬಲಿಸಿ, ಹಣವುಳಿಸಿ, ಅದು ನೆರವೇರಿದಾಗ ತಾವು ಬದುಕಿದ್ದು ಸಾರ್ಥಕವಾಯಿತೆಂದು ನಲಿಯುತ್ತಿದ್ದರು. ಅಂಥಾ ಪಾರಮಾರ್ಥಿಕತೆ ಈಗ ವಿರಳವಾಗುತ್ತಿದೆ. ಗಾಂಧಿಯವರು ಬದುಕಿದ್ದಾಗ ಹಲಮಂದಿ ಒಂದೆರಡು ಸಾರಿ ಅಂಥಾ ಪಾರಮಾರ್ಥಿಕತೆಯನ್ನು ತೋರಿದ್ದು ನಿಜ. ಆದರೆ ನಮ್ಮ ಅನುದಿನದ ಸಾಮಾನ್ಯ ಜೀವನದಲ್ಲಿ ಆ ಗುಣ ತೋರಿಬರುವುದು ಈಗ ತೀರ ಕಡಮೆಯಾಗಿದೆ. ಹಳೆಯ ಭಕ್ತಿ ಶ್ರದ್ಧೆಗಳು ಹೋಗಿವೆ ; ಹೊಸ ಆತ್ಮೋದ್ಧಾರಭಾವನೆ ಯಾವುದೂ ಬಂದಿಲ್ಲ. ಈ ಘಳಿಗೆ ತಿಂದ ತಿಂಡಿ. ಈ ಘಳಿಗೆ ನೋಡಿದ ನೋಟ.—ಅದಿಷ್ಟೇ ಇಂದಿನವರ ಬಾಳು. ಮರುಘಳಿಗೆಯೊಂದಿದೆ—ಎಂಬ ಸಂಗತಿ ಕೂಡ ಅವರಿಗೆ ಬೇಕಿಲ್ಲ. ಇಂದಿನ ಜೀವಿಕೆಯ ಕಷ್ಟವೂ ಹಾಗಿದೆ. ಬೆಳಗಿನಿಂದ ಸಂಜೆಯವರೆಗೂ ದುಡಿತ, ಅಲೆತ, ಚಿಂತೆ, ಧಾವಂತ, ಬಹುಜನಕ್ಕೆ ಜೀವನದಲ್ಲಿ ಬೇಸರ,—ಅದರಲ್ಲಿ ಅವರಿಗೆ ಅರ್ಥ ಕಾಣುತ್ತಿಲ್ಲ. ಇದು ನಮ್ಮ ಹೊಸ

ಆರ್ಥಿಕ ಯುಗದ ಪ್ರಭಾವ. ಕಾರ್ಖಾನೆಗೆ ಬಲಿ ಮನುಷ್ಯನ ನೆಮ್ಮದಿ. "ಗಾಣದೆತ್ತಿನಂತೆ ಸುತ್ತು; ಸಿಕ್ಕಿದ್ದನ್ನು ಬಾಚಿಕೊ; ದಣಿದು ನೆಲತಬ್ಬು"—ಬಾಳು ಇಷ್ಟೇ ಆದಾಗ ಅಂದಂದಿನ ಪಾಡು ಅಂದಂದಿನದು. ಅದು ಬರಿಯ ಅನ್ನ ವಸ್ತ್ರಗಳ ಪರದಾಟ. ಅದಕ್ಕಿಂತ ಮೇಲ್ಪಟ್ಟದ್ದು ಮನಸ್ಸಿಗೆಟುಕದು.

ಈಗಿನ ಜನ ಸುಖಪಡುತ್ತಿಲ್ಲವೆಂದು ನಾನು ಹೇಳುತ್ತಿಲ್ಲ. ಸುಖ ಸಂತೋಷಗಳ ತೋರಿಕೆಯೂ ಆಶೆಯೂ ಅಷ್ಟಿಷ್ಟಾದರೂ ಇಲ್ಲದೆ ಜೀವನ ಒಂದು ದಿವಸದ ಮಟ್ಟಿಗೂ ಸಾಧ್ಯವಾಗದು. ಆದರೆ ಆ ಸುಖಾನುಭವದಲ್ಲಿ ಒಂದು ವಿಚಕ್ಷಣೆಯುಂಟೆ? ನಿಜವಾದ ರಸಿಕತೆಯುಂಟೆ, ಉನ್ನತ ದೃಷ್ಟಿಯುಂಟೆ? ಇದು ಸಂಸ್ಕೃತಿಯ ಪ್ರಶ್ನೆ. ರಸಿಕತೆ ಪ್ರತಿಯೊಬ್ಬನಲ್ಲಿಯೂ ಅಂತರಂಗದಿಂದ ಉಕ್ಕಿಬರಬೇಕಾದ ಗುಣ. ಅದು ಇತರರ ಅನುಕರಣವಲ್ಲ. ಅದು "ಫ್ಯಾಷನ್" ಅಲ್ಲ. ರೇಡಿಯೋ ಇದ್ದ ಮಾತ್ರದಿಂದ ರಸಿಕತೆಯಿದೆ ಎನ್ನಲಾಗದು. ರೇಡಿಯೋ ಒಂದು ಯಂತ್ರ; ರಸಿಕತೆ ಹೃದಯ ಪರಿಪಾಕ. ರೇಡಿಯೋ ಹಣವನ್ನಪೇಕ್ಷಿಸುತ್ತದೆ. ರಸಿಕತೆ ಅಂತರಂಗ ಶಿಕ್ಷಣವನ್ನಪೇಕ್ಷಿಸುತ್ತದೆ. ಯಂತ್ರವೇ ದೊಡ್ಡದೆಂಬ ಭಾವನೆ ದೇಶನಾಯಕರಲ್ಲಿ ಪ್ರಬಲಿಸಿದಾಗ, ನಮ್ಮ ವ್ಯವಹಾರ ವಿಹಾರಕ್ರಮಗಳಲ್ಲಿ—human touch—ಮನುಷ್ಯ ಹೃದಯ ಸ್ಪರ್ಶವಿಲ್ಲದೆ ಅವು ಕೂಲಿಯ ಪಾಡೂ ಯಂತ್ರ ವರ್ತನೆಯೂ ಆದಾಗ, ಜನತೆಯ ಅಂತರಂಗ ಸಂಸ್ಕೃತಿಯ ಮಟ್ಟ ಇಳಿದುಹೋಗುವುದು ಸ್ವತಃಸಿದ್ಧ ಪರಿಣಾಮ.

ಈ ಮಾತನ್ನು ನಾನು ಆಡುತ್ತಿರುವುದು ಎಚ್ಚರಿಕೆಗಾಗಿ. ಸಂಸ್ಕೃತಿಯ ಸಂದರ್ಭ ನಾನು ವರ್ಣಿಸಿರುವಷ್ಟು ಕೆಟ್ಟಿಲ್ಲವೆಂದು ಹಾಗೆ ತಿಳಿದವರು ಯಾರಾದರೂ ಆ ಭರವಸೆ ಹೇಳಿದರೆ ನಾನು ಅದನ್ನು ಸಂತೋಷದಿಂದ ಕೇಳಿ ಅವರನ್ನು ಕೃತಜ್ಞತೆಯಿಂದ ವಂದಿಸಿಯೇನು. (6–5–1957)

# ನಮ್ಮ ಸಂಗೀತ

## ಶ್ರೀ ಪುರಂದರದಾಸರ ಸೇವೆ: ನಮ್ಮ ಕರ್ತವ್ಯ

1

ಈ ನಮ್ಮ ವಿಜಯ ಸಂಗೀತ ಕಲಾಶಾಲೆಯಲ್ಲಿ ಸಮರ್ಥರಾದ ಸಂಗೀತ ವಿದ್ವಾಂಸರಿದ್ದಾರೆ.* ಇಂಥ ವಿದ್ವಾಂಸರ ಸ್ನೇಹ ಕಟಾಕ್ಷಕ್ಕಾಗಿ ಕನ್ನಡದಲ್ಲಿ ಗೇಯ ಸಾಹಿತ್ಯ ಕಾದುಕೊಂಡು ಕುಳಿತಿದೆ. ಈ ಎರಡಕ್ಕೂ ಸಮಾಗಮವಾಗಬೇಕೆಂದು ಸೂಚಿಸಲು ಪುರಂದರದಾಸರ ಪುಣ್ಯದಿನ ಸರಿಯಾದ ಅವಕಾಶವಾಗಿರುತ್ತದೆ. ಈ ಆಲೋಚನೆಯಿಂದ ನಾನು ಇಲ್ಲಿ ಈಹೊತ್ತು ಮಾತನಾಡಲು ಒಪ್ಪಿಕೊಂಡಿದ್ದೇನೆ.

ಕಳೆದ ವಾರ ನಾಲ್ಕೈದು ದಿನ ಇಲ್ಲಿ ತ್ಯಾಗರಾಜ ಜ್ಞಾಪಕೋತ್ಸವ ನಡೆಯಿತಷ್ಟೆ ? ಆಗ ಬಹುಮಂದಿ ವಿದ್ವದ್ರಸಿಕರೂ ಗಾನಾಭಿಮಾನಿಗಳೂ ಇಲ್ಲಿ ಸಭೆ ಸೇರಿ ಈ ವಿಜಯ ಕಲಾಶಾಲೆಯ ಉಪಾಧ್ಯಾಯರುಗಳ ವಿಚಕ್ಷಣೆಯನ್ನೂ ವಿದ್ಯಾರ್ಥಿಗಳ ಪಾಠ ಪಟುತ್ವವನ್ನೂ ಕಂಡು ಸಂತೋಷಿಸಿದರು. ಬಾಯ ಹಾಡಿಕೆಯಲ್ಲಿಯೂ ಪಿಟೀಲು ವೀಣೆಗಳ ವಾದನದಲ್ಲಿಯೂ ವಿದ್ಯಾರ್ಥಿನಿಯರೂ ವಿದ್ಯಾರ್ಥಿಗಳೂ ಸ್ವರಶುದ್ಧಿಯನ್ನೂ ಶ್ರುತಿ ಮೇಳನವನ್ನೂ ತಾಳಗತಿಯನ್ನೂ ಗಮನದಲ್ಲಿರಿಸಿಕೊಂಡು ಭಾವಭರಿತವಾಗಿ ರಾಗ ನಿರೂಪಣೆ ಮಾಡಿದರು. ಅದು ಎಲ್ಲರ ಮೆಚ್ಚಿಕೆಯನ್ನೂ ಪಡೆಯಿತು. ಅಭ್ಯಾಸಿಗಳ ಯೋಗ್ಯತೆಯೇ ಬೋಧಕರ ಪಾಂಡಿತ್ಯ ಶ್ರದ್ಧೆಗಳಿಗೆ ಸಾಕ್ಷಿ. ಇಲ್ಲಿಯ ವಿದ್ವಾಂಸರು ಶಾಸ್ತ್ರ ಸಂಪನ್ನರೆಂದೂ ಬೋಧನ ಚತುರರೆಂದೂ ಈಗ ಚೆನ್ನಾಗಿ ವ್ಯಕ್ತಪಟ್ಟಿದೆ. ಇಲ್ಲಿಯ ಮುಖ್ಯೋಪಾಧ್ಯಾಯರಾದ ಶ್ರೀಮಾನ್ ಎಲ್. ಎಸ್. ನಾರಾಯಣಸ್ವಾಮಿ ಭಾಗವತರವರು ದಕ್ಷಿಣ ದೇಶದಲ್ಲಿ ಬಹುಕಾಲ ಪ್ರವಾಸಮಾಡಿ ಪ್ರಖ್ಯಾತ ಗಾಯಕರಲ್ಲಿ ಶಾಸ್ತ್ರಜ್ಞಾನ ಸಂಪಾದಿಸಿ, ಕಲಾ ಸಂಪ್ರದಾಯಗಳನ್ನು ಸಂಗ್ರಹಿಸಿ, ಸಾಧನೆಯಿಂದಲೂ, ಹೊಸ ಹೊಸದಾಗಿ ಚಿಗುರುವ ಮನೋಧರ್ಮದಿಂದಲೂ, ಶಾರೀರಸಂಗೀತ

* ಬೆಂಗಳೂರು ಬಸವನಗುಡಿಯಲ್ಲಿರುವ ವಿಜಯ ಸಂಗೀತ ವಿದ್ಯಾಶಾಲೆಯಲ್ಲಿ 3-2-1954 ಬುಧವಾರ ಸಂಜೆ ಶ್ರೀ ಪುರಂದರದಾಸರ ಜ್ಞಾಪಕೋತ್ಸವ ಕಾಲದಲ್ಲಿ ಮಾಡಿದ ಅಧ್ಯಕ್ಷ ಭಾಷಣ.

ಪಿಟೀಲು ವಾದನಗಳೆರಡರಲ್ಲೂ ಪ್ರವೀಣರೆನಿಸಿ, ವಿದ್ವನ್ಮಂಡಲಿಗಳಲ್ಲಿ ಮನ್ನಣೆ ಸಂಪಾದಿಸಿದ್ದಾರೆ. ಇಂಥಾ ಪ್ರತಿಭಾವಂತರ ಉಪಕಾರ ಕನ್ನಡ ಗೀತಪ್ರಬಂಧಗಳಿಗೆ ಹೆಚ್ಚಾಗಿ ದೊರೆಯಬೇಕೆಂಬುದು ನನ್ನ ಪ್ರಾರ್ಥನೆ.

ಶ್ರೀಮಾನ್ ನಾರಾಯಣಸ್ವಾಮಿ ಭಾಗವತರು ಹೆಸರಿನಲ್ಲಿ ತಮಿಳರಂತೆ ಕಂಡರೂ ವಾಸ್ತವದಲ್ಲಿ ಹುಟ್ಟು ಕನ್ನಡಿಗರು. ಕನ್ನಡ ದೇಶದ ಮಧ್ಯರಾಷ್ಟ್ರದಲ್ಲಿರುವ ಚಿಕ್ಕ ಮಗಳೂರು ಇವರ ಜನ್ಮಸ್ಥಲ. ಇವರ ಸಹೋದ್ಯೋಗಿಗಳು ಎಲ್ಲರೂ ಕನ್ನಡಿಗರೇ. ಹೀಗಿದ್ದರೂ ಇವರ ಹಾಡಿಕೆಯಲ್ಲಿ ನಾವು ಕೇಳುವುದು ಹೆಚ್ಚಾಗಿ ತೆಲುಗು ಕೃತಿಗಳನ್ನು, ಮತ್ತು ಆಗಾಗ ಸಂಸ್ಕೃತ ಕೃತಿಗಳನ್ನು. ಇದು ಅವರಿಗೂ ಕನ್ನಡ ಜನಕ್ಕೂ ಹೆಮ್ಮೆ ಪಡಲು ವಿಷಯವೇ ಸರಿ. ತೆಲುಗು ಭಾಷೆ ಕನ್ನಡಕ್ಕೆ ಸೋದರೀಪ್ರಾಯವಾದದ್ದು. ತಮಿಳು ಕೂಡ ಹಾಗೆಯೇ. ಸಂಸ್ಕೃತವಂತೂ ಜನನೀಪ್ರಾಯವಾದದ್ದು. ತೆಲುಗು ತಮಿಳು ಸಂಸ್ಕೃತ ಪ್ರಬಂಧಗಳನ್ನು ಕನ್ನಡ ಗಾಯಕರು ಹಾಡುವುದರಲ್ಲಿ ಯಾರಿಗೂ ಅಸಮಾಧಾನವಿರದು. ಸಂಗೀತದಲ್ಲಿ ಮುಖ್ಯವಾದದ್ದು ರಾಗಭಾವ. ಅದಕ್ಕೆ ಉಪಕರಣ ಮಾತ್ರವಾದದ್ದು ಭಾಷೆ. ಒಳ್ಳೊಳ್ಳೆಯ ರಾಗಭಾವಗಳು ಯಾವ ಭಾಷೆಯಲ್ಲಿಯೇ ವ್ಯಕ್ತವಾಗಿರಲಿ ನಾವು ಆ ರಾಗವಿಲಾಸಗಳನ್ನು ಆದರಿಸತಕ್ಕವರು. ಆದಕಾರಣ ಈ ವಿದ್ವಾಂಸರುಗಳ ಅನ್ಯಭಾಷಾ ಗಾಯನವನ್ನು ನಾವು ಆಕ್ಷೇಪಿಸ ತಕ್ಕವರಲ್ಲ. ಆದರೆ ಅವರು ಆ ಭಾಷೆಗಳ ಜೊತೆಗೆ ಕನ್ನಡವನ್ನೂ ಸರಿಸಮವಾಗಿ ಕಾಣಬೇಕೆಂಬುದಷ್ಟೇ ನಮ್ಮ ಬೇಡಿಕೆ. ಈಗ ಇಲ್ಲಿ ಕನ್ನಡ ಹಾಡು ಇಲ್ಲವೇ ಇಲ್ಲವೆಂದು ನಾನು ಸೂಚಿಸುತ್ತಿಲ್ಲ. ಅದು ಕೊಂಚವಾಗೇನೋ ಇದೆ ; ಅಷ್ಟು ಸಾಲದು, ಇನ್ನೂ ಹೆಚ್ಚಬೇಕೆಂಬುದು ನನ್ನ ಸೂಚನೆ.

2

## ಕರ್ನಾಟಕ ಸಂಗೀತದ ಪರಂಪರೆ

ಸಂಗೀತಕ್ಕೆ ತೆಲುಗು ಹೊಂದಿಕೊಳ್ಳುವಂತೆ ಕನ್ನಡ ಹೊಂದಿಕೊಳ್ಳಲಾರದೆಂಬುದು ಕೇವಲ ಭ್ರಾಂತಿಯ ಮಾತು. ಈ ಭ್ರಾಂತಿಗೆ ಕಾರಣ ಒಂದು ಅವಿಚಾರ ರೂಢಿ (Fashion) "ಫ್ಯಾಷನ್". ಸ್ವತಂತ್ರವಾದ ಗಾಯನ ಪ್ರತಿಭೆಯುಳ್ಳ ತ್ಯಾಗ ರಾಜರು ತೆಲುಗಿನಲ್ಲಿ ಹಾಡಿದರು. ನೂತನ ರಾಗವಿಕಾಸ ಕ್ರಮಗಳನ್ನು ಅವರು ಕಂಡು ಹಿಡಿದರು. ಆ ನೂತನ ಮಾರ್ಗವು ಮನೋರಂಜಕವಾಗಿದ್ದದ್ದರಿಂದ, ಅವರ ಭಾಷೆಯೇ ಅದಕ್ಕೆ ಕಾರಣವೋ ಏನೋ ಎಂದು ಜನ ಭ್ರಮಿಸಿದರು ; ಮತ್ತು ಅವರ ವಿಧಾನ ಅಷ್ಟು ಮೋಹಕವಾಗಿದ್ದದ್ದರಿಂದ ವಿದ್ವಾಂಸರು ಅವರ ಕೃತಿಗಳಿಗೆ ಸ್ವರಪ್ರಸ್ತಾರವನ್ನು ಸಿದ್ಧಪಡಿಸಿಟ್ಟರು. ಹೀಗೆ ಅವುಗಳನ್ನು ಕಲಿಯುವುದೂ ಕಲಿಸುವುದೂ ಸುಲಭ ವಾಯಿತು. ಅನುಕರಣ ಇಷ್ಟೊಂದು ಸುಲಭವಾಗಿರುವಾಗ ಸ್ವಪ್ರಯಾಸಕ್ಕೆ ನಮ್ಮ ಮನಸ್ಸು ಒಡಂಬಡುವುದು ಅಪರೂಪ ತಾನೆ ? ಹೀಗೆ "ಫ್ಯಾಷನ್" ಬೆಳೆಯಿತು. ತೆಲುಗು ಮುಂದಕ್ಕೆ ಬಂತು. ಕನ್ನಡ ಹಿಂದಕ್ಕೆ ನಿಂತಿತು.

ಈ ಸಂದರ್ಭದಲ್ಲಿ ಕನ್ನಡಕ್ಕೆ ಸಂಗೀತ ಪ್ರಪಂಚದಲ್ಲಿ ನ್ಯಾಯವಾಗಿ ಸಲ್ಲಬೇಕಾದ ಸ್ಥಾನ ಯಾವುದು ?—ಎಂಬುದನ್ನು ನಾವು ಜ್ಞಾಪಕಕ್ಕೆ ತಂದುಕೊಳ್ಳಬೇಕು. ನಾಲ್ಕೈದು ವಾರಗಳ ಕೆಳಗೆ ಮದರಾಸಿನಲ್ಲಿ ನಡೆದ ಒಂದಾನೊಂದು ಸಂಗೀತ ಗೋಷ್ಠಿಯಲ್ಲಿ ಅಲ್ಲಿಯ ಮುಖ್ಯಮಂತ್ರಿ ಶ್ರೀಮಾನ್ ಸಿ. ರಾಜಗೋಪಾಲಾಚಾರ್ಯರವರು ಅಲ್ಲಿಯ ಸಂಗೀತಕ್ಕೆ "ಕರ್ಣಾಟಕ ಸಂಗೀತ"ವೆಂಬ ಹೆಸರು ಯುಕ್ತವಲ್ಲವೆಂದೂ, ಇನ್ನು ಮುಂದೆ ಅದನ್ನು "ತೆನ್ನಾಟ್ಟು ಸಂಗೀತಮ್" ಎಂದು ಕರೆಯಬಹುದೆಂದೂ ಸೂಚಿಸಿದಂತೆ ವೃತ್ತಪತ್ರಿಕೆಗಳಲ್ಲಿ * ಪ್ರಕಟವಾಗಿದೆ. ಶ್ರೀಮಾನ್ ರಾಜಗೋಪಾಲಾಚಾರ್ಯರು ಭಾಷಾಭೇದಗಳನ್ನು ಹೆಚ್ಚು ಮಾಡಬಾರದೆಂದು ಉಪದೇಶಿಸುತ್ತಿದ್ದವರು. —ಭಾಷಾನುಸಾರವಾಗಿ ಸಂಸ್ಥಾನ ರಚನೆಯಾಗಬೇಕೆಂಬುದನ್ನು ಪ್ರತಿಷೇಧಿಸಿರುವವರು. —ಭಾಷಾಭಿಮಾನದ ಅತಿರೇಕವು ಇಂಡಿಯದ ಜನಪದ ಭಾವನೆಗೆ ವಿರೋಧವೆಂದು ವಾದಿಸುವವರು. ಇಂಥವರು ಬಹುಕಾಲದಿಂದ ಬಹುಜನ ಒಪ್ಪಿ ಬಂದಿರುವ "ಕರ್ಣಾಟಕ ಸಂಗೀತ"ವೆಂಬ ಹೆಸರಿನ ವಿಷಯದಲ್ಲಿ ಈಗ ಹೀಗೆ ಅಸಹನೆ ತೋರಲು ಕಾರಣವೇನಿರಬಹುದು ? ಮದರಾಸು ಸಂಸ್ಥಾನ ಈಗ ಮುಖ್ಯವಾಗಿ ತಮಿಳು ರಾಜ್ಯವಾಗಿದೆ. ಅಲ್ಲಿ ದ್ರಾವಿಡ ಕಳಗಂ ಮೊದಲಾದ ಚಳವಳಿಗಳು ಎದ್ದಿವೆ. ಇಂಥ ವಿಷಮ ವಾತಾವರಣದಲ್ಲಿ ತಮಿಳರ ಮನೋಲ್ಲಾಸಕ್ಕಾಗಿ ಶ್ರೀಮದಾಚಾರ್ಯರು ತಮ್ಮ ತತ್ತ್ವಗಳನ್ನು ಒಂದು ಕ್ಷಣ ಬದಿಗಿಟ್ಟರೆಂದು ಹೇಳೋಣವೆ ? ಅವರ ಮಾತ ನ್ನೊಪ್ಪಿದರೆ ಜನಪದೌದಾರ್ಯದ ತತ್ತ್ವಕ್ಕೂ ದೇಶಚರಿತ್ರೆಯ ಸತ್ಯದ ತತ್ತ್ವಕ್ಕೂ ಲೋಪ ತಂದಂತಾದೀತು.

ಚರಿತ್ರೆಯ ಸಂಗತಿಯನ್ನು ಸ್ವಲ್ಪ ನೋಡೋಣ : ನಮ್ಮ ದೇಶದಲ್ಲಿ ಭಾಷೆ ಎಷ್ಟು ಹಳೆಯದೋ ಹಾಡೂ ಅಷ್ಟು ಹಳೆಯದು. ವೇದ ಕವಿಗಳೇ ಗಾನವಿಧಿಗೆ ವಿಧೇಯರಾಗಿದ್ದರು. ಅದೇ "ಶಿಕ್ಷಾ" ಎಂಬ ವೇದಾಂಗ. ಮತ್ತು ವೈದಿಕ ಕ್ರಿಯೆಗಳಲ್ಲಿ ಅವರು ಗಾನಕ್ಕೆ ಒಂದು ಸ್ಥಲವನ್ನು ಮುಡುಪು ಮಾಡಿಟ್ಟಿದ್ದರು. ನಮ್ಮ ದೇಶದಲ್ಲಿ ಹಾಗೆ ಪ್ರಾರಂಭವಾದ ಸಂಗೀತ ನೂರಾರು ವರ್ಷ ಕರ್ಣಾಕರ್ಣಿಕೆಯಾಗಿ, ಮುಖಾಮುಖಿಯಾಗಿ, ಗುರುಶಿಷ್ಯ ಪರಂಪರೆಯಿಂದ ಬೆಳೆದು ಬಂತೆಂದು ತೋರುತ್ತದೆ. ಮೊದಮೊದಲು ಅದು ಲಿಖಿತ ಗ್ರಂಥವಾಗಿರಲಿಲ್ಲ. ಎಲ್ಲೆಲ್ಲಿಯೂ ಅದೇ ಕಲೆಯ ವಿಕಾಸಕ್ರಮ. ಮೊದಲು ಪ್ರಯೋಗ, ಆಮೇಲೆ ಶಾಸ್ತ್ರ. ಹಾಗೆ ಸ್ವಯಂಭೂತವಾಗಿ ಬೆಳೆದು ಬಂದ ಗಾನ ಕಲೆ ಮೊದಲು ಗ್ರಂಥಗತವಾದದ್ದು ಬಹುಶಃ ಭರತಮುನಿಯ ಕಾಲದಲ್ಲಿ. ಆ ಗ್ರಂಥ ನಾಟ್ಯಶಾಸ್ತ್ರ. ಅದು ಬಹುಶಃ ಕ್ರಿಸ್ತವರ್ಷ 300ರ ಸುಮಾರಿನದೆಂದು ಕೆಲವರ ಊಹೆ. ಬಹುಕಾಲ ಅದು ಸಮಸ್ತ ಭರತಖಂಡಕ್ಕೂ ಪ್ರಮಾಣ ಗ್ರಂಥವಾಗಿತ್ತು. ಮತಂಗ, ಕಹೋಳ ಮುಂತಾದ ಪೂರ್ವಿಕರೂ ಸಂಗೀತಶಾಸ್ತ್ರ ಕರ್ತರೆಂದು ಪ್ರತೀತಿಯಿದೆ. ಅವರ ಗ್ರಂಥಗಳು ದೊರೆತಿಲ್ಲ.** ಅಲ್ಲಿಂದೀಚೆಗೆ ಹೊಸ ಹೊಸ ಗಾಯಕರು ತಮ್ಮ ತಮ್ಮ ಪ್ರತಿಭೆಯಿಂದ ಸ್ವತಂತ್ರವಾಗಿ ವಿಕಾಸಗೊಳಿಸುತ್ತಾ

* The *Hindu* 21-12-1953. ** ಮತಂಗನ 'ಬೃಹದ್ದೇಶಿ' ದೊರೆತು ಪ್ರಕಟವಾಗಿದೆ.

ಹೋದಹಾಗೆಲ್ಲ ಹೊಸ ಹೊಸ ಪದ್ಧತಿಗಳು ಹುಟ್ಟಿಕೊಂಡವು. ಇಂಡಿಯ ದೇ ಬಹು ದೊಡ್ಡದು. ಒಂದೊಂದು ದೇಶ ವಿಭಾಗವೂ ತನ್ನ ತನ್ನದೇ ಆದ ಒಂದೊಂದ ಭಾಷೆಯನ್ನೂ ಒಂದೊಂದು ಕಲಾವಿಧಾನವನ್ನೂ ಬೆಳಸಿತು. ಈ ಪ್ರಾದೇಶಿ ವೈಶಿಷ್ಟ್ಯಗಳು ನಮ್ಮ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಕಾಣಬರುತ್ತವೆ. ಔತ್ತರೇಯ ಪಾಕ ಪದ್ಧತಿಯೂ ದಾಕ್ಷಿಣಾತ್ಯರ ಪಾಕ ಪದ್ಧತಿಯೂ ಬೇರೆ ಬೇರೆ ಇರುವಂತ ಸಂಗೀತದಲ್ಲಿಯೂ ಇಬ್ಬರ ಪದ್ಧತಿಗಳೂ ಬೇರೆ ಬೇರೆಯಾದುವು. ಈ ಪ್ರತ್ಯೇಕತೆಯ ಕಾಲ ಯಾವುದೆಂದು ನಿಷ್ಕರ್ಷೆಯಾಗಿ ಹೇಳುವುದು ಸುಲಭವಲ್ಲ. ಬಹುಶಃ ಕ್ರಿ.ಶ 1200ನೆಯ ಇಸ್ವಿಯ ಸುಮಾರಿನಲ್ಲಿ, ಎಂದರೆ ಈಗ್ಗೆ 750 ವರ್ಷಗಳ ಹಿಂದೆ ಶಾರ್ಙ್ಗದೇವನೆಂಬ ಪ್ರತಿಭಾವಂತನು ಬರೆದ "ಸಂಗೀತ ರತ್ನಾಕರ"ವೇ ದಾಕ್ಷಿಣಾತ ಸಂಗೀತದ ಮೊದಲನೆಯ ಗ್ರಂಥವೆಂದು ತೋರುತ್ತದೆ. * ಆತನು (ಹೈದರಾಬಾದ ಸಂಸ್ಥಾನದಲ್ಲಿರುವ) ದೇವಗಿರಿ ಅಥವಾ ದೌಲತಾಬಾದ್ ಎಂಬಲ್ಲಿ ವಾಸವಾಗಿದ್ದವನು ಅದು ಆಗ ಕರ್ಣಾಟಕ ದೇಶ. ಅಲ್ಲಿಂದೀಚೆಗೆ ದಾಕ್ಷಿಣಾತ್ಯ ಸಂಗೀತಕ್ಕೆ ಒಂದು ನಿರ್ದಿಷ್ಟ ವಾದ ರೂಪವನ್ನು ಕೊಟ್ಟವರು ಮಾಧವ–ವಿದ್ಯಾರಣ್ಯರು. ಇವರು ಸುಮಾರು 1350ರಲ್ಲಿದ್ದವರು. ಅವರು ವಿಜಯನಗರ ಸಾಮ್ರಾಜ್ಯದ ಮುಖ್ಯಮಂತ್ರಿ ಪದವಿಯ ಕರ್ತವ್ಯಭಾರದ ಜೊತೆಗೆ ಶೃಂಗೇರಿಯ ಮಠಾಧಿಪತ್ಯದ ಭಾರವನ್ನೂ ಅದರ ಜೊತೆಗ ವೇದಭಾಷ್ಯಾದಿ ಗ್ರಂಥ ಸಂಪಾದನೆಯ ಕಾರ್ಯಭಾರವನ್ನೂ ಹೊತ್ತದ್ದು ಸಾಲ ದೆಂಬಂತೆ, ಸಂಗೀತ ಶಾಸ್ತ್ರ ಪ್ರವರ್ತನೆಯ ಕಾರ್ಯವನ್ನೂ ಸೇರಿಸಿಕೊಂಡು "ಸಂಗೀತ ಸಾರ"ವೆಂಬ ಗ್ರಂಥವನ್ನು ರಚಿಸಿದರು. ಆ ಗ್ರಂಥ ನಮಗೆ ದೊರೆತಿಲ್ಲ. ವಿದ್ಯಾರಣ್ಯರ ಪೂರ್ವಾಶ್ರಮದ ತಮ್ಮಂದಿರಾದ ವೇದಭಾಷ್ಯಕರ್ತ ಸಾಯಣಾಚಾರ್ಯರು ಸಂಗೀತಾಭಿಜ್ಞರೆಂಬುದಕ್ಕೆ ಗ್ರಂಥಪ್ರಮಾಣವುಂಟು. ವಿದ್ಯಾರಣ್ಯರ ತರುವಾಯ ಗ್ರಂಥ ಬರೆದ ಗೋವಿಂದ ದೀಕ್ಷಿತರೇ ಮೊದಲಾದವರು ವಿದ್ಯಾರಣ್ಯರನ್ನು ಪದೇ ಪದೇ ಸ್ಮರಿಸಿ "ಸಂಗೀತಸಾರ"ದ ವಾಕ್ಯಗಳನ್ನು ತಮ್ಮ ತಮ್ಮ ಗ್ರಂಥಗಳಲ್ಲಿ ಉದಾಹರಿಸಿ ದ್ದಾರೆ. ಆ ಮಾಧವ–ವಿದ್ಯಾರಣ್ಯರು ಹುಟ್ಟುಕನ್ನಡಿಗರೆಂಬುದು ನಿರ್ವಿವಾದವಾದ ಸಂಗತಿ.

ಅನಂತರ ಬಂದವರು ನಿಜಗುಣ ಶಿವಯೋಗಿಗಳು (1500), ಪುರಂದರ ದಾಸರು (1550) ಮತ್ತು ಇತರ ದಾಸರುಗಳು. ಇವರೆಲ್ಲರೂ ಕರ್ಣಾಟಕರೇ. ಇವರು ತಮ್ಮ ಕಾಲಕ್ಕಿದ್ದ ಸಂಗೀತಶಾಸ್ತ್ರವನ್ನವಲಂಬಿಸಿ ಲಕ್ಷ್ಯ ಪ್ರಬಂಧಗಳನ್ನು ನಿರ್ಮಿಸಿದರು. ನಾನಾ ರಾಗಗಳ ಸಂಚಾರ ಕ್ರಮಗಳು, ವಿಚಿತ್ರವಾದ ತಾಳಗತಿಗಳು, ಇವಕ್ಕನುಕೂಲವಾದ ಛಂದೋಬಂಧನಗಳು—ಈ ನಾನಾ ಸಂಧಾನಗಳ ಮೂಲಕ ಶಾಸ್ತ್ರವನ್ನು ಪ್ರಯೋಗದಿಂದ ತೋರಿಸಿಕೊಟ್ಟವರು ಕರ್ಣಾಟಕದ ಶೈವ ವೈಷ್ಣವ ದಾಸರುಗಳು. ಅವರಾದಮೇಲೆ ಕ್ರಿ.ಶ. 1650ರ ಸುಮಾರಿನಲ್ಲಿ ದಾಕ್ಷಿಣಾತ್ಯ ಸಂಗೀತವನ್ನು

* ಇವನಿಗಿಂತ ಪೂರ್ವದಲ್ಲಿ ೧೧ನೆಯ ಶತಕದಲ್ಲಿ ಮತಂಗ "ಬೃಹದ್ದೇಶಿ" ಎಂಬ ಸಂಗೀತ ಶಾಸ್ತ್ರಗ್ರಂಥವನ್ನು ರಚಿಸಿದ್ದಾನೆ. ಈತನೂ ದಕ್ಷಿಣ ದೇಶದವನೇ.—ಸಂ.

ಮತ್ತೊಮ್ಮೆ ಪರಿಷ್ಕಾರ ಪಡಿಸಿದವರು ಗೋವಿಂದದೀಕ್ಷಿತರು. ಇವರೂ ಕರ್ಣಾಟಕರು. ಇವರು ತಂಜಾವೂರಿನ ರಾಜ ಅಚ್ಯುತ ನಾಯಕನ ಮಂತ್ರಿಯಾಗಿದ್ದವರು. ಇವರು "ಸಂಗೀತಸುಧಾ" ಎಂಬ ಗ್ರಂಥವನ್ನು ಬರೆದರು. ಇವರ ಮಕ್ಕಳೇ ಪ್ರಖ್ಯಾತರಾದ ವೇಂಕಟ ಮಖಿಗಳು. ಅವರು ರಚಿಸಿದ "ಚತುರ್ದಂಡೀ ಪ್ರಕಾಶಿಕೆ" ಈಹೊತ್ತಿಗೂ ಪ್ರಮಾಣಗ್ರಂಥವಾಗಿದೆ. ಸಂಸ್ಕೃತ ವ್ಯಾಕರಣಕ್ಕೆ "ಪಾಣಿನಿ" ಹೇಗೋ ಸಂಗೀತ ವ್ಯಾಕರಣಕ್ಕೆ "ಚತುರ್ದಂಡೀ ಪ್ರಕಾಶಿಕೆ" ಹಾಗೆ ಶಾಸನಪ್ರಾಯವಾಗಿದೆ.

ತೆಲುಗಿನಲ್ಲಿ ಮುವ್ವ ಗೋಪಾಲ ನಾಮಾಂಕಿತದಿಂದ ಶೃಂಗಾರ ಪದಗಳನ್ನು ರಚಿಸಿ ಪ್ರಸಿದ್ಧನಾಗಿರುವ ಕ್ಷೇತ್ರಜ್ಞನು ಸರಿಸುಮಾರು ಇದೇ ಕಾಲದವನು (1650). ಮೈಸೂರಿನಲ್ಲಿ ಮಹಾರಾಜ ಚಿಕ್ಕದೇವರಾಜ ಒಡೆಯರ ಹೆಸರಿನಲ್ಲಿ ರಚಿತವಾಗಿರುವ "ಗೀತ ಗೋಪಾಲ"ವೆಂಬ ಕನ್ನಡ ಗೇಯ ಕಾವ್ಯವು ಸುಮಾರು 50 ವರ್ಷಗಳ ತರುವಾಯದ್ದು (ಕ್ರಿ.ಶ. 1700). ಈ "ಗೀತ ಗೋಪಾಲ"ವು ವಿಷಯದಲ್ಲಿಯೂ ಮಾದರಿಯಲ್ಲಿಯೂ ಜಯದೇವ ಕವಿಯ "ಗೀತ ಗೋವಿಂದ"ವನ್ನನುಸರಿಸಿದ್ದರೂ ಇದು ಸಪ್ತಪದೀಗೀತಗಳುಳ್ಳದ್ದು. ಇದು ಲಲಿತವೂ ಸರಸವೂ ಆದ ಪದಗಳಿಂದ ಸುಂದರ ಕೋಮಲ ಭಾವಗಳನ್ನು ಬಣ್ಣಿಸಿರುವ ಸೊಗಸಾದ ಕನ್ನಡ ಗೀತಾವಳಿ.

ಚತುರ್ದಂಡೀ ಪ್ರಕಾಶಿಕಾಕಾರರ ಕಾಲದಿಂದ ಸುಮಾರು 150 ವರ್ಷಗಳಾದ ಮೇಲೆ ಬಂದವರು ತ್ಯಾಗರಾಜರು ಮತ್ತು ಮುತ್ತುಸ್ವಾಮಿ ದೀಕ್ಷಿತರು. ಇವರಿಬ್ಬರೂ ಕರ್ಣಾಟಕರಾದ ವೇಂಕಟ ಮಖಿಗಳ ಶಾಸ್ತ್ರಪದ್ಧತಿಯನ್ನು ಅನುಸರಿಸಿಯೇ ಗೀತ ರಚನೆ ಮಾಡಿದವರು. ವಿದ್ಯಾರಣ್ಯರ ಕಾಲಕ್ಕೆ ಇದ್ದ ಹದಿನೈದು ಮೇಳಕರ್ತ ರಾಗಗಳು ವೇಂಕಟ ಮಖಿಗಳ ಕಾಲಕ್ಕೆ ಎಪ್ಪತ್ತೆರಡಾಗಿದ್ದವು. ಇಂದಿನ ರಾಗವರ್ಗ ವ್ಯವಸ್ಥೆಗೆ ಆ ಎಪ್ಪತ್ತೆರಡೇ ಆಧಾರವಾಗಿದೆ. ಇಲ್ಲಿ ನಾನು ಹೇಳಿರುವ ಶಾಸ್ತ್ರಕಾರರಲ್ಲದೆ ಅವರುಗಳ ನಡುನಡುವೆ ಕಲ್ಲಿನಾಥ, ಸೋಮನಾಥ, ರಾಮಾಮಾತ್ಯ ಮೊದಲಾದವರನೇಕರು ದಾಕ್ಷಿಣಾತ್ಯ ಸಂಗೀತವಲ್ಲಿ ಶಾಸ್ತ್ರಪೋಷಣೆ ಮಾಡಿದರು. ಅವರೆಲ್ಲರೂ, ಅಥವಾ ಅವರಲ್ಲಿ ಬಹುಮಂದಿಯಂತೂ, ಕನ್ನಡಿಗರು. ಹೀಗೆ ಶಾರ್ಙ್ಗದೇವನಿಂದ ವೇಂಕಟ ಮಖಿಗಳವರೆಗೂ, ಎಂದರೆ ಸುಮಾರು 650 ವರ್ಷಗಳ ಕಾಲ, ದಾಕ್ಷಿಣಾತ್ಯ ಸಂಗೀತ ಶಾಸ್ತ್ರವನ್ನು ವಿಸ್ತರಿಸಿ ಸ್ಥಾಪಿಸಿದವರು ವಿಶೇಷವಾಗಿ ಕರ್ಣಾಟಕರು. ಆದದ್ದರಿಂದ ಅವರು ಹಾಕಿದ ಪದ್ಧತಿಗೆ "ಕರ್ಣಾಟಕ ಸಂಗೀತ"ವೆಂದು ಹೆಸರು ಬಂದದ್ದು ಸ್ವಾಭಾವಿಕವಾಗಿಯೇ ಇದೆ. ಈ ಸಂಗೀತದ ಎಷ್ಟೋ ಪಾರಿಭಾಷಿಕ ಶಬ್ದಗಳು—ಮಾತು ಠಾಯ ಎಲ ಓವಿ ಕೈವಾಡ ಮುಂತಾದುವು—ಕರ್ಣಾಟಕ ಸಂಗೀತಕ್ಕೂ ಕನ್ನಡ ಭಾಷೆಗೂ ಇರುವ ಬಾಂಧವ್ಯಕ್ಕೆ ಸಾಕ್ಷಿಯಾಗಿವೆ. ಶಾಸ್ತ್ರಕರ್ತರು ಕರ್ಣಾಟಕರು; ಲಕ್ಷ್ಯಕರ್ತರು ಆಂಧ್ರರು; ಪ್ರಯೋಗಕರ್ತರು ತಮಿಳರು—ಹೀಗಾಗಿದೆ ಕರ್ಣಾಟಕ ಸಂಗೀತದ ಇಂದಿನ ಪರಿಶ್ರಮ ವಿಭಾಗ. ಇವರಲ್ಲಿ ಪ್ರಯೋಗಕರ್ತರು ತಾನೆ ಮಹಾಜನ ಸಂಮುಖಕ್ಕೆ ಬರತಕ್ಕವರು! ಹೀಗೆ ಮಾನ ಲಾಭಗಳು ತಮಿಳರ ಪಾಲಿಗೆ ಹೆಚ್ಚಾಗಿ ಬಂದಿವೆ. ಕನ್ನಡ ಸಂಗೀತಗಾರರು ತಮ್ಮ ಸಾಧನೆಯನ್ನು ಬಲಪಡಿಸಿಕೊಂಡು ತಮಿಳರಂತೆ ಏಕೆ ಪ್ರಸಿದ್ಧರಾಗಬಾರದು?—ಎಂಬುದು ನನ್ನ ಪ್ರಶ್ನೆ.

3

## ಪುರಂದರ ದಾಸರು

ಪುರಂದರ ದಾಸರ ಮಹಿಮೆಯನ್ನು ಈ ದಿವಸ ವಿಶದವಾಗಿ ನೆನಪಿಗೆ ತಂದ
ಕೊಳ್ಳುವುದು ನಮಗೆ ಕರ್ತವ್ಯವೇ ಆಗಿದೆ. ಅವರು ನಮ್ಮ ದೇಶದ ಧಾರ್ಮಿಕ ಚರಿತ್
ಯಲ್ಲಿಯೂ ಸಾಹಿತ್ಯ ಚರಿತ್ರೆಯಲ್ಲಿಯೂ ಸಂಗೀತ ಚರಿತ್ರೆಯಲ್ಲಿಯೂ ಶಾಶ್ವತವಾ
ಉನ್ನತ ಸ್ಥಾನವನ್ನು ಪಡೆದಿದ್ದಾರೆ. ಅವರ ಹೆಸರನ್ನರಿಯದವನು ಕನ್ನಡ ದೇಶದ
ಯಾರೂ ಇಲ್ಲ. ಅವರು ಈಗ್ಗೆ ಸುಮಾರು 400 ವರ್ಷಗಳ ಹಿಂದೆ (1550) ಬಾ
ದವರು. ಪೂನಾ ಪಟ್ಟಣದ ಸಮೀಪದಲ್ಲಿರುವ ಪುರಂದರ ಗಢವೆಂಬ ಸ್ಥಳದ
ವರದಪ್ಪನಾಯಕನೆಂಬ ಐಶ್ವರ್ಯವಂತನ ಮಗನಾಗಿ ಹುಟ್ಟಿ, ಶ್ರೀನಿವಾಸ ನಾಯ
ನೆಂಬ ಹೆಸರಿನಿಂದ ಸಂಸಾರವಂತನಾಗಿ ಬಾಳಿ, ನಾಲ್ವರು ಮಕ್ಕಳನ್ನು ಬೆಳಸಿ, ಎಂದೊ
ಒಂದು ದಿನ ವಿರಕ್ತಿ ತನ್ನಲ್ಲಿ ತಲೆದೋರಿದಾಗ ತನ್ನ ಐಶ್ವರ್ಯವನ್ನು ತೊರೆದು ಪಾಂಡ
ರಂಗವಿಠಲ ಮೂರ್ತಿಯನ್ನು ಆಶ್ರಯಿಸಿ, ಭಗವಂತನ ಕೊಂಡಾಟದಲ್ಲಿಯೂ ವೇದಾಂ
ತತ್ತ್ವ ಪ್ರಚಾರದಲ್ಲಿಯೂ ನೀತಿ ಬೋಧನೆಯಲ್ಲಿಯೂ ತನ್ನ ಕವನಗಾನವನ
ವಿನಿಯೋಗಿಸಿ, ದೇಶಯಾತ್ರಿಕನಾಗಿ ತನ್ನ ಜೀವಮಾನವನ್ನು ಕಳೆದನು. ಆತನ
ಅಂತರಂಗದ ಪರಮಾತ್ಮ ದರ್ಶನ ಪಡೆದಿದ್ದ ಪರಮಾನುಭವಿಯೆಂದು ಹತ್ತಾರು
ಕೃತಿಗಳಿಂದ ತೋರುತ್ತದೆ. ಆ ಭಗವದ್ಭಕ್ತಿಯ ಆ ದಿವ್ಯಾನುಭವಾನಂದದ ಮತ್ತು
ಆ ಧರ್ಮೋತ್ಸಾಹದ ಆವೇಶದಲ್ಲಿ ಹುಟ್ಟಿಬಂದವು ಅವರ ಹಾಡುಗಳು. ಆ ಹಾಡು
ಗಳು ಒಂದು ಲಕ್ಷ ಇಪ್ಪತ್ತೈದು ಸಾವಿರವೆಂದೂ ಇನ್ನೂ ಹೆಚ್ಚೆಂದೂ ಪ್ರವಾದವಿದೆ.
ಪುರಂದರ ದಾಸರ ವೈರಾಗ್ಯವನ್ನೂ ಅವರ ಅದ್ಭುತ ಶಕ್ತಿಗಳನ್ನೂ ಕುರಿತು ಅನೇಕ
ಕಥೆಗಳಿವೆ. ಈ ಕಥೆಗಳನ್ನು ನಂಬುವವರು ನಂಬಬಹುದು. ಅದನ್ನು ನಂಬದಿದ್ದರೂ
ಪುರಂದರ ದಾಸರ ಮಹತ್ತ್ವಕ್ಕೆ ಕುಂದಾಗಲಾರದು. ಅವರ ಕೃತಿಗಳ ಸಂಖ್ಯೆ ಲಕ್ಷೋಪ
ಲಕ್ಷವೆಂದು ಹೇಳುವುದು ಅವರ ಮಹತ್ತ್ವಕ್ಕೆ ಅವಶ್ಯವಲ್ಲ. ಅಂಥ ಮಹಾನುಭಾವರ
ಮಹತ್ತ್ವವು ಸಂಖ್ಯೆಯನ್ನೂ ಗಾತ್ರವನ್ನೂ ಅವಲಂಬಿಸಿದ್ದಲ್ಲ; ಅದ್ಭುತ ಕ್ರಿಯೆ
ಗಳಿಂದಲೂ ಉಂಟಾದದ್ದಲ್ಲ; ಅವರ ಮಹತ್ವ ತೋರಿಬರತಕ್ಕದ್ದು ಅವರ ಕೃತಿಗಳ
ಗುಣದಿಂದ, ಮತ್ತು ಅವರ ಜೀವನದ ವಿಧಾನದಿಂದ. ಅವರ ಕೃತಿಗಳಲ್ಲಿ ತೋರಿ
ಬರುವುದು ನಿಶ್ಚಲವಾದ ದೈವಭಕ್ತಿ ಮತ್ತು ಧರ್ಮಾಸಕ್ತಿ; ಲೋಕಕಾರುಣ್ಯ
ಮತ್ತು ರಾಗದ್ವೇಷ ವಿಮುಖತೆ. ಹೀಗೆ ಅವರು ನಮ್ಮ ದೇಶದ ಮಹರ್ಷಿಪಂಕ್ತಿಯಲ್ಲಿ,
ಮಹಾ ಸಾಧು ತಪಸ್ವಿಗಳ ಪಂಕ್ತಿಯಲ್ಲಿ ಸೇರಿದ್ದಾರೆ. ಈ ಹೊತ್ತು ಇಲ್ಲಿ ನಾವು ವಿಶೇಷ
ವಾಗಿ ಸ್ಮರಿಸಬೇಕಾದದ್ದು ಅವರಿಂದ ಗಾನಕಲೆಗೆ ಆಗಿರುವ ಉಪಕಾರವನ್ನು. ಪುರಂದರ
ದಾಸರು ನಮ್ಮ ವಾಗ್ಗೇಯಕಾರ ಶ್ರೇಣಿಯಲ್ಲಿ ಪ್ರಮುಖರಾಗಿದ್ದಾರೆ. ವಾಗ್ಗೇಯ
ಕಾರರೆಂದರೆ ಮಾತು ಧಾತುಗಳೆರಡನ್ನೂ ನಾದಸೌಂದರ್ಯ ಸೃಷ್ಟಿಯಲ್ಲಿ ಸಮ್ಮೇಳನ
ಮಾಡಿರುವವರು,—ಗಾಯನ ಪ್ರಬಂಧಕರ್ತರು. ಈ ಕ್ಷೇತ್ರದಲ್ಲಿ ಪುರಂದರದಾಸರು
ಗುರುಸ್ಥಾನದಲ್ಲಿದ್ದಾರೆ. ಬಾಲಬೋಧೆಗಾಗಿ ಅವರು "ಲಂಬೋದರ ಲಕುಮಿಕರ"

ಮೊದಲಾದ ಪಿಳ್ಳಾರಿ ಗೀತಗಳನ್ನು ಸುಲಭವಾದ ರಾಗಗಳಲ್ಲಿ ರಚಿಸಿದ್ದಾರೆ. ಇದನ್ನು ಇಲ್ಲಿಯ ಬಾಲಕಿಯರು ಹಾಡಿದ್ದನ್ನು ಈಗತಾನೆ ಕೇಳಿ ಸಂತೋಷಿಸಿದ್ದೇವೆ. ಈ ಜಾತಿಯ ಸಾಹಿತ್ಯ ಅವರದು. ಇನ್ನೂ ಎಷ್ಟಿತ್ತೋ ಅದನ್ನು ತಿಳಿಯುವುದು ಈಗ ಸಾಧ್ಯವಿಲ್ಲ.

ಅವರ ರಚನೆಗಳಲ್ಲಿ ಸಂಗೀತ ಶಾಸ್ತ್ರಾಭ್ಯಾಸಕ್ಕೆ ಉಪಯುಕ್ತವಾದ ಇನ್ನೊಂದು ಜಾತಿ 'ಸುಳಾದಿ' ಎಂಬ ಪ್ರಬಂಧವು. ಇದು ಬಹುಶಃ "ಚತುರ್ದಂಡೀ ಪ್ರಕಾಶಿಕೆ"ಯ "ಸೂಡು" ಎಂದು ಕರೆಯುವ ಪ್ರಬಂಧ ಜಾತಿಯಿದ್ದೀತೋ ಏನೋ! ಕೆಲವರು ಅವಕ್ಕೆ "ಸುಳು ಹಾದಿ", ಸುಲಭವಾದ ದಾರಿ ಎಂದು ಅರ್ಥ ಹೇಳುತ್ತಾರೆ. ಇದು ವಿಚಾರಮಾಡಬೇಕಾದ ವಿಷಯ. ದಿವಂಗತ ಮುತ್ತಯ್ಯ ಭಾಗವತರು ಒಂದು ಸುಳಾದಿ ಹಾಡಿದ್ದನ್ನು ನಾನು ಕೇಳಿದ್ದೇನೆ. ಆ ಪಾಠಕ್ರಮ ಈಗ ರೂಢಿ ತಪ್ಪಿ ಹೋಗಿದೆಯೆಂದು ಅವರು ವಿಷಾದಪಟ್ಟದ್ದೂ ನನಗೆ ನೆನಪಿದೆ.

ಪುರಂದರ ದಾಸರ ಮತ್ತೊಂದು ಕೃತಿಜಾತಿ "ಉಗಾಭೋಗಗಳು." "ಚತುರ್ದಂಡೀ ಪ್ರಕಾಶಿಕೆ"ಯಲ್ಲಿ "ಉದ್ಗ್ರಾಹಕ", "ಆಭೋಗ" ಎಂಬ ಗಾನ ಪ್ರಕಾರಗಳ ಪ್ರಸ್ತಾವವಿದೆ. ನಮ್ಮ ದಾಸರ "ಉಗಾಭೋಗ" ಆ ಪಾರಿಭಾಷಿಕ ಶಬ್ದಗಳ ರೂಪಾಂತರವೇ ?—ಎಂಬುದನ್ನು ಶಾಸ್ತ್ರಜ್ಞರು ವಿಚಾರಿಸಬೇಕಾಗಿದೆ. ಇಂಥ ವಿಚಾರಗಳು ಪ್ರಯೋಗಜ್ಞರಿಗೆ ಸಾಧ್ಯವೇ ಹೊರತು ಕೇವಲ ಪುಸ್ತಕವ್ಯಾಸಂಗಿಗಳಿಗೆ ಸಾಧ್ಯವಾಗತಕ್ಕುವಲ್ಲ. ಉಗಾಭೋಗದ ಗಾಯನ ಕ್ರಮವನ್ನು ಯಥಾವಿಧಿಯಾಗಿ ಕಲಿತವರು ಎಲ್ಲಿದ್ದಾರೆಂದು ಹುಡುಕುತ್ತಿರುವವರಲ್ಲಿ ನಾನೂ ಒಬ್ಬ.

ಕೇವಲ ಸಂಗೀತ ಕಲೆಯ ದೃಷ್ಟಿಯಿಂದ ಪುರಂದರರ ಪ್ರಶಸ್ತಿ ಅವರು ನಮ್ಮ ಸಂಪ್ರದಾಯದ ಮೂಲಕರ್ತರೆಂದು,—ವಿಸ್ತರಣಕರ್ತರೆಂದಲ್ಲ. ಅವರ ರಚನೆ ಸರಳವಾದದ್ದು. ಚಿತ್ರ ವಿಚಿತ್ರ ಸಂಚಾರಗಳುಳ್ಳದ್ದಲ್ಲ. ಹರಿದಾಸ ವರ್ಗದಲ್ಲಿ ಸಂಚಾರ ವಿಶೇಷಗಳನ್ನು ನೋಡಬಯಸುವವರು ಜಗನ್ನಾಥ ದಾಸರಲ್ಲಿಗೇ ಹೋಗಬೇಕು. ಅವರು ತಾಳ ಪ್ರಾಸ ಗತಿಗಳನ್ನು ಜಟಿಲವಾಗಿ ಬೆಳಸಿದರು. ಪುರಂದರ ದಾಸರು ಗೀತ ರಚನೆಯ ಮೂಲದಶೆಯಲ್ಲಿ ಕೆಲಸ ಮಾಡಿದವರು. ಮತ್ತು ಸಾಮಾನ್ಯ ಜನಕ್ಕಾಗಿ ಕೆಲಸ ಮಾಡಿದವರು. ಪ್ರೌಢತೆಯೂ ಕ್ಲಿಷ್ಟತೆಯೂ ಅವರಿಗೆ ದೂರವಾಗಿದ್ದ ಲಕ್ಷಣಗಳು. ಮುಖ್ಯ ಲಕ್ಷ್ಯ ಕಲಾಪ್ರೌಢಿಮೆ ಚಮತ್ಕಾರದಲ್ಲ. ಅದು ಭಕ್ತಿ, ವೈರಾಗ್ಯ, ಜ್ಞಾನ. ಆದದ್ದರಿಂದ ಅವರ ಮಾತಿನ ಸರಣಿ ಜನಸಹಜವಾದದ್ದು ; ಅವರ ವರ್ಣನೆ ಅಲಂಕಾರಗಳು ಜನಕ್ಕೆ ಹಿಡಿಸುವಂತೆ ಸುಲಭವಾದವು ; ಅವರ ರಾಗಯೋಜನೆಯೂ ಹಾಗೆಯೇ ಜನರೂಢಿಯದು. ಅವರ ನೂರಾರು ದೇವರ ನಾಮಗಳು ಒಂದೊಂದೂ ನಾಲ್ಕು ಐದೂ ಚರಣಗಳುಳ್ಳವು. ಕೃತಿ ಅಷ್ಟು ದೀರ್ಘವಾಗಿದ್ದರೂ ಗಾಯಕನಿಗೆ ಆ ಚರಣಗಳ ಬಂಧನದಲ್ಲಿ ವಿವಿಧತೆಯಿಲ್ಲ ; ಒಂದರಂತೆ ಇನ್ನೊಂದಿದೆ. ಆದದ್ದರಿಂದ ಗಾಯಕನಿಗೆ ಪಲ್ಲವಿ, ಅನುಪಲ್ಲವಿ, ಒಂದೇ ಒಂದು ಚರಣ—ಇಷ್ಟು ಮಾತ್ರವೇ ಸಾಕಾಗುತ್ತವೆ. ಅವರೆ ಅವನು ಪ್ರತಿಭಾಸಂಪನ್ನನಾದ ಪಕ್ಷದಲ್ಲಿ. ಈ ಸರಳ ಕೃತಿಗಳ ಆಧಾರದ

ಮೇಲೆ ಮಹಾ ರಾಗಸೌಧಗಳನ್ನು ಕಟ್ಟಿ ಬೆರಗುಪಡಿಸಲು ಅವನಿಗೆ ಅವಕಾಶ ಯಥೇಷ್ಟವಾಗಿರುತ್ತದೆ.

ಪುರಂದರ ದಾಸರ ಅಂಕಿತದಿಂದ ಈಗ ಪ್ರಚಾರದಲ್ಲಿರುವ ಕೃತಿಗಳ ಸಂಖ್ಯೆ ಸಾವಿರಕ್ಕಿಂತ ಕಡಮೆ. ಈ ಐನೂರು ಆರ್‍ನೂರರಲ್ಲಿಯೂ ಸ್ವಾರಸ್ಯ ಒಂದೇ ಮಟ್ಟದಲ್ಲಿಲ್ಲ. ಅವುಗಳಲ್ಲಿ ಇತರರ ಕೈವಾಡವುಳ್ಳವು ಎಷ್ಟೋ ಹೇಳುವುದು ಕಷ್ಟ. ಮೊನ್ನೆ ತಾನೆ ಸ್ನೇಹಿತರೊಬ್ಬರು ಪೇಟೆಯಿಂದ ಒಂದು ಪ್ರತಿ ತರಿಸಿದರಂತೆ. ಅದನ್ನು ಅವರು ತೆರೆದು ನೋಡಿದಾಗ ಭಂಡ ಪದ ಒಂದು ಕಣ್ಣಿಗೆ ಕಾಣಿಸಿತಂತೆ. ಯಾವ ಮಹಾರಾಯ ಅದನ್ನು ಪುರಂದರರ ತಲೆಗೆ ಕಟ್ಟಿದನೋ ! ಇಂಥಾ ಅಸಹ್ಯ ಪ್ರಕ್ಷೇಪಗಳು ಸರ್ವಜ್ಞನ ವಚನಗಳಲ್ಲಿಯೂ ಇವೆ. ಕೆಲವು ದೇವರ ನಾಮಗಳಲ್ಲಿ ಮತಪ್ರಕ್ರಿಯೆ ತುಂಬಿದೆ. ಇನ್ನು ಕೆಲವು ಕೀರ್ತನೆಗಳು ಪೌರಾಣಿಕ ನಾಮಗಳ ಪಟ್ಟಿಗಳಾಗಿವೆ. ಇಂಥವು ಆಯಾ ಮತಸ್ಥರಿಗೆ ಮಾತ್ರ ಪ್ರಿಯವಾಗಬಹುದೇ ಹೊರತು ಸಕಲ ಜನಾದರಣೆಯನ್ನು ಪಡೆಯಲಾರವು. ಇಂಥವನ್ನು ಬಿಟ್ಟು ಕೇವಲ ಮಾನವ ಹೃದಯ ದೃಷ್ಟಿಯಿಂದ,—ಮತಜಿಜ್ಞಾಸುವಾಗದೆ ಜೀವನಕ್ಕೆ ಬಲವನ್ನೂ ಬೆಳಕನ್ನೂ ಹುಡುಕುವವನ ದೃಷ್ಟಿಯಿಂದ,—ವಿಮರ್ಶೆಮಾಡಿ ನೋಡಿದರೆ, ಬೆಲೆಬಾಳುವ ಕೃತಿಗಳು ಹಲವು ನೂರರಷ್ಟು ಉಳಿದಾವು. ಪುರಂದರರು ಮಹಾನುಭಾವರೆನ್ನಲು ಅಷ್ಟುಮಾತ್ರವೇ ಸಾಕಾಗುತ್ತವೆ. ಅವುಗಳ ಸರಳತೆ ವಿಶದತೆ ಸೂಚ್ಯಗ್ರತೆಗಳು ಹೃದಯಸ್ಪರ್ಶಿಯಾಗಿವೆ. ಪುರಂದರರು ಮನುಷ್ಯ ಜೀವನದ ಆಳವನ್ನು ಕಂಡ ಕವಿಗಳೆಂಬುದೂ,—ಪರಮಾನುಭವ ಪಡೆದ ಜ್ಞಾನಿಗಳೆಂಬುದೂ,—ಅವುಗಳಿಂದ ರುಜುವಾತಾಗುತ್ತದೆ.

ಕರ್ಣಾಟಕ ಸಂಗೀತದಲ್ಲಿ ಲಕ್ಷಣ ಭಾಗ ಹೇಗೋ ಲಕ್ಷ್ಯಭಾಗವೂ ಹಾಗೆಯೇ ಬಹು ಪುರಾತನವಾದದ್ದೇ. ನಮ್ಮ ಕನ್ನಡ ಕವಿಗಳಲ್ಲಿ ಬಹು ಪುರಾತನರಾದ ಪಂಪ ರನ್ನರ ಕಾವ್ಯಗಳಲ್ಲಿ ಸಂಗೀತದ ಪ್ರಸಂಗಗಳು ಎಷ್ಟೋ ಇವೆ. ಪುರಂದರ ದಾಸರ ಸಮಕಾಲಿಕನೇ ಆದ ರತ್ನಾಕರವರ್ಣಿ ತನ್ನ "ಭರತೇಶ ವೈಭವ"ದಲ್ಲಿ ಶ್ರೀರಾಗ, ಮಾಳವಶ್ರೀ, ಭೂಪಾಳಿ, ಧನ್ಯಾಸಿ, ಮಲಹರಿ, ದೇಶಾಕ್ಷಿ, ಮಂಗಳ ಕೈಶಿಕಿ—ಮೊದಲಾದ ರಾಗಗಳನ್ನೂ ಅನೇಕ ವಾದ್ಯಗಳನ್ನೂ ಪ್ರಶಂಸೆ ಮಾಡಿದ್ದಾನೆ. "ವೀಣಾ ಸಂಧಿ" ಯೆಂಬುದೇ ಅಲ್ಲಿ ಒಂದು ಅಧ್ಯಾಯ. ಅಷ್ಟೇಕೆ ; ಕನ್ನಡ ಕಾವ್ಯಗಳು ಮೊದಲಿನಿಂದಲೂ ಗೇಯಪ್ರಬಂಧಗಳಾಗಿಯೇ ಬಂದಿವೆ. ಅವುಗಳಿಗೆ ಹಾಡುಗಬ್ಬಗಳೆಂದೇ ಹೆಸರು. ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ, ಸಾಂಗತ್ಯ—ಈ ನಾನಾ ಛಂದಸ್ಸುಗಳು ಹಾಡಿಗಾಗಿಯೇ ಹುಟ್ಟಿದವು. ದಾಸ ಸಾಹಿತ್ಯವನ್ನು ಪರೀಕ್ಷಿಸಿ ನೋಡಿದರೆ ಅದರಲ್ಲಿ ನಾನಾ ತೆರದ ರಾಗಸಂಚಾರಗಳೂ ಚಿತ್ರವಿಚಿತ್ರವಾದ ತಾಳಗತಿಗಳೂ ಕಾಣಬರುತ್ತವೆ. ಈ ವಿಸ್ತಾರವಾದ ನಮ್ಮ ಗೇಯ ಸಾಹಿತ್ಯವನ್ನು ಶಾಸ್ತ್ರಪ್ರಯೋಗಗಳೆರಡನ್ನೂ ಬಲ್ಲ ಗಾಯಕರು ಶೋಧಿಸಿ ನೋಡಬೇಕಾಗಿದೆ. ಈ ವಿಷಯವನ್ನು ಒತ್ತಿಹೇಳುವುದೇ ನನ್ನ ಇಂದಿನ ಮುಖ್ಯೋದ್ದೇಶ.

## 4

## ಸಂಗೀತ ಸಾಹಿತ್ಯಗಳ ಸಂಬಂಧ

ನಾನು ಕೊಂಚ ಮಟ್ಟಿಗೆ ಸಾಹಿತ್ಯದ ಸಂಬಂಧವುಳ್ಳವನು—ಎಂಬುದು ಮಗೆಲ್ಲ ಗೊತ್ತಿದೆ. ಕನ್ನಡ ಸಾಹಿತ್ಯದ ಪ್ರಚಾರಕ್ಕೆ ಸಂಗೀತದ ಸಹಾಯ ತುಂಬ ೕಕಾಗಿದೆ. ರಾಗದ ವಾತಾವರಣವಿಲ್ಲದಿದ್ದಲ್ಲಿ ಕಾವ್ಯದಿಂದ ಸುಲಭವಾಗಿ ರಸಾನುಭವ ಾಗದು. ಮನುಷ್ಯನ ಅಂತರಂಗದಲ್ಲಿ ಪ್ರಕಟನೆಯನ್ನು ಬೇಡುತ್ತಿರುವ ಧ್ವನಿ ಂದಲ್ಲ, ಎರಡು. ಒಂದು ಬುದ್ಧಿಯದು :—ಇದು ಪ್ರಶ್ನೆ, ಉತ್ತರ, ಚರ್ಚೆ, ಶ್ಚಯ—ಈ ತೆರದ ಜ್ಞಾನ ಭಾವನೆಗಳ ರೂಪದಲ್ಲಿರುತ್ತದೆ. ಇದಕ್ಕೆ ಸಾಧಾರಣವಾಗಿ ಾಕ್ಕಿನ ಭಾಷೆ ಸಾಕು. ಎಲ್ಲಿ ವಾಕ್ಕು ಸಾಕಾಗಲಾರದೋ ಅಲ್ಲಿ ಬುದ್ಧಿವ್ಯಾಪಾರವು ಾಹ್ಯರೂಪಕ್ಕೆ ಬಾರದಯೇ ಉಳಿದುಕೊಳ್ಳಬೇಕಾಗುತ್ತದೆ. ನಮ್ಮ ಅಂತರಂಗದ ನ್ನೊಂದು ಧ್ವನಿ ಹೃದಯದ್ದು :—ಇದು ಸಂತೋಷ, ವ್ಯಸನ, ಆಶೆ, ಕೋಪ ೊದಲಾದ ಮನೋಭಾವಗಳ ರೂಪದಲ್ಲಿರುತ್ತದೆ. ಇದಕ್ಕೆ ಬರಿಯ ವಾಕ್ಕಿನ ಾಷೆ ಸಾಲದು. ಅದು ನಾದದ ಭಾಷೆಯ ಜೊತೆಗಾರಿಕೆಯನ್ನು ಬೇಡುತ್ತದೆ. ಈ ೃದಯದ ವ್ಯಾಪಾರವಿಶೇಷವೇ ಸಾಹಿತ್ಯ. ಅದು ಸಂಗೀತವಿಲ್ಲದೆ ಸಾಂಗವಾಗದು. ದ್ದರಿಂದಲೇ ಸಂಗೀತ ಸಾಹಿತ್ಯಗಳನ್ನು ಸರಸ್ವತಿಯು ತನ್ನ ಮಕ್ಕಳಿಗಾಗಿ ತಳೆದಿರುವ ೋಡಿ ಹಾಲುಬುಗ್ಗೆಗಳೆಂದು ಪೂರ್ವಿಕರು ವರ್ಣಿಸಿರುವುದು. ಶಾಸ್ತ್ರಗ್ರಂಥಕ್ಕೆ ಚನಭಾಷೆ ಸಾಕಾದೀತು. ಕಾವ್ಯಕ್ಕೆ ಅದು ಸಾಕಾಗದು ; ಕಾವ್ಯವು ಛಂದಸ್ಸಿನ ಂಗ ಧೋರಣೆಯನ್ನೂ ಭಾವಾನುಗುಣವಾದ ರಾಗವನ್ನೂ ಭಾವಸಂಜ್ಞೆಯಾದ ಂಗಾಭಿನಯವನ್ನೂ ಅಪೇಕ್ಷಿಸುತ್ತದೆ. ನಾಟಕವು ಹಾಗೆ ಅಂಶತ್ರಯಾತ್ಮಕವಾದದ್ದ ಂದಲೇ ಅದು ಸಾಹಿತ್ಯದಲ್ಲಿ ರತ್ನಪ್ರಾಯವೆನಿಸಿದೆ. ಹೀಗೆ ಸಾಹಿತ್ಯದ ಸವಿಯ ಾಸ್ವಾನುಭವಕ್ಕೆ ಸಂಗೀತದ ವಾತಾವರಣವಿಲ್ಲದಿದ್ದರೆ ಆಗದು. ನಮ್ಮ ಜನಕ್ಕೆ ಾವ್ಯ ರುಚಿಸಿ, ಅವರಲ್ಲಿ ಸಾಹಿತ್ಯಪ್ರೀತಿ ಬೆಳೆಯಬೇಕಾದರೆ ಸಂಗೀತವು ಸಾಹಿತ್ಯದ ಹಾಯಕ್ಕೆ ಒದಗಿ ಬರಬೇಕು. ಕನ್ನಡ ದೇಶದಲ್ಲಿ ಹಿಂದೆ ಒಂದಾನೊಂದು ಕಾಲದಲ್ಲಿ ಮಕಕಲೆ ಪ್ರಚುರವಾಗಿತ್ತು. ಗಮಕವೆಂದರೆ ಕಾವ್ಯವಾಚನದಲ್ಲಿ ಸಂಗೀತವನ್ನು ಮ್ಮೇಳನಮಾಡುವ ಕಲೆ. ಈ ಕಲೆ ತೆಲುಗರಲ್ಲಿ ಈ ಹೊತ್ತಿಗೂ ಜೀವಂತವಾಗಿದೆ. ಂಧ್ರ ಕಾವ್ಯಪಠನದಲ್ಲಿ ಗಾನಸಮ್ಮೇಳನವಿರುವುದರಿಂದ ಆಂಧ್ರರಲ್ಲಿ ಕಾವ್ಯಾಭಿರುಚಿ ನ್ನಾಗಿ ಹರಡಿಕೊಂಡಿದೆ. ಕನ್ನಡಿಗರಲ್ಲಿ ಹಾಗೆ ಕಾವ್ಯ ಪ್ರಚಾರವಾಗಬೇಕಾದರೆ ನ್ನಡ ಸಾಹಿತ್ಯಕ್ಕೆ ಸಂಗೀತ ನೆರವಾಗಿ ಬರಬೇಕು.

ಸಂಗೀತಕ್ಕೆ ಸಾಹಿತ್ಯದ ಸಹಾಯವೂ ಅವಶ್ಯವೆಂಬ ಮಾತನ್ನು ನಾನು ಹೇಳ ೇಕಾಗಿಲ್ಲ. ಸಂಗೀತಗಾರರು ಅದನ್ನು ತಕರಾರಿಲ್ಲದೆ ಒಪ್ಪಿಕೊಂಡಾರೆಂದು ನನಗೆ

ಭರವಸೆಯಿದೆ. ಇಂಥ ಕಲಾಶಾಲೆಯಲ್ಲಿ ಸಾಹಿತ್ಯ ಪಾಠಕ್ಕಾಗಿ ತಕ್ಕಮಟ್ಟಿಗೆ ವ್ಯವಸ
ಮಾಡುವುದು ಅವಶ್ಯವೆಂದು ತೋರುತ್ತದೆ.

ಸಂಗೀತವೆಂದರೆ ಹೃದಯ ಸ್ಪಂದನ. ಕಾವ್ಯವೆಂದರೂ ಹಾಗೆಯೇ. ನಿಮ
ರಾಗ ನಮ್ಮ ಮನಸ್ಸಿನಲ್ಲಿ ಒಂದು ಭಾವವನ್ನೆಬ್ಬಿಸಬೇಕು, ಅಥವಾ ನಮ್ಮ ಮನಸ್ಸಿನಲ್ಲಿ
ರುವ ಒಂದು ಭಾವಕ್ಕೆ ಅದು ಪ್ರತಿಧ್ವನಿ ಕೊಡಬೇಕು. ಈ ಎರಡು ಕೆಲಸಗಳಲ್ಲಿ
ಒಂದಾದರೂ ನಿಮ್ಮ ಗಾನದಿಂದ ಆಗದಿದ್ದರೆ ನೀವು ಪಟ್ಟ ಪ್ರಯಾಸ ನಿರರ್ಥಕವೆ
ಆಗುತ್ತದೆ. ಎದೆ ಮಿಡಿಸಲಾರದ ನಾದದ ಗದ್ದಲದಲ್ಲಿ ಎಂಥ ಸ್ವರಸಂಯೋಜನ
ಗಳಿದ್ದರೆ ಏನು ? ಸ್ವರ ಕಲ್ಪನೆ ಎಂಥದಿದ್ದರೂ ಭಾವ ಪ್ರಚೋದನೆಗೆ ಸಾಧಕ ಮಾತ್ರವೆ
ಹೊರತು ಅದೇ ಪರಮಾರ್ಥವಲ್ಲ. ಗಾಯಕನ ಸ್ವರ ವಾದ, ಪಿಟೀಲುಗಾರ
ಸಂವಾದ, ಮೃದಂಗಕಾರನ ಅನುವಾದ—ಇವು ಅಲೆಯಲೆಯಾಗಿ ಕಿವಿಯ ಮೇಲ
ಬೀಳುತ್ತಿದ್ದರೆ ಒಂದು ಸುಖದ ಅನುಭವವಾಗುವುದು ನಿಜ. ಅದು ಕರ್ಣಾನಂದ
ಅದಕ್ಕಿಂತ ಮೇಲಿನದು ಜೀವಾನಂದ. ಹೊರಗಣ ನಾದತರಂಗದಿಂದ ಒಳಗೆ ಭಾವ
ತರಂಗವೇಳಬೇಕು. ತ್ಯಾಗರಾಜರ “ ಎಂದುರೋ ಮಹಾನುಭಾವುಲು ”. ದೀಕ್ಷಿತರ
“ ಮಾಮವ ಪಟ್ಟಾಭಿರಾಮ ”, ಪುರಂದರ ದಾಸರ “ ನಾ ನಿನ್ನ ಧ್ಯಾನದೊಳಿರಲು ”
ಕನಕದಾಸರ “ ತನು ನಿನ್ನದು ಜೀವನ ನಿನ್ನದು ”—ಇಂಥ ಕೃತಿಗಳನ್ನು ನೆಮ್ಮದಿ
ಕೆಡದಂತೆ ಮಿತವಾದ ಸ್ವರಪ್ರಸ್ತಾರವಿಟ್ಟು ಹಾಡಿದಾಗ ಕೇಳಿದವನಿಗೆ ಆಗುವುದ
ಕರ್ಣಾನಂದ ಮಾತ್ರವಲ್ಲ, ಆತ್ಮಾನಂದ. ಆ ನಾದ ಕಿವಿಯನ್ನು ಮುಟ್ಟಿ ತೇಲಿ
ಹೋಗುವುದಿಲ್ಲ ; ಅದು ಜೀವದೊಳಕ್ಕಿಳಿದು ಅಲ್ಲಿಂದ ಕಣ್ಣಿನಲ್ಲಿ ಧಾರೆಯಾಗಿ ಹೊರ
ಹರಿಯುತ್ತದೆ. ಅಂಥಾದ್ದು ಸಂಗೀತ.

ಒಂದೊಂದು ರಾಗದಲ್ಲೂ ನೂರು ಬಗೆಯ ಸ್ವರಯೋಜನೆ ಸಾಧ್ಯವಿರಬಹುದು
ಆದರೆ ಆ ನೂರೂ ಮೇಲ್ಮಟ್ಟದ ಸೊಗಸಲ್ಲ ; ಸೊಗಸು ಕೆಲವು ಸ್ವರ ಕಲ್ಪನೆಗಳಲ್ಲಿ
ಹೆಚ್ಚು, ಕೆಲವದರಲ್ಲಿ ಕಡಮೆ ; ಕೆಲವದರಲ್ಲಿ ಇರಲೇ ಇರದು. ಭಾಷಾ ನಿಘಂಟುವಿನಲ್ಲಿ
ಒಂದು ವಸ್ತುವಿಗೆ ಹತ್ತು ಹೆಸರುಗಳು ಸಿಕ್ಕುತ್ತವೆ. ಅವೆಲ್ಲ ಒಂದೇ ಮೇಲಂತಸ್ತಿನ
ಸೊಗಸಲ್ಲ ; ಒಂದಾನೊಂದು ಸಂದರ್ಭಕ್ಕೆ ಒಂದು ಹೆಸರು ಹೊಂದಿದಂತೆ ಅದೇ
ಅರ್ಥವುಳ್ಳ ಇನ್ನೊಂದು ಹೆಸರು ಹೊಂದಲಾರದು. ಆ ಹತ್ತು ಮಾತುಗಳಲ್ಲಿ
ವಾಕ್ಚತುರನಾದವನು ತನಗೆ ಬೇಕಾದ ಮಾತನ್ನು ವಿವೇಚನೆಯಿಂದ ಆರಿಸಿಕೊಳ್ಳುತ್ತಾನೆ
ಒಳ್ಳೆಯ ಸಂಗೀತಗಾರನೂ ಹಾಗೆಯೇ ಸಾಧ್ಯವಿರುವ ಹತ್ತಾರು ಸ್ವರ ಸಂಗತಿಗಳಲ್ಲಿ
ಸೊಗಸಾದ ನಾಲ್ಕನ್ನು ಆರಿಸಿಕೊಳ್ಳುತ್ತಾನೆ. ರಾಗಗಳ ವಿಷಯದಲ್ಲಿಯೂ ಹಾಗೆಯೇ
ರಾಗವು ರಂಜಕವಾಗಿರಬೇಕು. ಈ ರಂಜನಶಕ್ತಿ ಎಲ್ಲ ರಾಗಗಳಲ್ಲಿಯೂ ಒಂದೇ ಪರಿ
ಮಾಣದಲ್ಲಿಲ್ಲ. ಎಷ್ಟೋ ರಾಗಗಳು ರಚನೆಯಲ್ಲಿ ರಾಗಗಳಾಗಿ, ಪರಿಣಾಮದಲ್ಲಿ
ರಾಗಶಕ್ತಿ ವಿಹೀನವಾಗಿರುತ್ತವೆ. ರಂಜಕ ಗುಣವನ್ನು ನೋಡಿ ರಾಗವನ್ನು ಚುನಾಯಿಸ
ಬೇಕು.

5

## ನಮ್ಮ ಇಂದಿನ ಕರ್ತವ್ಯ

ಪುರಂದರ ದಾಸರು ಪ್ರಾರಂಭಿಸಿದ ಕಾರ್ಯ ಈಗ 150–200 ವರ್ಷಗಳಿಂದ ಹಿಂದಕ್ಕೆ ಬಿದ್ದಿದೆ. ಅದನ್ನು ಪುನರುಜ್ಜೀವನಪಡಿಸಿ ಮುಂದಕ್ಕೊಯ್ಯುವುದು ನಮ್ಮ ಇಂದಿನ ಕರ್ತವ್ಯವಾಗಿದೆ. ಹರಿದಾಸರುಗಳು ಮಾತ್ರವೇ ಅಲ್ಲ; ನಿಜಗುಣರು. ಸರ್ಪಭೂಷಣರು ಮೊದಲಾದ ಶಿವಶರಣರೂ ರತ್ನಾಕರ ಮೊದಲಾದ ಜೈನರೂ ಸಹ ಗೇಯಸಾಹಿತ್ಯದ ಮೂಲಕ ಧರ್ಮಕ್ಕೂ ಸಂಸ್ಕೃತಿಗೂ ಅಪಾರವಾದ ಸೇವೆ ಸಲ್ಲಿಸಿದ್ದಾರೆ. ಆ ಸಾಹಿತ್ಯವೆಲ್ಲ ಈಗ ತಿರುಪೆಗೆ ಬರುವ ಬೀದಿ ದಾಸಯ್ಯಗಳ ಪಾಲಾಗಿದೆ. ನಮ್ಮ ಸಂಗೀತ ವಿದ್ವಾಂಸರ ದೃಷ್ಟಿ ಆ ಕಡೆ ಹೋಗಿಲ್ಲ. ಏನಿದ್ದರೂ ತ್ಯಾಗರಾಜ—ದೀಕ್ಷಿತ, ದೀಕ್ಷಿತ—ತ್ಯಾಗರಾಜ : ಇಷ್ಟರಲ್ಲಿ ನಿಂತಿದೆ ಅವರ ಕಲಾವಂತಿಕೆ. ತ್ಯಾಗರಾಜರಿಗೆ ಹಿಂದೆ ಸಂಗೀತವಿರಲಿಲ್ಲವೆ ? ಆ ಗಾನ ಪದ್ಧತಿ ಅಂದಿನ ಜನಕ್ಕೆ ಸಂತೋಷಜನಕವಾಗಿರಲಿಲ್ಲವೆ ? ಇಂದಿಗೂ ನಮಗೆ ಅತ್ಯಂತ ಮೋಹಕವಾಗಿರುವ ಕ್ಷೇತ್ರಯ್ಯನ ರಾಗಸೂಕ್ಷ್ಮ ವಿಲಾಸಗಳು ತ್ಯಾಗಯ್ಯನವರಿಗಿಂತ ಹಿಂದಿನವು. ತ್ಯಾಗರಾಜ ದೀಕ್ಷಿತರುಗಳ ಕೀರ್ತಿ ಹೊಸ ರಾಗಗಳನ್ನು ನಿರ್ಮಿಸಿದ್ದಲ್ಲ, ಹಳೆಯ ರಾಗಗಳಿಗೆ ಹೊಸ ಮೆರಗುಗಳನ್ನು ಕೊಟ್ಟಿದ್ದು. ಶ್ರೀರಾಗ, ಶಂಕರಾಭರಣಗಳೂ ಕಾಂಬೋದಿ ಕಲ್ಯಾಣಿಗಳೂ ಅವರ ಕಾಲಕ್ಕೆ ಎಷ್ಟೋ ಹಿಂದಿನಿಂದ ಇದ್ದವು. ಆ ಪುರಾತನ ರಾಗಗಳಿಂದ ಅವರು ನೂತನ ರುಚಿಗಳನ್ನು ಹೊರಡಿಸಿದರು. ಸಂಗೀತವೆಂಬುದು ನಾದ ಸೌಂದರ್ಯವಷ್ಟೆ ? ಎಲ್ಲ ಸೌಂದರ್ಯದಲ್ಲಿಯೂ ಆಕರ್ಷಣ ಶಕ್ತಿಯು ಒಂದಂಶ ನವೀನತೆ. ನಮ್ಮ ಕಿವಿ ಮನಸ್ಸುಗಳಿಗೆ ನೀವು ಹೇಗಾದರೂ ಮಾಡಿ ನವನವೀನವಾದ ನಾದ ವಿಲಾಸವನ್ನು ದೊರಕಿಸುತ್ತಿರಬೇಕು. ಅದು ಹಳೆಯ ರಾಗದ ಹೊಸ ಶೈಲಿಯಿಂದಾದರೂ ಸರಿ, ಹೊಸದೊಂದು ರಾಗದಿಂದಲೇ ಆದರೂ ಸರಿ. ಅದರ ವಿಧಾನ ನಿಮ್ಮ ಅಧಿಕಾರಕ್ಕೆ ಸೇರಿದ್ದು : ಅನುಭವದ ಹಕ್ಕು ನಮ್ಮದು. ನಿಮ್ಮ ಸ್ವಾನುಭವ ಚೆನ್ನಾದಷ್ಟು ನಮ್ಮ ಭಾಗ್ಯ.

ಹಳೆಯದು ಹೊಸತನದಿಂದ ನಲಿಯುವುದೇ ರಮಣೀಯತೆ.

ಕ್ಷಣ ಕ್ಷಣಂ ನವ್ಯತೆಯಾಂತು ರಂಜಿಪಾ ।
ಗುಣಪ್ರಕಾರಂ ರಮಣೀಯತಾಕರಂ ॥

—ಮಾಘ

ನಮಗೆ ಶಾಸ್ತ್ರ ಬೇಕು. ಸಂಪ್ರದಾಯ ಬೇಕು. ಅವುಗಳ ಜೊತೆಗೆ ನೂತನ ಕೌತುಕವೂ ಬೇಕು. ಆ ಮೂರರ ಸಮರಸ ಸಂಮೇಳನವೇ ಸೌಂದರ್ಯ ಸಂಪತ್ತು. ಕವಿತ್ವದ ಶೈಲಿಗಳು ನೂರಾರಿರಬಹುದು ; ಗಾಯನದ ಶೈಲಿಗಳೂ ಹಾಗೆ ನೂರಾರಾಗಬಹುದು. ಸೌಂದರ್ಯದ ರೂಪಗಳಿಗೂ ಮಾಧುರ್ಯದ ರೀತಿಗಳಿಗೂ ಸಂಖ್ಯಾಮಿತಿಯನ್ನು ಗೊತ್ತುಮಾಡುವವರಾರು ? ಪ್ರತಿಭೆ ಹೊಸಹೊಸದಾದಂತೆ ಶೈಲಿ

ಹೊಸಹೊಸದಾಗುತ್ತದೆ. ನಮ್ಮ ಸಾಮಾನ್ಯ ಸಂಗೀತಗಾರರು ಎಲ್ಲ ಕೃತಿಗಳಿಗ ಒಂದೇ ಶೈಲಿಯೇ ಯುಕ್ತವೆಂದು ತಿಳಿದಿರುವಂತೆ ತೋರುತ್ತದೆ. ಎಲ್ಲದರಲ್ಲಿಯು ಅವರು ಸ್ವರ ಸಂಗತಿಗಳ ಜಡೆಯನ್ನು ಹೆಣೆಯಬೇಕು ; ಎಲ್ಲ ಕಡೆಯೂ ಸರಿಗಮಗ ಸುರಿಮಳೆಯಾಗಬೇಕು ; ಅದೇ ಸಂಗೀತ—ಎಂದು ಅವರ ಭಾವನೆಯಿರುವಂತೆ ತೋರ ತ್ತದೆ. ತ್ಯಾಗರಾಜರು ಹೇಗೆ ಹೊಸ ಸಂಪ್ರದಾಯವನ್ನು ಸೃಷ್ಟಿಮಾಡಿದರೋ ಹಾ ಹೊಸಹೊಸ ಸಂಪ್ರದಾಯಗಳನ್ನು ಸೃಷ್ಟಿಸಬಲ್ಲ ಪ್ರತಿಭೆ ನಮಗೆ ಈಗ ಅವಶ ವಾಗಿದೆ. ಇಂಥಾ ಪ್ರತಿಭೆಯ ಉತ್ಪತ್ತಿಗೆ ಇರುವುದೊಂದೇ ಮಾರ್ಗ. ಅದ ಸಾಧನೆ—ಅಭ್ಯಾಸ—ಪ್ರಯೋಗ. ಕನ್ನಡ ಸಾಹಿತ್ಯದ ನಾನಾ ಪ್ರಬಂಧಗಳಲ್ಲಿ ಗಾಯಕರು ಹೊಸಹೊಸ ಪ್ರಯೋಗಗಳನ್ನು ಮಾಡಿ, ಹೊಸಹೊಸ ಸೊಗಸುಗಳನ್ ಹೊರಕ್ಕೆ ತರಬೇಕಾಗಿದೆ. ಈ ಮಹಾ ಕಾರ್ಯವನ್ನು ಕೈಕೊಳ್ಳಲು ನಮ್ಮ ವಿಜಯ ಸಂಗೀತ ಕಲಾ ಶಾಲೆ ತಕ್ಕ ಸ್ಥಳವೆಂದು ನನಗೆ ನಂಬಿಕೆಯಿದೆ.

ಕನ್ನಡ ಕೀರ್ತನೆ ದೇವರ ನಾಮಗಳಿಗೆ ವಿದ್ವತ್ಸಂಗೀತದಲ್ಲಿ ಮೊದಲು ಮನ್ನಣ ಸಂಪಾದಿಸಿಕೊಟ್ಟವರು ಬಿಡಾರಂ ಕೃಷ್ಣಪ್ಪನವರು. ಅವರ ದೇವರ ನಾಮದ ಹಾಡಿ ಯಿಂದ ಅವರು ಮದರಾಸನ್ನು ಗೆದ್ದರು. ನನ್ನ ಮಿತ್ರರಾದ ವೈಣಿಕ ವಿದ್ವಾನ ಎಲ್. ರಾಜಾರಾಯರವರು ಕನ್ನಡ ಕೃತಿಗಳಿಗಾಗಿ ಮಾಡಿರುವ ಪರಿಶ್ರಮವನ್ನು ಈ ಸಂದರ್ಭದಲ್ಲಿ ಪ್ರಸ್ತಾವಿಸುವುದು ಉಚಿತವಾಗಿದೆ. ಅವರು ಸುಮಾರು 40 ಹರಿದಾಸ ಕೃತಿಗಳಿಗೂ 50 ಶಿವಶರಣ ಕೃತಿಗಳಿಗೂ ಸ್ವರ ಸಂಯೋಜನೆ ಮಾಡಿ ಕನ್ನಡ ಸಾಹಿತ ಪರಿಷತ್ತಿನ ಮೂಲಕ ಪ್ರಕಟಪಡಿಸಿದ್ದಾರೆ ; ಮತ್ತು ಹತ್ತಾರು ಸಭೆಗಳಲ್ಲಿ ಕನ್ನಡ ಕೃತಿಗಳನ್ನು ಹೃದಯಂಗಮವಾಗಿ ಹಾಡಿ ತೋರಿಸಿದ್ದಾರೆ.

ಈ ವಿಜಯ ಕಲಾ ಶಾಲೆಯಲ್ಲಿಯೂ ಕನ್ನಡ ಕೃತಿಗಳ ಪಾಠ ನಡೆಯುತ್ತಿದೆ ಶ್ರೀ ನಾರಾಯಣ ಸ್ವಾಮಿ ಭಾಗವತರು ದೇವರ ನಾಮಗಳ ಹಾಡಿಕೆಗೆ ಸುಂದರವಾದ ಶೈಲಿಯನ್ನು ಅಳವಡಿಸಿದ್ದಾರೆ. ಅವರಲ್ಲಿ ನನ್ನ ಪ್ರಿಯ ಮಿತ್ರರಾದ ಶ್ರೀಮಾನ್ ಸಿ. ಕೃಷ್ಣರಾಯರವರೂ ಇನ್ನು ಕೆಲವರು ಸ್ನೇಹಿತರೂ ದೇವರ ನಾಮಗಳ ಹಾಡಿಕ ಯನ್ನು ಕಲಿಯುತ್ತಿದ್ದಾರೆ. ಶ್ರೀ ಕೃಷ್ಣರಾಯರವರು ನಮ್ಮ ಸಮಾಜದಲ್ಲಿ ಗಣ್ಯರು ಅನೇಕ ಸಾರ್ವಜನಿಕ ಸಂಸ್ಥೆಗಳಿಗಾಗಿ ಕೆಲಸ ಮಾಡಿರುವವರು. ಇಂಥವರು ಕನ್ನಡ ಗಾನ ವ್ಯಾಸಂಗಿಗಳಾಗಿರುವುದು ನಮಗೆಲ್ಲ ತುಂಬ ಪ್ರೋತ್ಸಾಹಕರವಾಗಿದೆ. ವಿಜಯ ಕಲಾ ಶಾಲೆಯವರು ಈ ತಮ್ಮ ಕಾರ್ಯಶಾಖೆಯನ್ನು ಬೆಳಸಿ ಮುಂದುವರಿಸ ಬೇಕೆಂದು ನನ್ನ ಕೋರಿಕೆ.

ಸಂಗೀತಗಾರನಲ್ಲಿರಬೇಕಾದ ಸಿದ್ಧತೆಗಳು ಮುಖ್ಯವಾಗಿ ಎರಡು : (1) ಸಾಧನೆ (2) ಕಲ್ಪನ ಮನೋಧರ್ಮ. ಬರಿಯ ಚಿಟ್ಟೆ ಸ್ವರಗಳನ್ನು ಉರುಹಚ್ಚಿದ ಮಾತ್ರ ದಿಂದ ಸಂಗೀತ ಸಿದ್ಧಿಸಲಾರದು. ಮನೋಧರ್ಮವೆಂಬುದೇ ಪ್ರತಿಭೆ; ಅದೇ ಕಲ್ಪನ ಶಕ್ತಿ. ಅದು ಸಹಜವಾಗಿ, ವರಪ್ರಸಾದವಾಗಿ ಬರತಕ್ಕದ್ದು. ಸಾಧನೆಯಾದರೋ

ಪ್ರಯಾಸದಿಂದ ಸಾಧ್ಯವಾಗತಕ್ಕದ್ದು. ಸಾಧನೆಯೆಂದರೆ ಅಭ್ಯಾಸ. ಕನ್ನಡ ಸಂಗೀತಗಾರರಲ್ಲಿ ಈಗ ಕಡಮೆಬಂದಿರುವುದು ಸಾಧನೆಯ ಭಾಗದಲ್ಲಿ ಎಂದು ನನ್ನ ಭಾವನೆ. ನಮ್ಮವರು ತಮಿಳು ಸಾಧಕರಂತೆ ಶ್ರಮಪಡಲಾರರು. ಅಕಾರ ಸಾಧನೆ ಓಂಕಾರ ಸಾಧನೆಗಳಿಂದ ಕಂಠ ಶೋಧನೆಯಾಗಿ "ಪಲುಕುಬಡಿ" ಅಥವಾ ನುಡಿತ ಸ್ಫುರಾಗುತ್ತದೆ. ಅದೇ ಗಮಕದ ಸೊಗಸು. ಈ ಅಭ್ಯಾಸ ಸಾಗಿದಂತೆ ಪ್ರತಿಭೆಯೂ ಪ್ರಕಾಸಪೊಂದುತ್ತದೆ. ಸಾಧನೆ ಬೆಳೆದಂತೆ ಮನೋಧರ್ಮ; ಮನೋಧರ್ಮ ಬೆಳೆದಂತೆ ಸಾಧನೆ;—ಹೀಗೆ ಅವೆರಡೂ ಅವಿನಾ ಸಂಬಂಧಿಗಳು. ನಮ್ಮ ಸಂಗೀತ ಗಾರರು ಈ ತತ್ತ್ವವನ್ನು ಲಕ್ಷ್ಯಕ್ಕೆ ತಂದುಕೊಂಡರೆ ಕರ್ಣಾಟಕದ ಪೂರ್ವದ ಸಂಗೀತದ ಯಶಸ್ಸು ಮರಳಿ ಕಳೆಗೂಡಿ ಬಂದೀತು.

## 6

## ಲಲಿತ ಶೈಲಿ

ಇನ್ನೊಂದು ಸಲಹೆಯನ್ನು ಅರಿಕೆಮಾಡಬೇಕೆಂದು ನನಗನ್ನಿಸುತ್ತದೆ. ಇಲ್ಲಿಯ ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲಿ ಬಹು ಮಂದಿ ಸಂಗೀತ ಕಲಿಯುತ್ತಿರುವುದು ಆತ್ಮ ಸಂತೋಷಕ್ಕಾಗಿಯೇ ಹೊರತು ಜೀವನ ವೃತ್ತಿಗಾಗಿ ಅಲ್ಲ. ಇಂಥವರಿಗೆ ಉಪಯೋಗ ವಾಗತಕ್ಕದ್ದು ಕಸಬುದಾರಿ ರೀತಿಯ ಸಂಗೀತವಲ್ಲ. ಇವರು ಏನಿದ್ದರೂ ದೈವಪೂಜಾ ಕೈಂಕರ್ಯಗಳಿಗೂ ಕಾವ್ಯಪಾರಾಯಣಕ್ಕೂ ತತ್ತ್ವಧ್ಯಾನಕ್ಕೂ ಮದುವೆ ಮುಂಜಿ ಮೊದಲಾದ ಶುಭ ಸಮಯಗಳ ಪ್ರಸಂಗಕ್ಕೂ ಮನಶ್ಶಾಂತಿಗೂ ಸಂಗೀತವನ್ನು ಉಪಯೋಗಿಸಿಕೊಳ್ಳುವವರು. ಅದು ಹಾಗಿರುವುದೇ ಸರಿ ತಾನೆ! ಸಂಗೀತ ಸಾಹಿತ್ಯಗಳು ಬಡವರ ಐಶ್ವರ್ಯ. ಎಂಥವನಿಗೂ ಸಾಹುಕಾರರ ಸಹಾಯವಿಲ್ಲದೆ ಸುಖ ತಂದುಕೊಡಬಲ್ಲ ಶಕ್ತಿ ಸಂಗೀತ ಸಾಹಿತ್ಯಗಳಿಗಿರುತ್ತದೆ. ಜೀವನದಲ್ಲಿ ಒಂದು ಮಧುರ ಕಾಂತಿಯನ್ನು ಹರಡಬಲ್ಲ ಸಂಗೀತ ಸಾಹಿತ್ಯಗಳು ಪ್ರತಿಯೊಂದು ಮನೆಗೂ ಬೇಕಾದ ಸಾಮಗ್ರಿ. ನಮ್ಮ ಸಂಗೀತ ಬೋಧಕರು ಈ ಸಂದರ್ಭವನ್ನು ಮನಸ್ಸಿನಲ್ಲಿರಿಸಿ ಕೊಂಡು ಇಂಥಾ ಅಭ್ಯಾಸಿಗಳಿಗೆ ತಕ್ಕಂಥ ಸರಳ ಶೈಲಿಯನ್ನು,—ಆಡಂಬರ ಮಾಡದೆ ನೆಮ್ಮದಿ ಕೊಡುವ ಲಲಿತ ಶೈಲಿಯನ್ನು—ಅವರಿಗೆ ಕಲಿಸಬೇಕು. ಹೇಗೆ ಎಲ್ಲ ತೆರದ ಪ್ರಬಂಧಗಳಿಗೂ ಒಂದೇ ಗಾನ ಶೈಲಿ ಸರಿಪೊಂದಲಾರದೋ ಹಾಗೆಯೇ ಎಲ್ಲ ವ್ಯಾಸಂಗಿಗಳಿಗೂ ಒಂದೇ ಶೈಲಿಯು ತೃಪ್ತಿಕರವಾಗಿ ಅನ್ವಯಿಸಲಾರದು. ಈ ದೃಷ್ಟಿ ಯಿಂದಲೂ ನಮಗೆ ಹೊಸ ಲಲಿತ ಗಾಯನ ಶೈಲಿ ಬೇಕಾಗಿದೆ. ನಮ್ಮ ವಿಜಯ ಕಲಾ ಶಾಲೆಯ ವಿದ್ವಾಂಸರುಗಳು ಇದನ್ನು ಪರ್ಯಾಲೋಚಿಸಬೇಕೆಂದು ಬೇಡುತ್ತೇನೆ.

## 7

## ರೇಡಿಯೋ ಸೇವೆ

ಕನ್ನಡ ಸಂಗೀತದ ಇಂದಿನ ಪರಿಸ್ಥಿತಿ ಉಲ್ಲಾಸಕರವಾಗಿಲ್ಲ. ಹುಟ್ಟುಕನ್ನಡಿಗರಾದ ಸಂಗೀತಗಾರರೂ ಸಹ ಕನ್ನಡ ಹಾಡು ಹಾಡಬೇಕೆಂದರೆ ಮೂರು–ನಾಲ್ಕು ಘಂಟೆಗಳ

ಕಛೇರಿಯಲ್ಲಿ ಅದನ್ನು ಕೊನೆಯ ಮೂರು ನಿಮಿಷಗಳ ಚುಟಕೆಯಲ್ಲಿ ಓಡಿಸಿ ಮುಗಿಸ್ತಾರೆ. ಏಳೇ ಅಕ್ಷರದ ಪಲ್ಲವಿ ಬೇಕಾದರೂ "ಇನ್ನವ್–ದಯ–ವಿಲ್ಲೆಯೋ" ಎಂಬ ತಮಿಳೇ ಅವರಿಗೆ ಪ್ರಿಯವಾಗುತ್ತದೆ. ಇದು ನಮ್ಮ ಹಾಡುವವರ ಅಭಿಮಾನ

ಇನ್ನು ಕೇಳುವವರದೋ ಎಂದರೆ, ಕನ್ನಡ ನಾಡಿನಲ್ಲಿ ಅರ್ಧ ಪಾಲಿಗೆ ಕರ್ನಾಟ ಸಂಗೀತವೆಂಬುದರ ನಿಜಸ್ವರೂಪವೇ ತಿಳಿಯದು. ಮೈಸೂರಿನಿಂದಾಚೆ—ಧಾರವಾ ಉತ್ತರ ಕನ್ನಡ ಪ್ರಾಂತಗಳಲ್ಲೆಲ್ಲಾ ಮಹಾರಾಷ್ಟ್ರ ಗವಾಯಿಗಳದೇ ಸಂಗೀತ. ಪುರಂದ ದಾಸರ ಹಾಡುಗಳನ್ನು ಅವರು ಹಿಂದುಸ್ತಾನಿ ಧಾಟಿಯಲ್ಲೇ ಹಾಡಬೇಕು. ನಮ ಶಂಕರಾಭರಣ ಕೇದಾರ ಗೌಳಗಳು ಅವರ ಕಿವಿಗೆ ರೂಢಿಯಿಲ್ಲ.

ಇಂಡಿಯ ಸರಕಾರದ ರೇಡಿಯೋ ಇಲಾಖೆಯಲ್ಲಿಯೇ ಕರ್ನಾಟಕ ಸಂಗೀತದ ವಿಚಾರದಲ್ಲಿ ವಿಚಕ್ಷಣೆ ತಕ್ಕಷ್ಟಿರುವಂತೆ ತೋರುವುದಿಲ್ಲ. ಆ ಇಲಾಖೆಗೆ ಕನ್ನ ಸಂಗೀತ ಒಬ್ಬ ಬಡ ನೆಂಟ. ಅಗ್ರಭೋಜನ ತಮಿಳು ತೆಲುಗುಗಳಿಗೆ. ಮಿಕ್ಕ ತಂಗಳ ಕನ್ನಡಕ್ಕೆ. ಗ್ರಾಮೊಫೋನ್ ಕಂಪನಿಗಳಿಗಂತೂ ಕನ್ನಡ ಲೆಕ್ಕಕ್ಕಿಲ್ಲ. ಮೈಸೂರ ಧಾರವಾಡಗಳಿಂದ ಕೇಳಬರುವ ರೆಕಾರ್ಡ್ ಸಂಗೀತ ಹತ್ತರಲ್ಲೊಂಬತ್ತು ಹಿಂದಿ ತಮಿಳ ತೆಲುಗುಗಳದು. ಕನ್ನಡದಲ್ಲಿ ಘನವಿದ್ವಾಂಸರ "ರೆಕಾರ್ಡು" ಕೂಡ ಇಲ್ಲ. ರೇಡಿಯೋ ಹಾಡಿಕೆಗೂ ಗ್ರಾಮೊಫೋನ್ ರೆಕಾರ್ಡಿಗೂ ಭಾರಿ ಕನ್ನಡ ಗಾಯಕ ವಿದ್ವಾಂಸರನ್ನು ಪ್ರೋತ್ಸಾಹಿಸಿ ಒಡಂಬಡಿಸಲು ಬೇಕಾಗುವ ದ್ರವ್ಯಾನುಕೂಲ ನಮ್ಮ ಎರಡು ಕನ್ನ ರೇಡಿಯೋ ಕೇಂದ್ರಗಳಿಗೂ ಇಲ್ಲವೆಂದು ತೋರುತ್ತದೆ. ಕನ್ನಡ ಕೃತಿಗಳನ್ನು ಹಾಡು ವುದರಲ್ಲಿ ನಿಪುಣತೆ ತೋರಿಸುವವರಿಗೆ ವಿಶೇಷ ಬಹುಮಾನಗಳನ್ನು ನೀಡಬೇಕು ಕನ್ನಡ ಕೇಂದ್ರಗಳಲ್ಲಿ ಹಾಡುಗಾರರು ಹತ್ತರಲ್ಲಿ ಐದಕ್ಕೆ ಕಡಮೆಯಿಲ್ಲದಷ್ಟಾದರೂ ಕನ್ನಡದಲ್ಲಿಯೇ ಹಾಡಬೇಕೆಂದು ವಿಧಾಯಕವಾಗಬೇಕು. ಈ ರೀತಿಗಳಲ್ಲಿ ರೇಡಿಯೋ ಇಲಾಖೆ ವಿಶೇಷ ಪ್ರಯತ್ನ ನಡಸಿದಲ್ಲದೆ ಅದರ ಕನ್ನಡ ಸಂಗೀತ ಸೇವೆ ಯಶಸ್ಕರ ವಾಗಲಾರದು.

8.

## ಉಪಸಂಹಾರ

ಎಲ್ಲಿ ಶಕ್ತಿಯೂ ಸಂಪತ್ತೂ ಉಂಟೋ ಅಲ್ಲಿ ಜವಾಬ್ದಾರಿಯೂ ಉಂಟು. ಈ ವಿಜಯ ಕಲಾಶಾಲೆ ಇದುವರೆಗೆ ಮಾಡಿರುವ ಕೆಲಸದ ವಿಚಕ್ಷಣೆಯಿಂದ ಇನ್ನೂ ಹೆಚ್ಚಿನದನ್ನು ಅದರಿಂದ ನಿರೀಕ್ಷಿಸುವ ಹಕ್ಕು ಜನಕ್ಕುಂಟಾಗಿದೆ. ಕರ್ನಾಟಕ ಸಂಗೀತದ ಪುನರುಜ್ಜೀವನಕ್ಕಾಗಿ ನಡೆಯಬೇಕಾಗಿರುವ ಪ್ರಯತ್ನಗಳನ್ನು ಕೈಕೊಳ್ಳಲು ಇರಬೇಕಾದ ವಿದ್ವತ್ತಿನ ಬಲವೂ ಪ್ರತಿಭೆಯ ಬಲವೂ ಉತ್ಸಾಹದ ಬಲವೂ ಈ ಕಲಾ ಶಾಲೆಯಲ್ಲಿ ತೋರಿಬರುತ್ತಿವೆ. ಅದಕ್ಕೆ ಧನದ ಬಲವೂ ಸೇರಬೇಕೆಂಬುದು ಎಲ್ಲರಿಗೂ ತಾನಾಗಿ ತೋರುವ ವಿಷಯ. ಈ ಸಂಸ್ಥೆಯ ಚಾಲಕರು ಪ್ರಯತ್ನಪಟ್ಟಲ್ಲಿ ನಮ್ಮ ಮಹಾ

ಜನರಿಂದಲೂ ಸರಕಾರಗಳಿಂದಲೂ ಮ್ಯುನಿಸಿಪಲ್ ಕಾರ್ಪೊರೇಷನ್ನಿನಿಂದಲೂ ಸಹಾಯ ದೊರೆತೀತೆಂದು ನನಗೆ ಭರವಸೆಯಿದೆ. ಅಂಥಾ ಸಹಾಯವನ್ನು ಕೇಳುವುದಕ್ಕೆ ಇರಬೇಕಾದ ಅಧಿಕಾರ ಯೋಗ್ಯತೆಯನ್ನು ಅದು ಈಗಾಗಲೇ ಸಂಪಾದಿಸಿಕೊಂಡಿದೆ ಎಂಬುದು ದೊಡ್ಡ ಸಂಗತಿ. ಇದಕ್ಕಾಗಿ ನಮ್ಮ ಭಾಗವತರ ಸ್ನೇಹಿತರೂ ಶಿಷ್ಯರೂ ಸಂತೋಷ ತುಂಬಿದವರಾಗಿದ್ದಾರೆ. ಈ ಸಂಸ್ಥೆ ಇಷ್ಟು ಯಶಸ್ವಿಯಾಗಿ ಬೆಳೆದಿರುವುದಕ್ಕಾಗಿ ನಾನು ಭಾಗವತರವರನ್ನೂ ಅವರ ಸಹೋದ್ಯೋಗಿಗಳನ್ನೂ ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ಶಾಲೆಯವರು ತ್ಯಾಗರಾಜೋತ್ಸವ, ದೀಕ್ಷಿತರ ಉತ್ಸವ, ಪುರಂದರ ದಾಸರ ಉತ್ಸವಗಳನ್ನು ನಡಸಿದಂತೆ, ಕ್ಷೇತ್ರಜ್ಞ ಮೊದಲಾದ ಇತರ ವಾಗ್ಗೇಯಕಾರರ ಉತ್ಸವಗಳನ್ನೂ ನಡೆಸಿ, ಆ ಮೂಲಕ ಮಹಾಜನರಿಗೆ ಸಂಗೀತ ಸುಧೆಯ ಸಮಾರಾಧನೆ ನಡಸಬೇಕೆಂದು ನನ್ನ ಆಶೆ. ಭಗವಂತನು ಈ ಸಂಸ್ಥೆಯ ಉಪಾಧ್ಯಾಯರುಗಳಿಗೂ ವಿದ್ಯಾರ್ಥಿನಿ ವಿದ್ಯಾರ್ಥಿಗಳಿಗೂ ಸಮಸ್ತ ಶುಭಗಳನ್ನೂ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

[ಜನಪ್ರಗತಿ : ಫೆಬ್ರುವರಿ 21, 1954]

# ಕ್ಷೇತ್ರಜ್ಞ*

ಕ್ಷೇತ್ರಜ್ಞನು ಕವಿ,—ಗಾನಕವಿ,—ಶೃಂಗಾರ ಗಾನಕವಿ. ಸಂದರ್ಭದ ಸೊಗಸು ನಾದದ ಸೊಗಸು, ಭಾವದ ಸೊಗಸು—ಈ ಮೂರು ಸೊಗಸುಗಳು ಆತನ ರಚನೆಯ ಏಕೀಭವಿಸಿವೆ. ಅದರ ಮಹಿಮೆಯಿಂದ ಆತನ ಕೀರ್ತಿ ಆತನ ಭಾಷೆಯಾದ ತೆಲುಗಿ ಗಡಿಸೀಮೆಗಳನ್ನು ದಾಟಿ ಹೊರಗೆ ಬಹುದೂರ ವ್ಯಾಪಿಸಿದೆ. ತಮಿಳು ಸೀಮೆಯವರ ತಮ್ಮ ಪ್ರಾಂತದವರಾದ ತ್ಯಾಗರಾಜರು, ದೀಕ್ಷಿತರು, ಶಾಮಶಾಸ್ತ್ರಿಗಳು—ಈ ಮೂವರನ್ನು ಕರ್ಣಾಟಕ ಸಂಗೀತದ ತ್ರಿಮೂರ್ತಿಗಳೆಂದು ವರ್ಣಿಸುವುದುಂಟು ಕ್ಷೇತ್ರಜ್ಞನು ಅವರಿಗಿಂತ ಯಾವ ಭಾಗದಲ್ಲಿಯೂ ಕೊಂಚವೂ ಕಡಮೆಯಾದವನ ವೆಂದು ನನ್ನ ಅಭಿಪ್ರಾಯ. ಒಂದು ಭಾಗದಲ್ಲಿ ಅವನು ಅವರಿಗಿಂತ ವಿಶೇಷ ಆ ಮೂವರೂ ಭಗವದ್ಭಕ್ತಿಪ್ರಧಾನರು; ಕ್ಷೇತ್ರಜ್ಞನು ಶೃಂಗಾರ ರಕ್ತಿಪ್ರಧಾ ನಾದವನು. ರಕ್ತಿಯು ಭಕ್ತಿಗೆ ಸಮಾನವಾದೀತೆ? ಈ ಪ್ರಶ್ನೆಯನ್ನು ಸ್ಥಳಾವಕಾ ದೊರೆತರೆ ಮುಂದೆ ನೋಡೋಣ. ರಕ್ತಿಯೂ ಭಕ್ತಿಯ ಒಂದು ಮೆಟ್ಟಲೆಂದು,— ಒಂದು ಸಾಧನವೆಂದು,—ನನ್ನ ಅಭಿಪ್ರಾಯ. ಕೇವಲ ಗಾನಕಲೆಯ ದೃಷ್ಟಿಯಿಂದ ನೋಡಿದರೆ ಕ್ಷೇತ್ರಜ್ಞನು ಅವರಂತೆ ಅಗ್ರಪಂಕ್ತಿಯವನು,—ಅವರಿಗಿಂತ ಮೊದಲ ಯವನು.

ಕ್ಷೇತ್ರಜ್ಞನ ಜೀವಿತ ವೃತ್ತಾಂತಕ್ಕೆ ಆಧಾರಸಾಮಗ್ರಿ ಗಟ್ಟಿಯಾದದ್ದು ಏನು ದೊರೆಯುವಂತಿಲ್ಲ. ಆತನ ನಿಜವಾದ ಹೆಸರು ಕೂಡ ಗೊತ್ತಿಲ್ಲ. ಅಂಥಾ ಮನುಷ ನೊಬ್ಬನಿದ್ದನೆಂಬುದನ್ನು ಮಾತ್ರ ಎಲ್ಲರೂ ಅಂಗೀಕರಿಸಿದ್ದಾರೆ. ಹಾಗೆಯೇ ಇನ್ನೆರಡ ಸಂಗತಿಗಳು ನಿರ್ವಿವಾದವಾಗಿವೆ; (1) ಆತನು ಆಂಧ್ರನೆಂಬುದು. (2) ಆತನ ಕಾಲ ಸುಮಾರು ಕ್ರಿಸ್ತಶಕ ಹದಿನೇಳನೆಯ ಶತಾಬ್ದವೆಂಬುದು. ಇನ್ನು ಕೆಲವಂ ಗಳನ್ನು ನೋಡೋಣ.

## ಸ್ಥಳ

ಕ್ಷೇತ್ರಜ್ಞನ ವಾಸಸ್ಥಳ ಆಂಧ್ರದೇಶದ ಕೃಷ್ಣಾ ಜಿಲ್ಲೆಯ ಮುವ್ವ ಎಂಬ ಗ್ರಾಮ ಅಲ್ಲಿಗೆ ಸುಮಾರು ಒಂದೆರಡು ಮೈಲಿ ದೂರದಲ್ಲಿರುವ ಕೂಚಿಪುಡಿ ಎಂಬ ಹಳ್ಳಿ

* ಪ್ರಜಾಮತ, ದೀಪಾವಳಿ ವಿಶೇಷಾಂಕ, 1963.

ನಾಟ್ಯಾಭಿನಯಕ್ಕೆ ಹೆಸರಾದದ್ದು. ಅಲ್ಲಿಯ ಭಾಗವತದ ಆಟ ಈಗಲೂ ಪ್ರಸಿದ್ಧವಾಗಿದೆ. ಆ ಪ್ರದೇಶ ವಿದ್ವದ್ರಸಿಕರಿಗೆ ಬಹುಕಾಲದಿಂದ ಪ್ರಸಿದ್ಧವಾಗಿದ್ದದ್ದೆಂದು ತೋರುತ್ತದೆ. ಕ್ಷೇತ್ರಯ್ಯನ ವಾತಾವರಣವೇ ಹೀಗೆ ಗಾನಸಾಹಿತ್ಯ ಕಲ್ಪನೆಗೆ ಅನುಕೂಲವಾಗಿದ್ದದ್ದು. ಆ ರಸಿಕ ಸನ್ನಿವೇಶಕ್ಕೆ ಕೇಂದ್ರಪ್ರಾಯವಾಗಿದ್ದದ್ದು ಮುವ್ವ ಗ್ರಾಮದ ಗೋಪಾಲಕೃಷ್ಣ ದೇವಾಲಯ. ಆ ಗುಡಿ ವಿನಾಯಕನದೋ ವೀರಭದ್ರನದೋ ಮಾರುತಿಯದೋ ಮಾರಮ್ಮನದೋ ಆಗದೆ ಶೃಂಗಾರಮೂರ್ತಿಯಾದ ಗೋಪಾಲನವಾಗಿದ್ದದ್ದು ರಸಿಕಪ್ರಪಂಚದ ಭಾಗ್ಯ. ಕ್ಷೇತ್ರಜ್ಞನ ಪದಗಳಲ್ಲಿ ಮಾತನಾಡುವ ನಾಯಿಕಾಮಣಿಯರು ಮುವ್ವ ಗೋಪಾಲನು ತಮ್ಮ ನಾಯಕನೆಂದು ಹೇಳಿಕೊಂಡಿದ್ದಾರೆ. ಹೀಗೆ ಕ್ಷೇತ್ರಯ್ಯನಿಗೆ ಸ್ಫೂರ್ತಿಸ್ಥಾನ ಮುವ್ವ ಗೋಪಾಲಸನ್ನಿಧಿ.

ಮುವ್ವಪುರಿಯ ಗುಡಿ ಈಗಲೂ ಇದೆ. ಕಟ್ಟಡ ಶಿಥಿಲವಾಗುತ್ತಿರುವಂತೆ ತೋರುತ್ತದೆ. ಅದನ್ನು ಭದ್ರಪಡಿಸಿ,—ಆದರೆ ನವನಾಗರಿಕತೆಯ ಅಲಂಕಾರ ಚೇಷ್ಟೆಗಳನ್ನು ತಾರದೆ,—ಅದರ ಹಿಂದಿನ ಕಾಲದ ಒಳ್ಳೆಯ ಸ್ಥಿತಿಯಲ್ಲಿ ಅದನ್ನು ಉಳಿಸಿಕೊಟ್ಟರೆ ಸಂಗೀತ ಸಾಹಿತ್ಯ ಭಕ್ತರಿಗೂ ಚರಿತ್ರಕಾರರಿಗೂ ದೊಡ್ಡ ಉಪಕಾರವಾಗುತ್ತದೆ.

## ಕಾಲ

ಕ್ಷೇತ್ರಜ್ಞನ ಕೃತಿಯೆಂದು ಅಂಗೀಕೃತವಾದ “ವೇಡುಕತೋ ನಡಚುಕೊನ್ನ ಪಟಿರಾಯುಡೇ” ಎಂಬ ಪದದಲ್ಲಿ ತಾನು ಮಧುರೆಯ ತಿರುಮಲ ನಾಯಕನಿಂದಲೂ ತಂಜಾವೂರಿನ ರಘುನಾಥ ನಾಯಕ ವಿಜಯರಾಘವ ನಾಯಕರುಗಳಿಂದಲೂ ಬಹುಮಾನಿತನಾದವನೆಂದು ಆತ ಹೇಳಿಕೊಂಡಂತೆ ಇದೆ. ಆ ಇಬ್ಬರು ತಂಜಾವೂರು ನಾಯಕರುಗಳ ಕಾಲ ಕ್ರಿಸ್ತಶಕ ಸುಮಾರು 1623–33, 1633–73 ಎಂದು ಗೊತ್ತಾಗಿದೆ. ಹೀಗೆ ಕ್ಷೇತ್ರಜ್ಞನು ಪುರಂದರ ದಾಸರಿಗಿಂತ (1550–64) ಈಚಿನವನು: ತ್ಯಾಗರಾಜರಿಗಿಂತ (1759–1847) ಹಿಂದಿನವನು.

ಕ್ಷೇತ್ರಜ್ಞನು ಬ್ರಾಹ್ಮಣನಂತೆ. ಆತನ ತಂದೆ-ತಾಯಿ ಮೊದಲಾದ ಬಂಧು ಬಳಗಗಳ ಹೆಸರು ಯಾವುದೂ ಗೊತ್ತಿಲ್ಲ. ಆತನಿಗೆ ಮಡದಿ ಮಕ್ಕಳಿದ್ದರೋ ಇಲ್ಲವೋ ಗೊತ್ತಿಲ್ಲ. ಆತನ ವಂಶಿಕರೆಂದು ಹೇಳಿಕೊಳ್ಳುವ ಕುಟುಂಬಗಳು ಒಂದೆರಡು ಮುವ್ವ ಪ್ರಾಂತದಲ್ಲಿವೆಯಂತೆ. “ವೇಡುಕತೋ ನಡಚುಕೊನ್ನ” ಎಂಬ ಕಾಂಭೋಜಿ ರಾಗದ ಪದದಲ್ಲಿಯ.—

ಪಿಡುಮೂಡು ತಲರಾನುಂಚಿ । ಇಂದುನ್ನ ಕಾಣಾಚಟ ।
ಗೂಡುಕೊನಿ ಮಾ ಮುವ್ವ । ಗೋಪಾಲುಡಾ ವಿಭುಡು ॥

—ಎಂಬ ವಾಕ್ಯದಿಂದ ಮುವ್ವ ಗೋಪಾಲಸ್ವಾಮಿ ಹತ್ತು (ಅಥವಾ ಇಪ್ಪತ್ತೊಂದು ತಲತಲಾಂತರಗಳಿಂದ ಕ್ಷೇತ್ರಜ್ಞನಲ್ಲಿ ಬಚ್ಚಿಟ್ಟುಕೊಂಡಿದ್ದವನೆಂದು ಅರ್ಥ ಬರುತ್ತದ ಗೋಪಾಲ ಭಕ್ತಿಯೂ ಗಾನಪ್ರಾವೀಣ್ಯವೂ ಕ್ಷೇತ್ರಜ್ಞನಿಗೆ ವಂಶಪರಂಪರೆಯಿಂದ ಲಭ್ಯವಾಗಿತ್ತೆಂದು ಇದರ ಸೂಚನೆಯಾಗಿದ್ದರೂ ಇರಬಹುದು.

ಕ್ಷೇತ್ರಜ್ಞನಿಗೆ ಆತನ ತಂದೆ-ತಾಯಿ ಇಟ್ಟ ಹೆಸರು ವರದಯ್ಯನೆಂದು ಒಂದ ಕಥೆ. ಕ್ಷೇತ್ರಜ್ಞನ ಕೃತಿಗಳಲ್ಲಿ ಕೆಲವು ಕಂಚಿ ವರದನನ್ನು ಸ್ಮರಿಸುತ್ತವೆ. ಕಂಚಿಯೆಂಬ ಪೂರ್ವಪದವಿಲ್ಲದೆ "ವರದ" ಎಂದೂ ಸ್ಮರಣೆಯಿದೆ. "ವರದ" ಎಂಬುದ ಭಗವಂತನ ಹೆಸರು,—ಸಾಮಾನ್ಯವಾಗಿ ಬಳಕೆಯಲ್ಲಿರುವ ಹೆಸರು. ನಮ್ಮ ದಾಸರು—

ವರದಾ, ನೀ ಪೊರೆಯೆಂದು ।
ಕರೆಯಲಾಕ್ಷಣ ಬಂದು ಪೊರೆದೇ ॥

ಎಂದು ಹಾಡಿದ್ದಾರೆ. ಇಷ್ಟರಿಂದ ಆ ದಾಸರ ಹೆಸರು "ವರದ" ಎಂದು ಸಿದ್ಧವಾಗು ವುದಿಲ್ಲ. ಹಾಗೆಯೇ ಕ್ಷೇತ್ರಜ್ಞನ ಮೊದಲ ಹೆಸರು "ವರದ" ಎಂಬುದು ಖಂಡಿತ ವೆನಿಸಲಾರದು. ಆದರೆ ಅದು ಅಲ್ಲವೇ ಅಲ್ಲ ಎಂಬ ಹಟವಾದಕ್ಕೂ ಕಾರಣವಿಲ್ಲ ಸದ್ಯಃ ನಾವು ಅವನನ್ನು ಕ್ಷೇತ್ರಜ್ಞ, ಕ್ಷೇತ್ರಯ್ಯ, ಕ್ಷೇತ್ರಿಯ ಎಂದೇ ಕರೆಯೋಣ

## ಹೆಸರು

"ಕ್ಷೇತ್ರಜ್ಞ" ಎಂಬ ಮಾತು ಜನದ ರೂಢಿಯಲ್ಲಿರುವ ನಾಮಕರಣ ಶಬ್ದಗಳ ಪೈಕಿ ಸೇರಿದ್ದಲ್ಲ. ಆ ಹೆಸರಿರುವವರನ್ನು ಆಂಧ್ರಪ್ರದೇಶದಲ್ಲಿಯಾಗಲಿ ಮತ್ತೆಲ್ಲಿಯಾಗಲಿ ಕಂಡದ್ದಿಲ್ಲ. ಅದು ಅಪೂರ್ವವಾದ ಹೆಸರು. ಹುಟ್ಟಿನಿಂದ ವರದಯ್ಯನೆನ್ನಿಸಿಕೊಂಡಿದ್ದ ಮನುಷ್ಯನು ಮಹಾಭಕ್ತನಾಗಿ ನೂರಾರು ಕ್ಷೇತ್ರ ತೀರ್ಥಗಳಿಗೆ ಯಾತ್ರೆ ಹೋಗಿ ಸರ್ವದಾ ಕ್ಷೇತ್ರವಾಸಿಯಾಗಿದ್ದನಾದದ್ದರಿಂದ ಅವನಿಗೆ ಕ್ಷೇತ್ರಯ್ಯ. ಕ್ಷೇತ್ರಜ್ಞ ಎಂದು ಮೊದಲಾಗಿ ಹೆಸರು ಬಂತೆಂದು ಒಂದು ಐತಿಹ್ಯ.

ಯಾವ ಗೇಯಕವಿತೆಗಳನ್ನು ನಾವು ಇಂದು ಕ್ಷೇತ್ರಜ್ಞ ಪದಗಳೆಂದು ಅಂಗೀ ಕರಿಸಿದ್ದೇವೋ ಆ ಕವಿತೆಗಳ ಸುಂದರ್ಭ ಭಾವಗಳನ್ನು ನೋಡಿದರೆ ಅವುಗಳ ಕರ್ತೃವಿಗೆ "ಕ್ಷೇತ್ರಜ್ಞ" ಎಂಬ ಹೆಸರು ಅನ್ವರ್ಥವಾಗಿ ಸಲ್ಲುತ್ತದೆ ಎಂದು ಸಿದ್ಧವಾಗುತ್ತದೆ

ಭಗವದ್ಗೀತೆಯ ಹದಿಮೂರನೆಯ ಅಧ್ಯಾಯವು ಕ್ಷೇತ್ರ ಕ್ಷೇತ್ರಜ್ಞರನ್ನು ಕುರಿತದ್ದು. ಅಲ್ಲಿ—

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥

"ಈ ಶರೀರವೇ ಕ್ಷೇತ್ರ; ಇದರ ಸ್ವಭಾವವನ್ನು ಅರಿತವನೇ ಕ್ಷೇತ್ರಜ್ಞ."

ಕ್ಷೇತ್ರವೆಂದರೆ ಸಾಮಾನ್ಯವಾಗಿ ಬೇಸಾಯದ ಭೂಮಿ,—ಜಮೀನು. ಮನುಷ್ಯ ದೇಹವು ಸಂಸಾರ ಸತ್ಯದಭೂಮಿ. ಅದರ ಸ್ವಭಾವವೆಂದರೆ ಅಂಗಾಂಗಗಳು, ಇಂದ್ರಿಯಗಳು. ಮನಸ್ಸು. ಇವೆಲ್ಲ ಸೇರಿ ಮಾಡುವ ರಂಪುರಗಳೆಗಳು, ರಾಗದ್ವೇಷಗಳು, ಲೋಭಮತ್ಸರಗಳು,—ಈ ನಾನಾ ಪ್ರಕಾರದ ಜೀವಾವಸ್ಥೆಗಳೂ ಜೀವಚೇಷ್ಟಿತಗಳೂ ಜೀವಪರಿಣಾಮಗಳೂ ಕ್ಷೇತ್ರಾಂಶ. ಯಾರು ಈ ಕ್ಷೇತ್ರಗತಗಳಾದ ದೇಹಜೀವ ಸಂಬಂಧಗಳನ್ನು ಚೆನ್ನಾಗಿ ಬಲ್ಲನೋ ಅವನು ಕ್ಷೇತ್ರಜ್ಞ. ನಮ್ಮ ಕವಿ ಅಂಥವನು —ಹೃದಯವ್ಯಾಪಾರಮರ್ಮಸರ್ವಜ್ಞ.

## ಕೃತಿ

ಕ್ಷೇತ್ರಜ್ಞ ಎಲ್ಲಿ ವಿದ್ಯಾಭ್ಯಾಸಮಾಡಿದನೋ. ಗುರುವು ಯಾರೋ ತಿಳಿಯುವಂತಿಲ್ಲ. ಆತನ ಕಸಬು ಯಾವುದೋ, ಹೇಗೆ ಜೀವಿಕೆ ಸಂಪಾದಿಸಿಕೊಂಡನೋ ತಿಳಿಯುವಂತಿಲ್ಲ. ಮೇಲೆ ಉದಾಹರಿಸಿದ "ವೇಡುಕತೋ...ವಿಟರಾಯುಡೇ" ಎಂಬ ಪದದಿಂದ ಆತನಿಗೆ ರಾಜಾಶ್ರಯ ದೊರೆಯಿತೆಂದು ಗೊತ್ತಾಗುತ್ತದೆ. ಆದರೆ ಅದು ಅವನು ಪ್ರಸಿದ್ಧಿಗೆ ಬಂದ ಮೇಲೆ ದೊರೆತದ್ದು. ಅದು ಬರುವವರೆಗೂ ಆತ ಬದುಕಿದ್ದು ಹೇಗೆ? ನನ್ನ ಊಹೆ ಹೀಗೆ: ಆ ಕಾಲದಲ್ಲಿ ನಮ್ಮ ದೇಶದಲ್ಲಿ ಜನಕ್ಕೆ ಜೀವನದ ಚಿಂತೆ ಈಗಿನಷ್ಟು ಕಠಿನವಾಗಲು ಕಾರಣವಿರಲಿಲ್ಲ. ಅದು ನೆಮ್ಮದಿಯ ಯುಗ. ಭೂವ್ಯವಸಾಯ ಆಗ ವಿಸ್ತಾರವಾಗಿತ್ತು. ಮಳೆಬೆಳೆ ಕಾಲಕಾಲಕ್ಕೆ ನಡೆದರೆ ದೇಶವೆಲ್ಲ ಸುಭಿಕ್ಷವಾಗಿರುತ್ತಿತ್ತು. ಮತ್ತು ಆ ಕಾಲದಲ್ಲಿ ವಿದ್ವಜ್ಜನರಿಗೆ ಸಾಮಾನ್ಯ ಜನರಿಂದ ಮನ್ನಣೆ ಸಂಭಾವನೆಗಳು ಸುಲಭವಾಗಿ ಸಿಕ್ಕುತ್ತಿದ್ದುವು. ಎಲ್ಲರೂ ಸ್ವಲ್ಪದರಿಂದ ಸಂತುಷ್ಟರಾಗುವ ಮನಸ್ಸುಳ್ಳವರಾಗಿದ್ದರು. ಒಟ್ಟಿನಲ್ಲಿ ಅದು ಐಶ್ವರ್ಯದ ಕಾಲವಾಗದೆ. ಸಾಹಸದ ಕಾಲವೂ ಆಗದೆ. ನೆಮ್ಮದಿಯ ಕಾಲವಾಗಿತ್ತು: ಮನಸ್ತೃಪ್ತಿಯ ಕಾಲವಾಗಿತ್ತು. ಕ್ಷೇತ್ರಜ್ಞನಿಗೆ ಪಿತ್ರಾರ್ಜಿತವಾಗಿ ಬಂದ ಭೂಸ್ವತ್ತು ಅಷ್ಟಿಷ್ಟು ಇದ್ದಿರಬಹುದು. ಅದರ ಜೊತೆಗೆ ಸಂಗೀತಗಾರನಾಗಿಯೋ ಬೋಧಕನಾಗಿಯೋ ಒಂದಿಷ್ಟು ಸಂಪಾದಿಸಿಕೊಂಡಿರಬಹುದು. ಅವನ ಕವಿತೆಯ ವಿಷಯ ಲಕ್ಷಣವನ್ನು ನೋಡಿದರೆ ಅವನು ಸುಖ ವಸತಿಯಲ್ಲಿದ್ದವನೆಂದು ತೋರುತ್ತದೆ. ಅವನ ಕೃತಿಗಳಲ್ಲೆಲ್ಲಿಯೂ ಅನ್ನ ವಸ್ತ್ರ ಚಿಂತೆಯ ಸೂಚನೆಯಿಲ್ಲ. ಧನಪ್ರಪಂಚದ ಕಷ್ಟ ಕಾರ್ಪಣ್ಯಗಳ ಸ್ಮರಣೆಯಿಲ್ಲ. ಅವನಿಗಿದ್ದ ಕಷ್ಟಕಾರ್ಪಣ್ಯಗಳೆಂದರೆ ಪ್ರಣಯ ಪ್ರಪಂಚದವು.

ಅವನು ಚೆನ್ನಾಗಿಯೇ ವಿದ್ಯಾವ್ಯಾಸಂಗ ಮಾಡಿದವನಾಗಿರಬೇಕು. ಅವನ ಭಾಷಾ ಶೈಲಿ ಅಧಿಕಾರಧೋರಣೆಯನ್ನು ತೋರಿಸುತ್ತದೆ. ಮಾತುಗಳು ಸಲಿಗೆಯ ಬಳಕೆಯ ಮಾತುಗಳೇ ಆದರೂ ಅವನ ಸಂಸ್ಕೃತಾಂಧ್ರ ಪ್ರಯೋಗಗಳು ಸಾಮಾನ್ಯ ಜನದೊಡನೆ ಮಾತನಾಡುವ ವಿದ್ವಾಂಸನ ಪ್ರಯೋಗಗಳು. ಅವನು ಪಾಂಡಿತ್ಯವನ್ನು ಪ್ರದರ್ಶಿಸಿಲ್ಲ. ಆದರೆ ಪಾಂಡಿತ್ಯವಿಲ್ಲದವನಲ್ಲ. ಅದನ್ನು ಲೋಕಾರ್ಥವಾಗಿ ಹೇಗೆ ಉಪಯೋಗಿಸ

ಬೇಕೋ ಹಾಗೆ ಮಿತವಾಗಿ ಹಿತವಾಗಿ ಉಪಯೋಗಿಸಿದ್ದಾನೆ. ಆ ಕಾಲದಲ್ಲಿ—ಯೂರೋಪಿನ ನಾಗರಿಕತೆ ನಮ್ಮಲ್ಲಿ ಕಾಲೂರುವ ಮುನ್ನ—ಸಾಮಾನ್ಯವಾಗಿ ಬ್ರಾಹ್ಮಣ ಜನಾಂಗದವರೆಲ್ಲ ಒಂದಷ್ಟು ವಿದ್ವಾಂಸರಾಗಿಯೇ ಇರುತ್ತಿದ್ದರು. ಕ್ಷೇತ್ರಜ್ಞನು ಕಾವ್ಯ ನಾಟಕಾಲಂಕಾರ ಛಂದಸ್ಸುಗಳಲ್ಲಿ ಕೃತಪರಿಶ್ರಮನಾಗಿದ್ದವನೆನ್ನಲು ಸಂದೇಹವಿಲ್ಲ.

ಸಂಗೀತವನ್ನು ಆತ ಎಲ್ಲಿ— ಯಾರಲ್ಲಿ—ಕಲಿತನೋ ತಿಳಿಸುವ ಸೂಚನೆಯಿಲ್ಲ. ಯಾರೋ ಒಬ್ಬ ಯೋಗಿ ಆತನಿಗೆ ಗೋಪಾಲಮಂತ್ರವನ್ನು ಉಪದೇಶಿಸಿದನೆಂದೂ ಆ ಮಂತ್ರಪುರಶ್ಚರಣೆಯ ಪ್ರಭಾವದಿಂದ ಕ್ಷೇತ್ರಜ್ಞನಿಗೆ ಕವಿತ್ವದ ಸ್ಫೂರ್ತಿ ಬಂತೆಂದೂ ಒಂದು ಕಥೆಯುಂಟು. ಕವಿತ್ವದಲ್ಲಿ ಅಂತಃಸ್ಫೂರ್ತಿಗೆ ಸ್ಥಾನವುಂಟು ; ಅದು ಪ್ರಥಮ ಸ್ಥಾನವೆಂದೂ ಎಲ್ಲರೂ ಒಪ್ಪಬಹುದು. ಆ ಸ್ಫೂರ್ತಿ ತಾನೇತಾನಾಗಿ ಬರುತ್ತದೆ,—ಭಗವದ್ವರವಾಗಿ ಬರುತ್ತದೆ ; ಪೂರ್ವಜನ್ಮದ ಸುಕೃತಫಲವಾಗಿ ಬರುತ್ತದೆ. ತಿಣಿಕಿ, ಬೆವರಿ, ಗ್ರಂಥಪ್ರಯಾಸ ಮಾಡಿಕೊಂಡರೆ ಅದು ಬರುತ್ತದೆಂಬ ಖಾತರಿಯಿಲ್ಲ— ಹೀಗೆಂಬುದನ್ನು ಒಪ್ಪಬಹುದು. ಆದರೆ ಸ್ಫೂರ್ತಿಯಷ್ಟೇ ಸಾಕೆ ? ಸ್ಫೂರ್ತಿಯ ಕೆಲಸಕ್ಕೆ ಒಂದು ಮನೋಬುದ್ಧಿಗಳ ಸಿದ್ಧತೆಯಿರಬೇಡವೆ ? ಕಾವ್ಯಾಭ್ಯಾಸಂಗ, ಶಾಸ್ತ್ರ ಶಿಕ್ಷಣ, ಲೋಕಾನುಭವ—ಇವು ಕವಿಗಿರಬೇಕಾದ ಪೂರ್ವಸಿದ್ಧತೆಗಳು. ಕ್ಷೇತ್ರಜ್ಞನ ಕೃತಿಯಲ್ಲಿ ಈ ಮೂರು ಬಗೆಯ ಲಕ್ಷಣಗಳೂ ಚೆನ್ನಾಗಿ ಕಾಣಬರುತ್ತವೆ. ಸಂಗೀತದ ಜೊತೆಗೆ ಕ್ಷೇತ್ರಜ್ಞನು ನಾಟ್ಯಾಭಿನಯಸಂಪ್ರದಾಯಗಳನ್ನೂ ಚೆನ್ನಾಗಿ ಸ್ವಾಧೀನಪಡಿಸಿಕೊಂಡಿದ್ದವನೆಂದೂ ತೋರಿಬರುತ್ತದೆ. ಆ ಶಿಕ್ಷಣವಾದದ್ದೆಲ್ಲಿ ? ಹೇಗೆ ? ನಮ್ಮ ಪೂರ್ವಕವಿಗಳ ಸಮಾಚಾರವೇ ಹೀಗೆ. ಕಾಳಿದಾಸನ ಕಾವ್ಯ ನಾಟಕಗಳಲ್ಲಿ ಗಾಯನ ನರ್ತನಾಭಿನಯ ಪ್ರಸಕ್ತಿಗಳು ಅನೇಕವಾಗಿವೆ. ಕಾಳಿದಾಸನ ಸಾಹಿತ್ಯ ಗುರುವ್ಯಾರು ? ಸಂಗೀತ ಗುರುವ್ಯಾರು ? ನಾಟ್ಯಗುರುವ್ಯಾರು ? ಕ್ಷೇತ್ರಜ್ಞನ ವಿಚಾರವೂ ಅಷ್ಟೇ.

ಕ್ಷೇತ್ರಜ್ಞನು ಪದಗಳೆಂಬ ಕವಿತೆಗಳ ಹೊರತು ಬೇರೆ ಯಾವ ಗ್ರಂಥವನ್ನೂ ಬರೆದಂತಿಲ್ಲ. ಆತನ ಹೆಸರಿನ ಕಾವ್ಯನಾಟಕಾದಿ ಪ್ರಬಂಧಗಳಾಗಲಿ, ಶಾಸ್ತ್ರಗ್ರಂಥಗಳಾಗಲಿ ಯಾವುವೂ ದೊರೆತಿಲ್ಲ. ಆತನದೆಂದು ಹೇಳುವ ಒಂದು ಕಂದಪದ್ಯವನ್ನು ಶ್ರೀ ಬಿ. ಗೋಪಾಲರೆಡ್ಡಿಯವರು ಉದಾಹರಿಸಿದ್ದಾರೆ. ಕ್ಷೇತ್ರಜ್ಞನು ತಂಜಾವೂರಿನ ದೊರೆ ರಘುನಾಯಕನ (1623–33) ಆಸ್ಥಾನಕ್ಕೆ ಹೋದನಂತೆ—ಆಶ್ರಯಕ್ಕಾಗಿ. ಆ ದೊರೆ ಆತನನ್ನು "ನಿನ್ನನ್ನಿಲ್ಲಿಗೆ ಬಾರೆಂದವರ್ಯಾರು ?"—ಎಂದು ಕೇಳಿದನಂತೆ. ಅದಕ್ಕುತ್ತರವಾಗಿ ಕ್ಷೇತ್ರಜ್ಞನು ಹೀಗೆಂದ :

ತಮು ತಾಮೆ ವಸ್ತುರರ್ಥುಲು ।
ಕ್ರಮುಮೆರಗಿನ ದಾತಕಡಕು ರಮ್ಮನ್ನಾರಾ ॥
ಕಮಲಂಬುಲುನ್ನ ಚೋಟಿಕಿ ।
ಭ್ರಮರಂಬುಲು ಯಚ್ಯುತೇಂದ್ರ ರಘುನಾಥನೃಪಾ ॥

"ಯೋಗ್ಯತೆ ಕಾಣಬಲ್ಲ ದಾತನ ಬಳಿಗೆ ಯಾಚಕರು ತಾವುತಾವೇ ಬರುತ್ತಾರೆ. ಕಮಲಗಳಿರುವೆಡೆಗೆ ದುಂಬಿಗಳನ್ನು ಬನ್ನಿರೆಂದು ಕರೆಯಬೇಕೆ ?"

ಕ್ಷೇತ್ರಜ್ಞನ ಪದನಿರ್ಮಾಣ ಇದಕ್ಕೆ ಹಿಂದೆಯೇ ಆರಂಭವಾಗಿದ್ದಿರಬೇಕು. ಆತನ ಮೊಟ್ಟಮೊದಲನೆಯ ಕೃತಿ ಇದು : ರಾಗ, ಆನಂದಭೈರವಿ ; ತಾಳ, ಆದಿ.

ಶ್ರೀಪತಿಸುತು ಬಾರಿಕಿ ನೇ ।
ನೋಪಲೇಕ ನಿನು ವೇಡಿತೇ ।
ಕೋಪಾಲಾ ಮುವ್ವಗೋಪಾಲಾ ॥

(ಕನ್ನಡ) ಶ್ರೀಪತಿಸುತ ತಾಪದಿ ನಾಂ ।
ಸೈಪರಿಯದೆ ನಿನ್ನ ಬೇಡಲು ।
ಕೋಪವಲಾ ಮುವ್ವಗೋಪಾಲಾ ॥

(ಶ್ರೀಪತಿಸುತ=ಮನ್ಮಥ)

ಈ ಪದದ ಪ್ರತಿಪಂಕ್ತಿಯ ಕೊನೆಯಲ್ಲೂ ಕೋಪಾಲಾ ? ಸಲ್ಲಾಪಾಲಾ ? ಕಲಾಪಾಲಾ ? ನಾ ಪಾಲಾ ? ಎಂದು ಗೋಪಾಲ ಶಬ್ದದೊಡನೆ ಪ್ರಾಸ ಸೇರುವುದು ಪದಮೈತ್ರಿಯನ್ನೂ ಸಂದರ್ಭಚಮತ್ಕಾರವನ್ನೂ ತೋರುತ್ತದೆ. ಈ ಪದವು ಶ್ರೀಕಾರದಿಂದ ಪ್ರಾರಂಭವಾಗಿರುವ ಕಾರಣದಿಂದ ಇದು ಪ್ರಥಮ ಕೃತಿಯೆಂಬ ಎಣಿಕೆ ಬಂದಿರಬಹುದು. ಅದಕ್ಕಿನ್ನಾವ ಆಧಾರವೂ ಕಾಣದು.

ಒಟ್ಟಿನಲ್ಲಿ ಕ್ಷೇತ್ರಜ್ಞನ ರಚನೆಗಳು ಅನೇಕ ಸಾವಿರವೆಂದು ವದಂತಿ. ಮೇಲೆ ಉದಾಹರಿಸಿದ "ವೇಡುಕತೋ ನಡಚುಕೊನ್ನ" ಎಂಬ ಪದದಲ್ಲಿ ಹೀಗೆ ಹೇಳಿದೆ :

| | | |
|---|---|---|
| (1) | ಮಧುರೆಯ ತಿರುಮಲೇಂದ್ರ ಪ್ರಭುವು ಬಹುಮಾನಮಾಡಿ ಎದುರಿಗೆ ಕೂಡಿಸಿಕೊಂಡು ಕೇಳಿದಾಗ "ಇದೋ ತೆಗೆದುಕೋ" ಎಂದು ಕೊಟ್ಟ ಪದಗಳು...... | 2,000 |
| (2) | ತಂಜಾವೂರಿನ ವಿಜಯರಾಘವ ಪ್ರಭುವು ವಿಜಯೋತ್ಸವದಲ್ಲಿದ್ದಾಗ ನುಡಿದು ಸನ್ಮಾನ ಪಡೆದ ಪದಗಳು...... | 1,000 |
| (3) | ಗೋಲ್ಕೊಂಡ ಪಾದುಷಾ ಪ್ರಭುವು ತುಲಸಿಮೂರ್ತಿಯೆಂಬ ಗಾಯಕನೊಡನೆ ಪೋಟಿ ಮಾಡಿದಾಗ ಮುವ್ವಗೋಪಾಲನು ಆತನ ಕೇಳ್ಕೆಗಾಗಿ. ನಲವತ್ತು ದಿವಸಗಳೊಳಗಾಗಿ. ಕೇಳ್ವಿ ಮಾಡಿಸಿದ ಪದಗಳು...... | 1,700 |
| | ಒಟ್ಟು ಪದಗಳು...... | 4,700 |

ಕ್ಷೇತ್ರಜ್ಞನು ಸ್ಪರ್ಧೆಮಾಡಿ ಗೆದ್ದದ್ದು ಗಾಯಕ ತುಲಸಿಮೂರ್ತಿಯೊಬ್ಬನ ಮೇಲೆಯೇ ಅಲ್ಲ. ವಿಜಯರಾಘವನ ಆಸ್ಥಾನದ ವಿದ್ವಾಂಸರು ಅವನ ಕವಿತ್ವವನ್ನು ಹಾಸ್ಯಮಾಡಿದರು. "ಪರಾ. ರಾರಾ. ಪೋರಾ. ರಮ್ಮನವೇ, ಪೊಮ್ಮನವೇ—ಇಂಥಾದ್ದೇ ತಾನೆ ಕ್ಷೇತ್ರಜ್ಞನ ಪ್ರೌಢಿಮೆ !" ಎಂದು ದೊರೆಯ ಮುಂದೆ ಅಲ್ಲಗಳೆದರು. ಅದಕ್ಕೆ ಪ್ರತ್ಯುತ್ತರವಾಗಿ ಕ್ಷೇತ್ರಜ್ಞನು ಕಾಂಭೋಜಿರಾಗದಲ್ಲಿ ಒಂದು

ಹೊಸ ಪದವನ್ನು ರಚಿಸಿ, ಅದರ ಕಡೆಯ ಪಾದದ ಕಡೆಯ ಪಂಕ್ತಿಯೊಂದನ್ನು ಮಾತ್ರ ಬಿಡುವುಬಿಟ್ಟು ಅದನ್ನು ರಾಜನಿಗೆ ತೋರಿಸಿ "ಪ್ರಭುವೆ, ನಾನು ಇಷ್ಟು ಮಾಡಿ, ಬಿಟ್ಟಿದ್ದೇನೆ. ಈಗ ರಾಮೇಶ್ವರಕ್ಕೆ ಹೋಗಿ ಯಾತ್ರೆ ಮುಗಿಸಿ ಮರಳಿ ಇಲ್ಲಿಗೆ ಬರುತ್ತೇನೆ. ಅಷ್ಟರೊಳಗಾಗಿ ಇಲ್ಲಿಯ ಸಂಗೀತ ವಿದ್ವಾಂಸರು ನಾನು ಬಿಡುವುಬಿಟ್ಟಿರುವ ಪಂಕ್ತಿಯನ್ನು ಭರ್ತಿಮಾಡಲಿ"—ಎಂದು ಬಿನ್ನಯಿಸಿ ಅಪ್ಪಣೆ ಪಡೆದು ತೆರಳಿದ. ಆ ಪದ ಹೀಗೆ :

ರಾಗ : ಕಾಂಭೋಜಿ [ತಾಳ : ತಿಶ್ರತ್ರಿಪುಟ]

ವದರಕ ಪೋಪೋವೇ | ವಾಡೇಲ ವಚ್ಚೀನಿ ।
ವದ್ದು ರಾವದ್ದನವೇ ॥
ಭಾಮರೋ ಶಕುನಮು। ಲಡಿಗಿತಿ ಮುವ್ವ ಗೋ-
ಪಾಲುಡು ವಚ್ಚುನನುಚು ॥

..................

ವಿದ್ವಾಂಸರು ಅದೇನು ಮಹಾ ! ಎಂದರು. ಸಮಸ್ಯಾಪೂರಣಕ್ಕಾಗಿ ಹೊಸೆಯಲು ಕುಳಿತರು, ಕೈಸಾಗಲಿಲ್ಲ. ತಿಣಿಕಿದರು, ಸಾಗಲಿಲ್ಲ. ಮುಕ್ಕಿದರು, ಸಾಗಲಿಲ್ಲ. ಮತ್ತೆ ಮತ್ತೆ ಹೆಣಗಿದರು, ಇದ್ದಲ್ಲೇ ಇದ್ದರು. ಅವರು ಹಾಗಿರುವಾಗ ಕ್ಷೇತ್ರಜ್ಞನು ಯಾತ್ರೆ ಮುಗಿಸಿಕೊಂಡು ಬಂದ. ದೊರೆ ಸಭೆ ಸೇರಿಸಿ ನಡೆದಿದ್ದ ಸಂಗತಿಯನ್ನು ತಿಳಿಸಿದ. ಕ್ಷೇತ್ರಜ್ಞನು ಒಳ್ಳೆಯದಾಯಿತೆಂದು ಹೇಳಿ ಮಿಕ್ಕಿದ್ದ ಪಂಕ್ತಿಯನ್ನು ತಾನೇ ಭರ್ತಿಮಾಡಿದ. ಈಗ ಒಟ್ಟು ಪದದ ಭಾವಾನುವಾದವನ್ನು ನೋಡೋಣ.

ಒದರದೆ ಪೋಪೋಗೇ—ಅವನೇಕೆ ಬಂದಾನು ।
ಬೇಡ ಬರಬೇಡವನ್ನೇ ॥ ಪಲ್ಲವಿ ॥
ಅದು ಬೇರೆ ಯುಗವಾಯಿ-ತಿದು ಬೇರೆ ಜನ್ಮವೇ ।
ಅವನ್ಯಾರೊ ನಾನ್ಯಾವಳೋ, ಕೆಳದೀ ॥ ಅನುಪಲ್ಲವಿ ॥

* * * *

ಭಾಮೇ, ನಾಂ ಶಕುನವ ಕೇಳಿದೆ ಮುವ್ವ ಗೋ- ।
ಪಾಲನು ಬಹನೇನೆಂದು ॥
ಕಾಮಿಸಿ ನಾಥರ ಸೇರ್ವ ಚೆಲ್ವೆಯರ ನಾಂ ।
ಕಂಡು ಕೊರಗಿ ನೊಂದೆನೇ ॥
ರಾಮ ! ರಾಮ ! ನಾನೀ ದುಃಖದಿನಾತನ ಮುಖ ।
ಮರಳಿ ನೋಳ್ಪೆನೆ ? ಆಗಳಾದದ್ದೆ ಸಾಲದೆ ? ॥

ಈ ಮಾತನ್ನಾಡುವವಳು ಸ್ತ್ರೀಯು, ಎಂದರೆ ನಾಯಕನ ಸ್ವಭಾರ್ಯೆ. ಅವಳ ನಾಥರೋ ಶಠ, ಎಂದರೆ ಅವಳಿಗೆ ವಂಚಕ. ಅವಳು ವಿರಹೋದ್ವೇಗದಲ್ಲಿ ಈರ್ಷ್ಯಾ-ಮರ್ಷೆಗಳಿಂದಲೂ ದೈನ್ಯರೋಷಗಳಿಂದಲೂ ನುಡಿಯುತ್ತಾಳೆ. ಹೀಗೆ ವಿಜಯ ರಾಘವ ರಾಜಾಸ್ಥಾನದಲ್ಲಿ ತನ್ನ ಪ್ರತಿಸ್ಪರ್ಧಿಗಳಿಗೆ ಮಂಗಳಾರತಿ ಎತ್ತಿಸಿದ್ದ ಕ್ಷೇತ್ರಜ್ಞ.

ಆತನ ರಚನೆಗಳೆಲ್ಲ ಈಗ ನಮಗೆ ದೊರೆಯುವಂತಿಲ್ಲ. ಕ್ಷೇತ್ರಜ್ಞ ಪದಸಂಕಲನಗಳಲ್ಲಿ ನನಗೆ ತಿಳಿದಿರುವ ಮಟ್ಟಿಗೆ ದೊಡ್ಡದು ಶ್ರೀಪಿಠಾಪುರ ಮಹಾರಾಜಾಶ್ರಯದಲ್ಲಿ ಡಾ॥ ಗಿಡುಗು ವೆಂಕಟ ಸೀತಾಪತಿಯವರು 1952ರಲ್ಲಿ ಸಂಪಾದಿಸಿದ್ದು. ಅದರಲ್ಲಿರುವ ಪದ ಸಂಖ್ಯೆ ಹೀಗೆ :

| | | |
|---|---|---|
| ಸ್ವೀಯ ನಾಯಿಕಾ ಪದಗಳು | ... | 162 |
| ಪರಕೀಯ ನಾಯಿಕಾ ಪದಗಳು | ... | 110 |
| ಸಾಮಾನ್ಯ ನಾಯಿಕಾ ಪದಗಳು | ... | 109 |
| | | 381 |
| ಇತರ (ಕ್ಷೇತ್ರಯ್ಯನದೋ ಎನ್ನಿಸುವಂಥಾದ್ದು) | ... | 25 |
| | | 406 |

ಪ್ರತಿಯೊಂದು ಪದದಲ್ಲಿಯೂ ಮುವ್ವ ಗೋಪಾಲ ಮುದ್ರಿಕೆ ಇದೆ.

ಈ 406ರಲ್ಲಿ ಈಗ ಹಾಡುಗಾರರ ಬಳಕೆಯಲ್ಲಿರುವ ಪದಗಳು 20–30 ; ಹೆಚ್ಚೆಂದರೆ 50. ಉಳಿದವು ಗ್ರಂಥಸ್ಥ ಮಾತ್ರಗಳು ; ಅವುಗಳನ್ನು ಹಾಡಬಲ್ಲವರು ಯಾರಾದರೂ ವಿಶೇಷ ಪರಿಶ್ರಮಿಗಳು ಅಲ್ಲೊಬ್ಬರು ಇಲ್ಲೊಬ್ಬರಿದ್ದಾರೋ ಹೇಗೋ !

ಗುಣಕ್ಕೆ ಸಲ್ಲಬೇಕಾದ ಗೌರವವನ್ನು ಗಾತ್ರಕ್ಕೆ ಸಲ್ಲಿಸುವ ಮೂಢಾಚಾರ ನಮ್ಮಲ್ಲಿ ಹೇಗೋ ಬೆಳೆದುಬಂದಿದೆ. ಪುರಂದರ ದಾಸರು ಲಕ್ಷ ದೇವರ ನಾಮ ಹಾಡಿದರು ; ತಾಳ್ಳಪಾಕದವರು ಎರಡು ಲಕ್ಷ ಹಾಡಿದರು ; ತ್ಯಾಗರಾಜರು ಇಪ್ಪತ್ತನಾಲ್ಕು ಸಾವಿರ ಹಾಡಿದರು—ಹೀಗೆ. ಆ ಸಂಖ್ಯಾ ಮಹತ್ತ್ವ ಯಾರಿಗೋಸ್ಕರ ? ಈಗ ಅಚ್ಚು ಪುಸ್ತಕದಿಂದ ದೊರೆಯುವಷ್ಟು ಕೀರ್ತನೆ ಕೃತಿಗಳಲ್ಲಿ ಹತ್ತರಲ್ಲೊಂದು ಪಾಲಿನಷ್ಟನ್ನಾದರೂ ಹಾಡುವ ಪುಣ್ಯಾತ್ಮರು ಎಷ್ಟು ಮಂದಿ ಇದ್ದಾರೆ ? ಅಷ್ಟನ್ನು ಕೇಳುವವರಂತೂ ಮೊದಲೇ ಇಲ್ಲ. ಇಲ್ಲಿ ನಾನು ಹೇಳುತ್ತಿರುವುದು ಕಲಾದೃಷ್ಟಿಯ ಮಾತು. ಭಕ್ತಿಯ ಮಾತು ಬೇರೆ. ಕಲಾದೃಷ್ಟಿಯಿಂದ ನೋಡಿದರೆ ಒಬ್ಬ ವಾಗ್ಗೇಯಕಾರನ ಯೋಗ್ಯತೆಯನ್ನರಿಯಲು ಒಂದು ನೂರು ಕೃತಿಯಿದ್ದರೆ ಬೇಕಾದಷ್ಟಾಗಿ, ಇನ್ನೂ ಹೆಚ್ಚೆನಿಸೀತು. ಕ್ಷೇತ್ರಯ್ಯನ ನಾಲ್ಕು ನೂರು ಪದಗಳಲ್ಲಿ ಯಾವ ನಲವತ್ತನ್ನು ತೆಗೆದುಕೊಂಡು ನೋಡಿದರೂ ಆತನ ಕವಿತಾಕ್ಷೇತ್ರದಲ್ಲಿ ಅವನು ಮಹಾ ಪ್ರತಿಭಾವಂತನೆಂಬುದು ಸ್ಫುಟವಾಗುತ್ತದೆ.

ಕ್ಷೇತ್ರಯ್ಯನ ವಾಕ್ಯದ ರೀತಿ ಶೈಲಿಗಳು ಆತನಿಗೆ ಭಾಷೆಯ ಮೇಲಿದ್ದ ಪ್ರಭುತ್ವವನ್ನು ತೋರಿಸುತ್ತವೆ. ಸಂದರ್ಭೋಚಿತವಾದ ಸಲುಗೆ, ಆಪ್ತತೆ, ಗಂಭೀರ, ಹಾಸ್ಯ ಇವೆಲ್ಲಕ್ಕೆ ತಕ್ಕ ಪದಗಳು ಅವನಿಗೆ ನಿರಾಯಾಸವಾಗಿ ಒದಗಿಬರುತ್ತವೆ, ಆತ ಪದಕ್ಕಾಗಿ





ಶ್ರಮಪಟ್ಟಂತೆ ತೋರುವುದಿಲ್ಲ. ಒಬ್ಬಾನೊಬ್ಬ ನಾಯಕನು ಮುನಿಸಿಕೊಂಡ
ಹೋಗಿದ್ದಾನೆ. ಆದರೆ ಅವನಿಗೆ ಆ ಪ್ರಿಯೆ ಬೇಕು. ಅವಳನ್ನು ಒಲಿಸಿಕೊಳ್ಳಬೇಕೆಂದ
ಸಂಧಾನ ನಡಸುತ್ತಾನೆ. ಇದು ಆಕೆಗೆ ತಿಳಿದಾಗ ಅವಳು ಸಖಿಗೆ ಹೇಳುತ್ತಾಳೆ :

ರಮ್ಮನವೇ ಸಮುಖಾನ ।
ರಾಯಭಾರಮುಲೇಲೇ ॥

" ಸಮ್ಮುಖಕ್ಕೆ ಬಾರೆನ್ನೇ ಆತನನ್ನ. ಇದಕ್ಕೆ ರಾಯಭಾರಗಳೇಕೆ ? "

" ಸಮ್ಮುಖ " ಎಂಬುದರಲ್ಲಿ ತಾನು ಮಹಾರಾಣಿಯೆಂಬ ಸ್ವಾಭಿಮಾನದ ಧ್ವನಿ
ಯಡಗಿಸಿರುವುದೂ " ರಾಯಭಾರ " ಎಂಬುದರಲ್ಲಿ ಅವನು ಪ್ರಣಯಕಲಹವನ್ನು
ದೊಡ್ಡ ರಾಜಕೀಯ ಮಾಡಿದ್ದಾನೆಂಬ ಅವಹೇಳನದ ಧ್ವನಿಯನ್ನಡಗಿಸಿರುವುದೂ ರಮ್ಯ
ವಾಗಿದೆ.

ಕ್ಷೇತ್ರಯ್ಯ ಭಾಷಾಧಿಕಾರಿಯಾಗಿದ್ದಂತೆ ಗಾಯನಾಧಿಕಾರಿಯೂ ಆಗಿದ್ದ. ಆತ
ಸುಮಾರು ಐವತ್ತು ರಾಗಗಳನ್ನುಪಯೋಗಿಸಿದ್ದಾನೆ. ಅವುಗಳಲ್ಲಿ ಹೆಚ್ಚು ರಕ್ತಿ
ರಾಗಗಳು. ರಕ್ತಿಯೆಂದರೆ ಅನುರಕ್ತಿ. " ರಕ್ತಿ ", " ರಾಗ "—ಈ ಎರಡು ಶಬ್ದ
ಗಳಿಗೂ ರಂಜನೆಯೆಂದೇ ಅರ್ಥ. ಆದರಲ್ಲಿ ರಕ್ತಿಯೆಂಬುದು ಪಾರಿಭಾಷಿಕ ರೂಢಿಯಲ್ಲಿ
ದೈವಭಕ್ತಿಯಿಂದ ಪ್ರತ್ಯೇಕವಾದ ಮಾನವ ಅನುರಾಗ, ಪ್ರೀತಿ–ಶೃಂಗಾರ ರಕ್ತಿ—ಎಂಬ
ವಿಶೇಷಾರ್ಥದಲ್ಲಿ ಉಪಯೋಗವಾಗಿದೆ. ರಕ್ತಿ ರಾಗಗಳಿಂದ ವಿಜಾತೀಯವಾದವು
ಘನರಾಗಗಳು. ಕ್ಷೇತ್ರಜ್ಞನು ಹೆಚ್ಚಾಗಿ ಬಳಸಿಕೊಂಡಿರುವ ರಾಗಗಳು ಇವು :

| | |
|---|---|
| ಕಾಂಭೋಜಿ | ... 42 ಪದಗಳು |
| ಭೈರವಿ | ... 29 ಪದಗಳು |
| ಮುಖಾರಿ | ... 26 ಪದಗಳು |
| ಕಲ್ಯಾಣಿ | ... 26 ಪದಗಳು |
| ಸಾವೇರಿ | ... 18 ಪದಗಳು |
| ತೋಡಿ | ... 16 ಪದಗಳು |
| ಯದುಕುಲಕಾಂಭೋಜಿ | ... 15 ಪದಗಳು |
| ಆನಂದಭೈರವಿ | ... 13 ಪದಗಳು |
| ಬಿಲಹರಿ, ಶಂಕರಾಭರಣ, ಘಂಟಾರವ, ಆಹಿರಿ | ... 10 ಪದಗಳು ಪ್ರತಿಯೊಂದರಲ್ಲೂ |

ಕೆಲವು ರಾಗಗಳಲ್ಲಿ ಒಂದೊಂದೇ ಪದ ಇದೆ. ಸಂಖ್ಯೆ ಸಣ್ಣದಾದರೆ ರಾಗ-
ಸ್ವಾರಸ್ಯ ಸಣ್ಣದೆಂದಾಗಲಿ ಕೃತಿಸ್ವಾರಸ್ಯ ಸಣ್ಣದೆಂದಾಗಲಿ ಭಾವಿಸತಕ್ಕದ್ದಲ್ಲ. ಒಂದು
ದಿವಸ ವಿದ್ವಾನ್ ಶ್ರೀರಾಳ್ಳಪಲ್ಲಿ ಅನಂತಕೃಷ್ಣ ಶರ್ಮ ಅವರೊಡನೆ ರಾಗ ಸ್ವಭಾವ
ವನ್ನು ಕುರಿತು ಮಾತನಾಡುತ್ತಿದ್ದಾಗ ನಾನು ಕೇದಾರ ರಾಗವು ಉದಾತ್ತವೂ

ನಿರ್ಮಲವೂ ಆದದ್ದೆಂದೂ ಅದು ಶೃಂಗಾರಕ್ಕೆ ಹೊಂದಲಾರದೆಂದೂ ಹೇಳುವ ಸಾಹಸ ಮಾಡಿದೆ. ಅವರು ಕೇದಾರದ—

ರಮ್ಮನವೇ ಸಮುಖಾನ

ಎಂಬ ಪದವನ್ನು ಹಾಡಿ, ನನ್ನ ವಾದವನ್ನು ಮುರಿದರು. ಆಗಲೇ ನಾನು ಆ ಪದವನ್ನು ಮೊದಲ ಸಾರಿ ಕೇಳಿದ್ದು.

ಮೇಲಣ ರಾಗಗಳು ರಕ್ತಿರಸಪ್ರಧಾನಗಳೇನೋ ಹೌದು. ಅದಷ್ಟರಿಂದಲೇ ರಸದ ಆವಿರ್ಭಾವವೆಂದು ಹೇಳಲಾಗದು. ಆ ರಾಗದ ಮೇಲೆ ಗಾಯಕನಿಗಿರುವ ಹಿಡಿತ, ಅವನ ಮನಸ್ಸಿನ ಧೋರಣೆ, ಅವನ ಭಾವಾಭಿಜ್ಞತೆ, ಆತನ ಕಂಠದ ಪಲುಕುಬಡಿ ಅಥವಾ ನುಡಿನುಡಿತ—ಇವೆಲ್ಲ ಸಮಗೂಡಿದಲ್ಲದೆ ಗೇಯ ಪದದ ಸ್ವಾರಸ್ಯ ಹೊರಕ್ಕೆ ಬಾರದು.

ಕ್ಷೇತ್ರಜ್ಞನಿಗೆ ದೊಡ್ಡ ಆನುಪೂರ್ವಿ ಉಂಟು. ವೇದದಲ್ಲಿಯೇ ಇಂದ್ರ–ಅಹಲ್ಯೆ, ಊರ್ವಶಿ–ಪುರೂರವ ಮೊದಲಾದವರ ಐತಿಹ್ಯಗಳ ಮೂಲಕ ನಮಗೆ ಕಾಮಪ್ರಣಯದ ತೀವ್ರಭಾವ ಕೋಮಲಭಾವಗಳು ತಿಳಿದುಬರುತ್ತವೆ. ಋಷಿ ಪಂಕ್ತಿಗೆ ಸೇರದಿರುವ ಕವಿಗಳಲ್ಲಿ ಕಾಳಿದಾಸನೂ ಅಮರುಕನೂ ಜಯದೇವನೂ ಕ್ಷೇತ್ರಜ್ಞ ಸಂಪ್ರದಾಯಕ್ಕೆ ಮೂಲಪುರುಷರು.

ಕ್ಷೇತ್ರಜ್ಞನು ಅಮರುಕನ ಭಾವಸಂಪತ್ತನ್ನು ಜಯದೇವನ ಗಾನಸಂಪತ್ತಿನೊಡನೆ ಸಮ್ಮೇಳನ ಮಾಡಿದ್ದಾನೆ. ಕ್ಷೇತ್ರಯ್ಯನ ಕವಿತೆಯಲ್ಲಿ ಮಾತು ಕತ್ತಿಯ ಕೈಹಿಡಿ : ಧಾತು ಅದರ ಅಲುಗು. ಮಾತು ದೀಪದ ಬತ್ತಿ ; ಧಾತು ಅದರ ಬೆಳಕು. ಚಿನ್ನದ ಮೆರುಗುಮಾತುಗಳಿಗೆ ಸೂಜಿಮೊನೆಯಂಥ ರಾಗತೀವ್ರತೆಯನ್ನು ಕೊಟ್ಟಿದ್ದಾನೆ. ಅವನ ಪದದಲ್ಲಿ ಅಂಥ ಶಕ್ತಿಯಿರುವುದರಿಂದ ಅದು ನಮ್ಮ ಹೃದಯ ಗುಹೆಯನ್ನೊಳಹೊಕ್ಕು ಮೂಲೆಮೂಲೆಯಲ್ಲಿಯೂ ಪಂಜಿಕ್ಕಿ ಅಲ್ಲಿ ಬಿದ್ದು ನಿದ್ರಿಸುತ್ತಿರುವ ಭಾವಗಳನ್ನು ಕೆರಳಿಸಿ ಕುಣಿಸುತ್ತದೆ.

ಕ್ಷೇತ್ರಜ್ಞನ ಕೃತಿಗೆ "ಪದ" ಎಂದು ಪಾರಿಭಾಷಿಕವಾದ ಹೆಸರು. ಈ ಬಗೆಯ ವಾಕ್ಯಬಂಧವು ಶೃಂಗಾರಕ್ಕೆ ಚೆನ್ನಾಗಿ ಹೊಂದತಕ್ಕದ್ದು. ಹಾಡಿನಲ್ಲಿ ಅಥವಾ ಗೇಯ ಕಾವ್ಯದಲ್ಲಿ ಎರಡಂಶಗಳು ಮಿಳಿತವಾಗಿರುತ್ತವೆ : ಒಂದು ಮಾತು, ಇನ್ನೊಂದು ಧಾತು.

ವಾಕ್ ಶಬ್ದ ಪರ್ಯಾಯತ ಯ್ಯೆವ ಮಾತು ಶಬ್ದಃ...... ।
ಗೇಯಸ್ಯ ಪರ್ಯಾಯತಯಾ ತು ಧಾತು ಶಬ್ದಃ... ॥

—ಸಂಗೀತಸುಧಾ (3–10, 11)

ಧಾತುರ್ನಾಮ ಸ್ವರಃ ಪ್ರೋಕ್ತೋ ಮಾತುರಕ್ಷರಮುಚ್ಯತೇ ॥

—ಚತುರ್ದಂಡೀ (9–320)

"ಮಾತು" ಎಂಬುದು ಕನ್ನಡದಲ್ಲಿ ಯಾವುದೋ ಸಂಗೀತ ಪರಿಭಾಷೆಯಲ್ಲಿಯು ಆದೇ. ಒಂದಾನೊಂದು ವಸ್ತುವನ್ನಾಗಲಿ ಅದರ ಗುಣಕಾರ್ಯಗಳನ್ನಾಗಲಿ ತಿಳಿಸು ಪದ ಮಾತು. ಧಾತು ಎಂಬುದು ಸ್ವರರೂಪವಾದ ರಾಗಬೀಜ. ಹೀಗೆ ಮಾತು ಧಾತುಗಳನ್ನು ಉದ್ದೇಶಭೇದದಂತೆ ಅನೇಕ ರೀತಿಗಳಲ್ಲಿ ಜೋಡಿಸಬಹುದು. ಗೀ ಎಂಬುದು ಅವರಲ್ಲೊಂದು ಬಗೆ. ವರ್ಣವೆಂಬುದಿನ್ನೊಂದು ಬಗೆ. ಕೀರ್ತನೆ ಮತ್ತೊಂದು ಬಗೆ. ಪದ ಮಗದೊಂದು ಬಗೆ. ಕೀರ್ತನೆಗಳಲ್ಲಿ ಪ್ರಸಿದ್ಧವಾದವು ಕನ್ನಡದಲ್ಲಿ ಪುರಂದರಾದಿ ದಾಸರುಗಳ ರಚನೆಗಳು. ತೆಲುಗಿನಲ್ಲಿ ಅನ್ನಮಾಚಾರ್ಯರು, ಭದ್ರಾಚ ರಾಮದಾಸರು ಮೊದಲಾದವರ ಕೃತಿಗಳು ಕೀರ್ತನೆಗಳಲ್ಲಿ ಮಾತು–ಧಾತುಗಳೆರಡಕ್ಕೂ ಸಮಸಮ ಪ್ರಾಶಸ್ತ್ಯವಾದರೂ ಬೋಧ್ಯ ವಿಷಯ ಮುಖ್ಯ; ಸಂಗೀತ ಅದಕೆ ಸಾಧಕ ಮಾತ್ರ. ಪದದಲ್ಲಿಯಾದರೋ ಗಾನಾಂಶವು ಸಾಹಿತ್ಯಾಂಶಕ್ಕಿಂತ ಹೆಚ್ಚು ರಾಗಧಾತು ಇಲ್ಲಿ ಪೂರ್ಣರೂಪಕ್ಕೆ ಬರುತ್ತದೆ.

ಈ ಭೇದವನ್ನು ಇನ್ನೊಂದು ದೃಷ್ಟಿಯಿಂದ ನೋಡುವುದು ಅವಶ್ಯ ಕೀರ್ತನೆಯ ಸಂಬೋಧನೆ ಮನುಷ್ಯ ಬುದ್ಧಿಗೆ; ಪದದ ಸಂಬೋಧನೆ ಮನುಷ ಹೃದಯಕ್ಕೆ. ಬುದ್ಧಿಯು ಗ್ರಹಿಸುವ ಪದಾರ್ಥಗಳು ಬಾಹ್ಯ ಜಗತ್ತಿನವು ಹೃದಯದ ವಿಷಯ ಅಂತರಂಗದ್ದು. ಬುದ್ಧಿಯು ಗ್ರಹಿಸುವ ವಸ್ತುಗಳಿಗಿಂತ ಹೃದಯವು ಗ್ರಹಿಸುವ ವಸ್ತುಗಳು ಸೂಕ್ಷ್ಮವಾದವು. ಆದದ್ದರಿಂದ ಬುದ್ಧಿಕಾರ್ಯಕ್ಕೆ ಸಾಕಾಗುವ ಭಾಷೆ ಹೃದಯಕಾರ್ಯಕ್ಕೆ ಸಾಕಾಗಲಾರದು. ಹೃದಯೋದ್ದಿಷ್ಟವಾದ ಭಾಷೆಯು ಸಾಮಾನ್ಯ ಭಾಷೆಯ ಜೊತೆಗೆ ಮತ್ತೊಂದು ಅನುಪಾನವನ್ನು ಬೇಡು ತ್ತದೆ. ಆ ಅನುಪಾನವೇ ಸಂಗೀತ. ಅನುಪಾನ ಎಂಬುದು ವೈದ್ಯರ ಮಾತು. ಅವರು ಕೊಟ್ಟ ಗುಳಿಗೆ ಅದರ ಕಾರ್ಯವನ್ನು ಚೆನ್ನಾಗಿ ಮಾಡಬೇಕಾದರೆ ಅವರು ಹೇಳಿದ ಅನುಪಾನ—ಹಾಲು, ತುಪ್ಪ, ಜೇನು, ವೀಳ್ಯದ ರಸ ಇತ್ಯಾದಿ—ಇರಬೇಕು. ಅನುಪಾನ ಯಾವಾಗಲೂ ಔಷಧಕ್ಕಿಂತ ಸವಿಯಾದದ್ದು. ಇಂಥಾದ್ದು ಗೇಯ ಪದದಲ್ಲಿರುವ ಸಂಗೀತ. ಕೀರ್ತನೆಯಲ್ಲಿರುವುದಕ್ಕಿಂತಲೂ "ಪದ"ದಲ್ಲಿ ರಾಗವಿನ್ಯಾಸಕ್ಕೂ ಸ್ವರ ವಿಸ್ತಾರಕ್ಕೂ ಹೆಚ್ಚು ಅವಕಾಶವುಂಟು. ಅಷ್ಟು ಮಾತ್ರವೇ ಅಲ್ಲ. ರಾಗವಿನ್ಯಾಸ ಸಾವಕಾಶವಾಗಿ ನಡೆದರೆಯೇ ಪದಗಾನದ ಸೊಗಸು ಪೂರ್ತಿಯಾಗಿ ಅನುಭವಕ್ಕೆ ದೊರಕುವುದು. ಪದಪ್ರಬಂಧದಿಂದ ಮುಂದಿನ ಗೇಯಜಾತಿ ತ್ಯಾಗರಾಜಾದಿಗಳ ಕೃತಿ ಗಳದು. ಇದರಲ್ಲಿ ರಾಗಪೋಷಣೆಯುಂಟು. ಅದಕ್ಕಿಂತ ಹೆಚ್ಚಾಗಿ ಸ್ವರಸಂಗತಿ ಗಳುಂಟು. ಸ್ವರಗಳ ಎರಕದಚ್ಚಿನ ತುಂಡುಗಳ ಭಾರದಲ್ಲಿ ಕವಿತ್ವದ ಭಾವ ಕುಗ್ಗಿ ದುರ್ಬಲವಾಗುವುದುಂಟು. ಹೀಗೆ ಪದಗಾಯನಕ್ಕೆ ಪುರಂದರಾದಿಗಳ ಗಾಯನ ಶೈಲಿಯೂ ಸಲ್ಲದು; ತ್ಯಾಗರಾಜಾದಿಗಳ ಗಾಯನಶೈಲಿಯೂ ಸಲ್ಲದು. ಪಲ್ಲವಿ ಹಾಡಿಕೆಯ ಸ್ವರಾಡಂಬರಕ್ಕಂತೂ ಇಲ್ಲಿ ಸ್ಥಳವಿಲ್ಲ. ಪದಗಾಯನದಲ್ಲಿ ಮುಖ್ಯವಾಗಿ ಬೇಕಾದದ್ದು ಹೃದಯಭಾವವನ್ನು ಆದಷ್ಟು ಪೂರ್ಣವಾಗಿ ಹೊರಕ್ಕೆ ತರುವ ರಾಗ ಪ್ರವಾಹ, ಅದರ ಏರುಜಾರುಗಳು, ಸುಳಿವುಗಳು. ಕಂಠಧ್ವನಿಯ ತೀವ್ರತೆ ಕೋಮ ಲತೆಗಳು— ಒಂದೇ ಮಾತಿನಲ್ಲಿ, ರಾಗವಿಲಾಸ. ಇದಕ್ಕೆ ಅವಶ್ಯವಾದದ್ದು ವಿಳಂಬಗತಿ.

ಅಪಸರವಸರದ ಹಾಡಿಕೆ ಇಲ್ಲಿ ಪ್ರಯೋಜನಕ್ಕೆ ಬಾರದು. ಪದವನ್ನು ಚೌಕಕಾಲದಲ್ಲಿ ಅಕ್ಷರಕ್ಷರಕ್ಕೂ ಅದರ ಬೆಲೆಯನ್ನು ಕೊಟ್ಟುಕೊಂಡು, ನೆಮ್ಮದಿಯಿಂದ ಹಾಡ ಬೇಕಾದದ್ದು. ಇದು ಪ್ರಯಾಸ ಸಾಧ್ಯವಾದದ್ದು. ಎರಕಹುಯ್ದ ಸ್ವರದ ಅಚ್ಚು ತುಂಡುಗಳನ್ನು ಶ್ರೋತನ ಮುಖಕ್ಕೆ ಕಾಣಲಾರದಂತೆ ಒಂದರ ಹಿಂದೆ ಮತ್ತೊಂದನ್ನು ಪುಂಖಾನುಪುಂಖವಾಗಿ ಎಸೆದು ಬಿಸಾಡುವ ಗಾಯನ ಪಾಂಡಿತ್ಯವು ಪದಗಾಯನದಲ್ಲಿ ರಸಾಭಾಸವನ್ನು ಮಾಡೀತು. ಮಂದಗತಿಯಿಂದ, ಅಲ್ಲಲ್ಲಿ ರಾಗದ ಒಲವು ಒಯ್ಯಾರ ಗಳನ್ನು ತೋರಿಸಿ, ಬಳುಕು ಕುಲುಕುಗಳಿಂದ ಹೃದಯವನ್ನು ಚುಚ್ಚಿ ಮೂರ್ಛನೆ ಯನ್ನೂ ಸಾಂತ್ವನೆಯನ್ನೂ ಉಂಟುಮಾಡಬಲ್ಲ ಭಾವಾನುಭವಿಗಳು ಹಾಡಬೇಕಾದದ್ದು ಪದ.

ಶೃಂಗಾರ ಗೇಯಗಳಲ್ಲಿ ಪದಕ್ಕಿಂತ ಈಚಿನದು ಜಾವಡಿ (ಜಾವಳಿ). ಇದು ಉತ್ತರ ಹಿಂದೂಸ್ತಾನದಿಂದ ಬಂದದ್ದೆಂದು ತೋರುತ್ತದೆ. ಇದರದು ತೀವ್ರ ವೇಗ. "ಜಾವ್" ಎಂಬ ಪದವೇ ಸೂಚಿಸುವಂತೆ ಇದರಲ್ಲಿ ಚಲನೆ ಸಂಭ್ರಮ ಮುಖ್ಯ. ಶೃಂಗಾರದಲ್ಲಿ ಮನೋಭಾವ ಆಳದ್ದಾಗಿ ಚಿರಕಾಲದ್ದಾಗಿದ್ದರೆ ಅದಕ್ಕೆ ಪದದ ಮಟ್ಟು. ಅದು ಆತುರದ್ದಾಗಿದ್ದರೆ ಅದಕ್ಕೆ ಜಾವಡಿಯ ಮಟ್ಟು. ಹೀಗೆಂದರೆ, ಸಂಗೀತದ ಗತಿ ಯನ್ನೂ ಕ್ರಮವನ್ನೂ ಗೊತ್ತುಮಾಡಬೇಕಾದದ್ದು ಕವಿತೆಯಲ್ಲಿಯ ಭಾವ. ಗಾಯಕ ವಿದ್ವಚ್ಛಿರೋಮಣಿಗಳಾದ ಶ್ರೀ ಸುಬ್ಬರಾಮದೀಕ್ಷಿತರ ಮಾತು ಲಕ್ಷ್ಯದಲ್ಲಿರಬೇಕಾದದ್ದು :

**"ಕ್ಷೇತ್ರಯ್ಯನ ಪದಗಳು ಶಬ್ದಾರ್ಥಗಳನ್ನು ಚೆನ್ನಾಗಿ ಅರಿತು, ರಸವನ್ನು ತಾನು ಅನುಭವಿಸುತ್ತ, ಚೌಕವಾಗಿ (ವಿಳಂಬವಾಗಿ) ಯಾರು ಹಾಡುತ್ತಾನೋ ಅವನಿಗೆ ಮಾತ್ರ ರುಚಿಸುತ್ತವೆ. ಧಾತುವನ್ನು ಬರೆದು ನೋಡಿದರೆ ಬಂದದ್ದೇ ಬಂದಂತೆ ತೋರುತ್ತದೆ. ಹೀಗಿರುವುದೇ ಪದ ಸಾಹಿತ್ಯದ ಶಯ್ಯೆ."**

ಬುದ್ಧಿಯನ್ನುದ್ದೇಶಿಸಿದ ಭಾಷೆಗಿಂತ ಹೃದಯವನ್ನುದ್ದೇಶಿಸಿದ ಭಾಷೆ ಸೂಕ್ಷ್ಮ ತರದ್ದಾಗಿ ಧ್ವನಿಪ್ರಧಾನವಾದದ್ದಾಗಿರಬೇಕೆಂದು ಮೇಲೆ ಹೇಳಿದೆ. ಆ ಅಂತರಂಗ ಧ್ವನಿಗಾಗಿ ಸಂಗೀತ. ಹಾಗೇ ಸಾಹಿತ್ಯಭಾಷೆಯ ಜೊತೆಗೆ ಸಂಗೀತ ಸೇರಿದಾಗಲೂ ಸಹ ಅಂತರಂಗದ ಅಭಿವ್ಯಕ್ತಿ ಸಂಪೂರ್ಣವಾಗುತ್ತದೆಂದು ಖಂಡಿತವಿಲ್ಲ. ಎಷ್ಟೋ ಭಾವ ಸೂಕ್ಷ್ಮಗಳು ಇನ್ನೂ ರೂಪಗೊಳ್ಳದೆ ಉಳಿದು ಅವಿತುಕೊಂಡಿರುತ್ತವೆ. ಅವುಗಳನ್ನು ಹೊರಕ್ಕೆ ತರುವುದು ಹೇಗೆ ? ಅದಕ್ಕಾಗಿ ಮೂರನೆಯ ಯಾನಸಾಧನ ವೊಂದು ಬೇಕಾಗುತ್ತದೆ. ಅದೇ ಅಭಿನಯ. ಬಾಯಿಂದಾಡಿದ ಮಾತಿನ ಆಶಯ ವನ್ನು ರಾಗಧ್ವನಿ ಕೊಂಚಮಟ್ಟಿಗೆ ವಿಸ್ತರಿಸಿ ಪ್ರಕಾಶಪಡಿಸುತ್ತದೆ. ಅದನ್ನು ಅಭಿನಯವು ಮತ್ತಷ್ಟು ವಿಸ್ತರಿಸಿ ಪೂರ್ತಿಮಾಡುತ್ತದೆ. ಉದಾಹರಣೆಗಾಗಿ ಜಯದೇವನ 'ಯಾಹಿ ಮಾಧವ ಯಾಹಿ ಕೇಶವ' ... ('ಹೋಗು ಕೃಷ್ಣ') ಎಂಬೆರಡು ಚರಣಗಳನ್ನು ಹಾಡುವಾಗ ರಾಗಧ್ವನಿ ವ್ಯತ್ಯಾಸದಿಂದಲೂ ಮುಖಭಾವ

ವ್ಯತ್ಯಾಸದಿಂದಲೂ ಆಜ್ಞೆ ಸೂಚಿಸಲಾಗುತ್ತದೆ, ಬೇಸರ ಸೂಚಿಸಲಾಗುತ್ತದೆ, ಆಗ್ರಹ ಸೂಚಿಸಲಾಗುತ್ತದೆ, ಹೋಗಬೇಡವೆಂಬ ಪ್ರತಿಷೇಧವನ್ನೂ ಸೂಚಿಸಲಾಗುತ್ತದೆ, ಇದು ಅಭಿನಯದ ಕೌಶಲ. ಮಹಾ ವಿದುಷಿ ಬೆಂಗಳೂರು ನಾಗರತ್ನಾಸಾನಿ ಹಾಗೆ ಅಭಿನಯಿಸಿದ್ದನ್ನು ನಾನು ನೋಡಿದ್ದೇನೆ. ನಾನು ಬಾಲ್ಯದಲ್ಲಿ ನೋಡಿದ್ದ ಬೈರಕೂರು ವೆಂಕಟಲಕ್ಷ್ಮಾಸಾನಿ ಕ್ಷೇತ್ರಯ್ಯನ—

ಮೇರಗಾದು ರಮ್ಮನವೇ ನಾ ಸಾಮಿನಿ

ಎಂಬ ಪದವನ್ನು ಹಾಡುವುದರಲ್ಲಿ ದೈನ್ಯವನ್ನೂ ದರ್ಪವನ್ನೂ ಬಗೆಬಗೆಯಾಗಿ ಅಭಿನಯಿಸುತ್ತಿದ್ದಳು.

ಐವತ್ತರವತ್ತು ವರ್ಷಗಳ ಹಿಂದಿನ ನೆಮ್ಮದಿಯ ಕಾಲದಲ್ಲಿ, ದೇವೋತ್ಸವಗಳಲ್ಲಿಯೂ ವಿವಾಹಾದಿ ಶುಭಸದಸ್ಸುಗಳಲ್ಲಿಯೂ ಸಾಮಾಜಿಕ ಸಂತೋಷ ಸಂದರ್ಭಗಳಲ್ಲಿಯೂ ಕ್ಷೇತ್ರಜ್ಞ ಪದ ಗಾಯನಾಭಿನಯಗಳಿಂದ ಸೊಗಯಿಸುವ ನಟುವಾಂಗದವರ ತಾಫಾಕಛೇರಿ ಸಾಮಾನ್ಯವಾಗಿತ್ತು.

ಕ್ಷೇತ್ರಜ್ಞನ ಆಶಯ ನಮಗೆ ಸಂಪೂರ್ಣವಾಗಿ ದೊರಕಬೇಕಾದರೆ ಸಾವಕಾಶವಾದ ಹಾಡಿಕೆಯೂ ಮರ್ಮಚಿತ್ರಣಪಟುವಾದ ಅಭಿನಯವೂ ಸಾಹಿತ್ಯದೊಡನೆ ಒಂದುಗೂಡಿರಬೇಕು. ಮಾತು, ಧಾತು, ಅನುಕೃತಿ— ಈ ಮೂರೂ ಏಕೀಭವಿಸಿದಾಗ ಹೃದಯದ ಸಂಪೂರ್ಣ ಭಾಷೆ.

ಈ ಲೇಖನದೊಡನೆ ಕೆಲವು ಪದಗಳನ್ನು ಕನ್ನಡದ ಭಾವಾನುವಾದದಲ್ಲಿ ಮಾದರಿಗಾಗಿ ಕೊಟ್ಟಿದೆ.

### 1. ಚೇ ಪಟ್ಲ ಕಾವಚ್ಚುನಾ ?

**(ಪ್ರಿಯನೊಡನೆ ಜಗಳವಾಡಿದ್ದ ಒಬ್ಬಳಿಗೆ ಸಖಿ ಬುದ್ಧಿ ಹೇಳುತ್ತಾಳೆ. ಚೇ ಪಟ್ಟು = ಕೈಪಟ್ಟು, ಹಿಡಿಗುದ್ದಾಟ, ಮುಷ್ಟಾಮುಷ್ಟಿ )**

**ರಾಗ: ಬಿಲಹರಿ)** **(ತಾಳ: ಚಾಪು**

ಕೈಪಟ್ಟು ಹೊಡೆ ತರವೇ–ನಿಮ್ಮೊಳ್ ನಿಮಗೆ
ಕೈಪಟ್ಟು ಹೊಡೆ ತರವೇ ॥ ಪಲ್ಲವಿ ॥
ಪೆಟ್ಟಾವುದಾದರು–ಸರಿಯುದಕಹರು ನೀಂ
ಈ ಪಟ್ಟನಲಿ ನಿಮಗಿನಿತು ತಾಳುಮೆಯಿರದೆ ॥ ಅನುಪಲ್ಲವಿ ॥

ಕೋಪವಾರಿಗು ಬಾರದಿಹುದೇ ?—ಮತ್ತೆ
ಕೂಡಿಬಾಳುವ ಜನವರಿದೇ ? ।
ನಾಳೆ ಬರುವೆನೆನಲೊಳಿತೆನ್ನಲಾಗದೆ
ಬಂದಂದವನು ನಿನ್ನ ಪಾಡ ಕೇಳಿದರೇನು ? ॥ ॥ ೧ ॥
ಕಾಮನ ಮಾಳ್ಕೆಯು ಪರಿಯೋ–ಇಲ್ಲ
ಕಮಲಜ ಬರೆದಿಟ್ಟ ಗೆರೆಯೋ ।
ಪ್ರೇಮ ಕೂಡಿದವನ ಕೈ ಮೀರ್ವುದೇಂ ಪೆರ್ಮೆ
ಭಾಮೆ ಮುವ್ವ ಗೋಪಾಲನೊಡನೆ ಇಂತ ;॥ ॥ ೨ ॥

## 2. ಅಯ್ಯಯ್ಯೋ ವೆಗಟಾಯಿತೇ

(ತನ್ನ ಪ್ರಿಯನು ಬಾರದಿರಲು ಕಾರಣವೇನು? ಸುಖಾತಿರೇಕವಿರಬಹುದೇ? ಎಂದು ಒಬ್ಬಾಕೆ ಚಿಂತಿಸುತ್ತಾಳೆ. "ವೆಗಟು" ಎಂದರೆ ಅತಿರೇಕ, ರುಚಿ ಅತಿಯಾದ ದ್ದರಿಂದ ಬಂದ ಬೇಸರಿಕೆ)

ರಾಗ: ನಾದನಾಮಕ್ರಿಯೆ) (ತಾಳ: ತ್ರಿಪುಟ

ಅಯ್ಯಯ್ಯೋ ವೆಗಟಾಯಿತೇ–ಆ ಸ್ವಾಮಿಗೆ ಇಂದು ॥ ಪಲ್ಲವಿ ॥
ಮೈಯೆದೆಗಳನೇರಿ–ಪವ್ವಳಿಸಿದ ಆತಂಗೆ ॥ ಅನುಪಲ್ಲವಿ ॥

* * * *

ಮದಿರಾಕ್ಷಿ ಕೇಳಮ್ಮ–ಮುವ್ವ ಗೋಪಾಲನು ನಾಂ ।
ನಿದುರಿಸೆ ತಬ್ಬಿಂದೆ–ಕದಲಿಪೋಪನೆನೆ ।
ಹೆದರದೆ ಶಯ್ಯೆಯು–ನಾಲ್ಕೂಲೆಗಳೊಳು ನೀಂ ।
ಹೊದಕೆಗೆ ಗಂಟಿಕ್ಕಿ–ಬಿಗಿಯೆಂದಾ ಸ್ವಾಮಿಗೆ ॥

## 3. ನೇರಗಾದು ರಮ್ಮನವೇ

(ಪ್ರಿಯನು ಯಾವುದೋ ಸಣ್ಣ ಸಂಗತಿಯನ್ನು ದೊಡ್ಡದು ಮಾಡಿಕೊಂಡು ಆ ನೆವದಿಂದ ಬಾರದಿರುವುದು ಸರಿಯಲ್ಲ. ಆತನನ್ನು ಬರಹೇಳು—ಎಂದು ಸಖಿಗೆ ಹೇಳು ತ್ತಾಳೆ.)

ರಾಗ: ಶಹಾನ) (ತಾಳ: ತ್ರಿಪುಟ

ತರವಲ್ಲ ಬರಹೇಳೆ ನೀಂ—ಆ ಸ್ವಾಮಿಯ ॥ ಪಲ್ಲವಿ ॥
ಮೊರೆಯು ತಳ್ಳದ ಮುವ್ವ ಗೋಪಾಲ ಸ್ವಾಮಿಯ ॥ ॥ ಅನುಪಲ್ಲವಿ ॥
ಮುಳಿಯುವ ಜನವಿಲ್ಲವೇ–ಅನಿತರೊಳ್ ಒಪ್ಪಿ ।
ಕಲೆಯುವ ಜನವಿಲ್ಲವೇ–ಕೆಳದೀ ಆತಂ ॥
ಛಲವಿಟ್ಟು ಬಾರನಿಲ್ಲಿ–ಬಲು ಬೇಡಿದರೂ ಕೇಳನ್ ।
ಅಲರಂಬಿನುಬ್ಬೆಗ ತಾಳಲಾಗದೇ ಅಮ್ಮ ॥ ॥ ೧ ॥

ಮಮತೆಯಿಂ ಚಿಕ್ಕಂದು–ಮೆಚ್ಚು ಮಾತುಗಳಾಡಿ ।
ಸಮರತಿಗಳ ಮಾಡಿ–ಮೋಹದಿಂದೆನ್ನ ॥

ಅಮುಕಿ ತುಟಿಗೆ ಗಾಯ-ವಮರಿಸಿದವಳೆಂದು ।
ರಮಣೀ ಮುವ್ವ ಗೋಪಾಲನು ರಂಪಸೈದನೆ ॥ ॥ ೨ ॥

## 4. ಎವ್ವಡೇ—ಓ ಭಾಮ, ವೀಡೆವಡೇ

**(ಒಬ್ಬಳು ಪರಕೀಯಳು ತನ್ನನ್ನು ಆಕರ್ಷಿಸಿದ ವರ್ತಮಾನವನ್ನು ಸಖಿಗೆ ಹೇಳಿಕೊಳ್ಳುತ್ತಾಳೆ.)**

**ರಾಗ : ಶಂಕರಾಭರಣ)** **(ತಾಳ : ಚಾಪು**

ಯಾವನೇ-ಓ ಭಾಮೇ-ಅದ್ಯಾವನೇ ‖ ಪಲ್ಲವಿ ‖
ಯಾವನೇ ಭಾಮೆ ನಾಂ-ಪವ್ವಳಿಸಿದ್ದಂದು ।
ಹೂಪಂಬನೆಸೆದು ಈ...ನೋವನಿರಿಸಿಹೋದ ‖ ಅನುಪಲ್ಲವಿ ‖

ಸರಿಹಗಲೊಳವನು ಬಂದು-ತಾನೆ
ನೆರೆ ದಿಟ್ಟನಾಗಿ ಮನೆಹೊಕ್ಕು ।
ಕರೆದೆನ್ನ ಸೆಳೆದು ತಬ್ಬುತಲೆನ್ನ ತುಟಿಯನು
ಕೊರೆದಿಂತು ಗಾಯವ ಮಾಡಿ ತೆರಳಿದನಲ್ಲೇ ‖ ೧ ‖

ಒಡಬಗ್ಗರಿಗೆ ಇದು ಊರೇ ಇಲ್ಲಿ
ಹಿರಿಯರಾರೂ ಇಲ್ಲದವರೇ ।
ನಡುಬೀದಿಯೊಳಗೆ ಈ-ಕಡುಚೋದ್ಯ ಕಂಡು
ನಡಸರೆ ದಾದುಫಿರ್ಯಾದುಗಳನದಾರುಂ ‖ ೨ ‖

ನೀಲಮೇಘಶ್ಯಾಮಲಾಂಗಂ-ಒಳ್ಳೆ
ಮೇಲುಪೀತಾಂಬರಧಾರಂ-ಅವನ್ ।
ಲೀಲೆಯಿಂ ಪದಿನಾರು ಸಾಸಿರ ಗೋವಳ-
ಬಾಲೆಯರನಾಳ ಮುವ್ವ ಗೋಪಾಲನೇಂ ‖ ೩ ‖

# ಪ್ರಗತಿ-ಸ್ವಾತಂತ್ರ್ಯ

[9–2–1940 ರಲ್ಲಿ ಶ್ರೀ ಡಿ. ವಿ. ಗುಂಡಪ್ಪನವರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದಲ್ಲಿ ಉಪಸಂಹಾರ ಭಾಷಣ ಮಾಡಿದರು. ಸಂಘದ ಉಪಾಧ್ಯಕ್ಷರಾದ ಶ್ರೀ ಕೆ. ವಿ. ಪುಟ್ಟಪ್ಪ ನವರು ಅವರ ಪರಿಚಯ ಮಾಡಿಕೊಡುತ್ತ "ಈಗತಾನೆ ಹಾಡಿದ 'ವನಸುಮ' ಇವರ ಜೀವನವನ್ನು ಚೆನ್ನಾಗಿ ಚಿತ್ರಿಸುತ್ತದೆ. ಸಾಧಕರ ಮನಸ್ಸಿನ ಹೊಮ್ಮುಗೆ ಈ ಕವನ. ಇವರ ಸಾಹಿತ್ಯ ಸೇವೆ ಮರದ ಬೇರಿನಂತೆ ಹೊರಗಡೆಗೆ ತೋರಿಸಿಕೊಳ್ಳದೆ ಆಳವಾಗಿ ಇಳಿದು ತುದಿ ಗೊಂಬೆಯ ಹೂಗಳಂತಿರುವ ನಮಗೆ ಚೈತನ್ಯ ಕೊಡುತ್ತಿದೆ. ನಮ್ಮ ನಾಡು ನುಡಿಗಳು ಜೀವಂತ ವಾಗಿರುವ ತನಕ ಇವರ ಕೃತಿಗಳು ಉಳಿದಿರುತ್ತವೆ" ಎಂದರು.]

ಸಾಹಿತ್ಯಕ್ಕೆ ನಾನು ಆಗಂತುಕ. ಈ ಕರ್ನಾಟಕ ಸಂಘವನ್ನು ಸ್ಥಾಪಿಸಿದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳೂ ಇದನ್ನು ಪೋಷಿಸಿಕೊಂಡು ಬಂದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರೂ ನನ್ನನ್ನು ಈ ಕಡೆ ಎಳೆದರು.

ನಾನು ರಾಜಕೀಯದಲ್ಲಿ ಹೆಚ್ಚು ಭಾಗವಹಿಸಿದವನು. ಅಲ್ಲಿ ಮಾತು ಬಹು ಅಗ್ಗವಾಗಿಬಿಟ್ಟಿದೆ. ಅದಿ ಕೇಳಿ ಆತ್ಮಕ್ಕೆ ಬೇಸರವಾಗಿದೆ: ಮಾತಾಡುವುದೇ ಬೇಡ ವೆನ್ನಿಸಿದೆ. ಬಹಳ ದಿನಗಳಿಂದ ನನ್ನ ಮನಸ್ಸಿನಲ್ಲಿ ಏಳುತ್ತಿರುವ ಕೆಲವು ಪ್ರಶ್ನೆಗಳನ್ನು ಕುರಿತು ತಮ್ಮೆದುರಿಗೆ ಗಟ್ಟಿಯಾಗಿ ಆಲೋಚನೆ ಮಾಡುವವನಂತೆ ಭಾಷಣ ಮಾಡು ತ್ತೇನೆ.

**ಸಾಹಿತ್ಯದ ಈಗಿನ ಸ್ಥಿತಿ :** ಕನ್ನಡ ಸಾಹಿತ್ಯ ಬಹಳ ದಿನಗಳಿಂದ ಬೆಳೆಯುತ್ತಿದೆ. ಮುಖ್ಯಭಾಗ ಶುದ್ಧ ಸಾಹಿತ್ಯ—ಕವಿತ್ವ, ಕಥೆ, ನಾಟಕ. ವಿಜ್ಞಾನಗ್ರಂಥ ಬಹಳ ಸ್ವಲ್ಪ; 10–15 ಇದ್ದರೆ ಹೆಚ್ಚು. ಪುಸ್ತಕದ ಮೂಲಕ ಜ್ಞಾನಪ್ರಚಾರ ನಡೆಯ ಬೇಕು; ಹೊಸ ಚೈತನ್ಯ, ಕಾಂತಿ, ಬೆಳಗಬೇಕು; ಜನ ಉದ್ಧಾರವಾಗಬೇಕು. ಇದಕ್ಕೆ ಸಾಹಿತ್ಯದಲ್ಲಿ ಹೊಸ ಗುಣ ಕಾಣಬೇಕು. ಈಗ ಕಥೆ, ಕವಿತ್ವ ಮೊದಲಾದ ಭಾವಾವೇಶ ಪ್ರಧಾನವಾದ ಕೃತಿಗಳೇ ಹೆಚ್ಚಾಗಿವೆ. ಇನ್ನು ಮುಂದೆ ಬುದ್ಧಿಕಾರ್ಯ ಪ್ರಧಾನ ವಾದ ಗ್ರಂಥಗಳು ಹೆಚ್ಚಬೇಕು. ಭಾವಾವೇಶದಿಂದ ಬುದ್ಧಿಗೆ ಪ್ರೇರಣೆಯಾಗುವಂತಿರ ಬೇಕು; ಬುದ್ಧಿಪ್ರೇರಣೆಯಿಂದ ಭಾವಾವೇಶವುಂಟಾಗಬೇಕು. ಹೀಗಾದರೆ ಮಾತ್ರ ಪ್ರಗತಿ ಸಾಧ್ಯವಾದೀತು.

**ಪ್ರಗತಿ ತತ್ತ್ವ :** ಪ್ರಗತಿ ತತ್ತ್ವವನ್ನು (Progress ಪುರೋಗತಿ, ಎಂದರೆ ಮುಂದಕ್ಕೆ ಹೋಗುವುದು) ಕುರಿತ ಮಾತು ಈಗ ರೂಢಿಯಾಗಿದೆ. 'ನಮ್ಮ ಸ್ಥಿತಿ ದಿನದಿನಕ್ಕೆ ಉತ್ತಮವಾಗುತ್ತದೆ, ದುಃಖ ಕಡಮೆಯಾಗುತ್ತದೆ. ಮನುಷ್ಯಪ್ರಯತ್ನ ದಿಂದ, ಧೈರ್ಯ ಸಾಹಸಗಳಿಂದ ಕವಿಗಳು ಕನಸುಕಾಣುವ ಸ್ವರ್ಗವನ್ನು ಇಲ್ಲಿಯೇ ಸಾಧ್ಯಮಾಡಿಕೊಳ್ಳಬಹುದು. ಪರಲೋಕಕ್ಕಾಗಿ ಕಾಯಬೇಕಾಗಿಲ್ಲ'— ಎಂಬುದೇ ಈ ಪ್ರಗತಿ ತತ್ತ್ವದ ತಿರುಳು. ಪ್ರಾಚೀನರಿಗೆ ಈ ಭಾವನೆ ಗೋಚರವಾಗಲಿಲ್ಲ. 'ಒಳ್ಳೆಯ ಕಾಲ ಹಿಂದೆ ಆಗಿಹೋಯಿತು. ಮುಂದೆ ಕ್ಷೀಣಗತಿ. ಇದು ಪ್ರಪಂಚದ ಸ್ವಭಾವ. ಆ ಗತಿಯನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ' ಎಂಬುದು ಅವರ ದೃಢ ನಂಬಿಕೆ. ಇದೇ ದೈವವಾದ. ಪುರಾತನ ಗ್ರೀಕರಲ್ಲಿ ಕೂಡ ಈ ದೈವವಾದವೇ ಕಂಡುಬರುತ್ತದೆ. ಈ ಭಾವನೆ ಬದಲಾಗಿ ಪ್ರಗತಿವಾದ,—ಮಾನವನ ಉತ್ತಮತೆಯ ವಾದ, ಉತ್ಕರ್ಷ ವಾದ—ಪ್ರಾರಂಭವಾದ್ದು 17–18ನೆಯ ಶತಮಾನಗಳಲ್ಲಿ.

**ಪ್ರಗತಿಯ ಚರಿತ್ರೆ :** ಹಿಂದೂಗಳಿಗೆ ಉತ್ಕರ್ಷಮತವಿಲ್ಲ. ಅವರದು ಅವನತಿ ಮತ. ಕ್ರಿಸ್ತನ ಪ್ರಕಾರವೂ ಪರಿಪೂರ್ಣತೆ, ಪರಮಪದವಿ, ಉತ್ತಮತೆ, ಪರಲೋಕ ದಲ್ಲಿಯೇ. ಇದು ದೊರಕುವುದೂ ದೇವರ ಅನುಗ್ರಹದಿಂದ, ಮನುಷ್ಯಪ್ರಯತ್ನ ದಲ್ಲಿ ಆತ ಹೆಚ್ಚು ನಂಬಿಕೆ ಇಟ್ಟಿರಲಿಲ್ಲ. ಪ್ರಗತಿ ಮನುಷ್ಯಪ್ರಯತ್ನ ಮೂಲವಾದದ್ದು.

14–16ನೆಯ ಶತಮಾನಗಳು ಯೂರೋಪಿನಲ್ಲಿ ಹೊಸ ಬೆಳಕು ಹರಡಿದ ಕಾಲ. ಆಗ ಚಿತ್ರ, ಶಿಲ್ಪ ಮತ್ತು ಉಳಿದ ಕಲೆಗಳ ಪುನರುಜ್ಜೀವನ (ರೆನೇಸಾನ್ಸ್) ಆಯಿತು. ಆದರೂ ಸ್ವಪ್ರಯತ್ನದಿಂದ ಮನುಷ್ಯ ಇಲ್ಲಿಯೇ ಸ್ವರ್ಗ ಕಟ್ಟುತ್ತಾನೆ, ದೇವ ಸಮಾನನಾಗುತ್ತಾನೆ ಎಂದು ಆಗಿನವರು ನಂಬಲಿಲ್ಲ. ಉತ್ಕರ್ಷವಾದ ಅವರಿಗೆ ತಿಳಿದಿರಲಿಲ್ಲ.

17–18ನೆಯ ಶತಮಾನಗಳಲ್ಲಿ ಫ್ರೆಂಚರು ಈ ಪ್ರಗತಿವಾದವನ್ನು ಹೂಡಿದರು. ಇದಕ್ಕೆ ವೈಜ್ಞಾನಿಕರ ನೆರವು ಬಹಳ. ವೈಜ್ಞಾನಿಕರು ಪ್ರಯೋಗಪರೀಕ್ಷೆಗಳಿಂದ ಹೊಸ ಹೊಸ ವಿಷಯಗಳನ್ನು ಕಂಡು ತಿಳಿವನ್ನು ಹೆಚ್ಚಿಸಿದರು ; ಮಾನವನ ಸುಖ ಸೌಕರ್ಯ ಗಳನ್ನು ಹೆಚ್ಚು ಮಾಡಿದರು. ವಾಲ್ಟೇರ್, ರೂಸೊ, ಡಿಡೆರೊ ಮೊದಲಾದವರು 'ಮನುಷ್ಯಪ್ರಯತ್ನಕ್ಕೆ ಮಿತಿಯಿಲ್ಲ ; ಮಾನವನ ಶಕ್ತಿಗೆ ಮೀರಿದ ದೈವ ಇರ ಲಾರದು' ಎಂಬ ತತ್ತ್ವವನ್ನು ಬೆಳಗಿಸಿದರು. ಫ್ರಾನ್ಸಿನ ಮಹಾಕ್ರಾಂತಿಯ ಕಾಲದಲ್ಲಿ ಇದು ಇನ್ನೂ ಪ್ರಬಲಿಸಿತು.

ಅಲ್ಲಿಂದೀಚೆಗೆ ಇಂಗ್ಲೆಂಡಿನಲ್ಲಿ ಈ ವಾದ ಅಭಿವೃದ್ಧಿಗೆ ಬಂತು. ಷೆಲ್ಲಿ, ಅವನ ಮಾವ ಗಾಡ್ವಿನ್ ಇಬ್ಬರೂ ಬಹಳ ಪ್ರಚಾರಮಾಡಿದರು. ಷೆಲ್ಲಿ "ಪ್ರೊಮಿಥಿಯಸನ ಬಂಧವಿಮೋಚನ" (Prometheus Unbound) ಎಂಬ ಗ್ರಂಥದಲ್ಲಿ ಮಾನವನ ಪ್ರಗತಿಯ ಚಿತ್ರ ಕೊಟ್ಟಿದ್ದಾನೆ. ಅವನಿಗೆ "ಪರಿಪೂರ್ಣತೆಯ ಕವಿ",

(The Poet of Perfectibility) ಎಂಬ ಹೆಸರು ಬಂತು. ಇಂಗ್ಲೆಂಡಿನಿಂದ ಈ ವಾದ ಜರ್ಮನಿಗೆ ಹರಡಿತು. ಅಲ್ಲಿ ಈ ವಾದದ ಮೇಲೆ ಕೊಂಚ ಶಂಕೆ ಆರಂಭವಾಯಿತು. 'ಪ್ರಪಂಚದ ಗತಿ ಚಕ್ರಗತಿಯಂತೆ ; ಏರಿಳಿತಗಳು ಸಹಜ ; ಮಿತಿಯಿಲ್ಲದ ಉತ್ತಮತೆ ಸುಳ್ಳು' ಎಂಬ ಭಾವನೆ ತೋರಲು ಮೊದಲಾಯಿತು. ಗಯಟೆ ಕವಿ 'ಮನುಷ್ಯರು ಹೆಚ್ಚು ಬುದ್ಧಿವಂತರಾಗುತ್ತಾರೆ, ಚತುರರಾಗುತ್ತಾರೆ. ಆದರೆ ಉತ್ತಮರಾಗುವುದಿಲ್ಲ. ಮನುಷ್ಯರ ವಿಷಯದಲ್ಲಿ ದೇವರಿಗೆ ಹರ್ಷವಿಲ್ಲದಾಗುವ ಒಂದು ಕಾಲ ಬಂದೀತು' ಎಂದರು.

19ನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಪ್ರಗತಿವಾದಕ್ಕೆ ಮತ್ತೆ ಪ್ರಾಬಲ್ಯ ಬಂತು. ಇಂಗ್ಲೆಂಡು ಆಗ ಹಲವು ದೇಶಗಳನ್ನು ಜಯಿಸಿತ್ತು, ವಲಸೆ ನಾಡುಗಳನ್ನು ಕಟ್ಟಿತ್ತು. ವ್ಯಾಪಾರ ಮೊದಲಾದ್ದು ಬೆಳೆಯುತ್ತಿತ್ತು. ಡಾರ್ವಿನ್ ಮೊದಲಾದ ವೈಜ್ಞಾನಿಕರು ಹಲವು ಕ್ಷೇತ್ರಗಳಲ್ಲಿ ಪರಿಶ್ರಮಿಸುತ್ತಿದ್ದರು. ವಿಜ್ಞಾನದ ಹೊಸ ತಿಳಿವಳಿಕೆಯಿಂದ ಕೈಗಾರಿಕೆ ಮೊದಲಾದ ಜನಜೀವನದ ನಾನಾ ಕ್ಷೇತ್ರಗಳಲ್ಲಿ ವಿಶೇಷ ಅಭಿವೃದ್ಧಿಯುಂಟಾಯಿತು. ಇದರ ಫಲವಾಗಿ ಮನುಷ್ಯಪ್ರಯತ್ನದಲ್ಲಿ ನಂಬಿಕೆ ಸಹಜವಾಗಿಯೇ ಹೆಚ್ಚಾಯಿತು. ಮತ್ತೆ ಪ್ರಗತಿವಾದ ಬಲಿಷ್ಠವಾಯಿತು. 19ನೆಯ ಶತಮಾನ ಈ ಪ್ರಗತಿ ತತ್ತ್ವದ ಪ್ರಭುತ್ವಕಾಲ ಎನ್ನಬಹುದು.

ಆ ಕಾಲದಲ್ಲಿ ಇಟಲಿಯಲ್ಲಿ ಮಟ್ಸೀನಿ (Mazzini) ಎಂಬ ಪ್ರಖ್ಯಾತ ಪುರುಷರೊಬ್ಬರಿದ್ದರು. ರಾಜಕೀಯ ರಂಗಕ್ಕೆ ಬಂದಿದ್ದ ಪರಮ ಸಾಧುಗಳಲ್ಲಿ ಅವರೊಬ್ಬರು. ಅವರು 'ದೈವಸಹಾಯದಿಂದ ಮನುಷ್ಯಪ್ರಯತ್ನ ಫಲಿಸಬೇಕು. ದೈವ ಸಹಾಯವಿದ್ದರೆ ಈಡೇರದ ಕಾರ್ಯವಿಲ್ಲ' ಎಂದರು. ಆದರೂ ಇಂಗ್ಲೆಂಡಿನಲ್ಲಿ ದೇವರನ್ನು ಬಿಟ್ಟು ಮನುಷ್ಯಪ್ರಯತ್ನಕ್ಕೇ ಸಾರ್ಥಕತೆಯುಂಟು ಎಂದು ನಂಬಿದ್ದರು.

ವೈಜ್ಞಾನಿಕರ ಕಾರ್ಯಕಲಾಪಗಳಿಂದ ಪ್ರಗತಿವಾದಕ್ಕೆ ಪುಷ್ಟಿ ದೊರೆತಂತೆಯೇ ಬ್ರೌನಿಂಗ್, ಟೆನಿಸನ್ ಮೊದಲಾದ ಕವಿಗಳಿಂದಲೂ ಬೆಂಬಲ ದೊರೆಯಿತು. ಅವರು ಪ್ರಗತಿವಾದವನ್ನು ಪೂರ್ತಿಯಾಗಿ ಒಪ್ಪದಿದ್ದರೂ ದಿನದಿನಕ್ಕೆ ಅಭಿವೃದ್ಧಿಯುಂಟಾಗುವುದು ನಿಜವೆಂದೂ ಅದಕ್ಕಾಗಿ ದುಡಿಯುವುದು ನಮ್ಮ ಧರ್ಮವೆಂದೂ ಸಾರಿದರು.

**ವಿಜ್ಞಾನ ಮತ :** ಪ್ರಗತಿವಾದವನ್ನು ನಂಬಿದ್ದ ವಿಜ್ಞಾನಕ್ಕೂ ಮತಕ್ಕೂ ಮೊದ ಮೊದಲು ವಿರೋಧ ಹುಟ್ಟಿ ಕೊನೆಕೊನೆಗೆ ವೈಜ್ಞಾನಿಕರಿಗೂ ತತ್ತ್ವ ದೂರವಾಯಿತು. ವೈಜ್ಞಾನಿಕರು ಸತ್ಯಾನ್ವೇಷಿಗಳು : ವೇದಾಂತಿಗಳಂತೆಯೇ ಅವರೂ ಅವರ ದಾರಿಯಲ್ಲಿ ಸ್ವಾನುಭವಿಗಳು. ಮತದಲ್ಲಿ ಶ್ರದ್ಧೆಗೆ, ನಂಬಿಕೆಗೆ ಹೆಚ್ಚು ಪ್ರಾಧಾನ್ಯ. ವಿಜ್ಞಾನದಲ್ಲಿ ಬರಿಯ ನಂಬಿಕೆಗೆ ಎಡೆಯಿಲ್ಲ. ಪ್ರಯೋಗ ಪರೀಕ್ಷೆ ಪ್ರತ್ಯಕ್ಷ ದರ್ಶನಗಳಿಗೆ ಪ್ರಾಮುಖ್ಯ.

**ಪ್ರಗತಿಗೊಂದು ಮಿತಿ :** ಪ್ರಗತಿವಾದವನ್ನು ಕಟ್ಟಿದ ವೈಜ್ಞಾನಿಕರಿಂದಲೇ ಅದು ಕದಲಲು ಪ್ರಾರಂಭವಾಯಿತು. ಕೊನೆಯಿಲ್ಲದ ಪ್ರಗತಿ ಸಾಧ್ಯವಿಲ್ಲವೆಂಬ ಸಂಗತಿ

ಗೋಚರವಾಗುತ್ತ ಬಂತು. ಬಾಲ್ಫರ್ ಎಂಬ ತತ್ತ್ವಚಿಂತಕರು 'ಒಬ್ಬನ ಜೀವನದಲ್ಲಿ ಹೇಗೆ ಪ್ರಬಲ ಅಬಲ ಸ್ಥಿತಿಗಳುಂಟೋ ಜನಾಂಗದ ಸ್ಥಿತಿಯಲ್ಲಿಯೂ ಚರಿತ್ರೆಯಲ್ಲಿಯೂ ಹಾಗೆಯೇ ಉನ್ನತಿ ಅವನತಿ ಉಂಟು. ಇದಕ್ಕೆ ಕಾರಣ ಗೊತ್ತಿಲ್ಲ. ಈ ಏರಿಳಿತ ಸ್ವಾಭಾವಿಕ' ಎಂದಿದ್ದಾರೆ. ಡೀನ್ ಇಂಗ್ ಎಂಬವರು 'ಪ್ರತ್ಯೇಕ ವ್ಯಕ್ತಿಗಳಿಗೆ ಪ್ರಗತಿಮಾರ್ಗ ಯಾವಾಗಲೂ ತೆರೆದೇ ಇದೆ. ಆದರೆ ಅದು ಬಹು ಕಡಿದು; ಇಕ್ಕಟ್ಟು. ಕೆಲವರಿಗೆ ಮಾತ್ರ ಅದು ಸಾಧ್ಯವಾದೀತು' ಎಂದಿದ್ದಾರೆ. ಒಂದೊಂದು ಕಾಲದಲ್ಲಿ ಒಂದೊಂದು ವಿಷಯದಲ್ಲಿ ಒಂದೊಂದು ಜನ, ದೇಶ, ಉನ್ನತಿ ಹೊಂದುತ್ತದೆ. ಏಕದೇಶವಾದ ಪ್ರಗತಿ ಮಾತ್ರ ಸಾಧ್ಯ; ಸಾರ್ವತ್ರಿಕ ಪ್ರಗತಿಯಿಲ್ಲ.

ಬ್ಯೂರಿ ಎಂಬ ಚರಿತ್ರಕಾರನೊಬ್ಬನು 'ಪ್ರಪಂಚ ಅಪೇಕ್ಷಣೀಯವಾದ ಕಡೆಗೆ ಮುಂದುವರಿದಿದೆ. ಮುಂದುವರಿಯುತ್ತಿದೆ. ಇನ್ನುಮೇಲೂ ಮುಂದುವರಿಯುತ್ತದೆ. ಎಂಬುದು ಪ್ರಗತಿವಾದದ ಅಭಿಪ್ರಾಯ. ಆದರೆ ಈ ಮುಂಬರಿವು ಅಪೇಕ್ಷಣೀಯವಾದ ಕಡೆಗೇ ಇರಬಹುದು, ಅಪೇಕ್ಷಣೀಯವಲ್ಲದ ಕಡೆಗೆ ಇದ್ದರೂ ಇರಬಹುದು' ಎಂದು ಪ್ರಗತಿಯ ಪರಿಣಾಮ ಒಳ್ಳೆಯದೇ ಆಗುವುದೆಂಬುದರಲ್ಲಿ ಸಂದೇಹವನ್ನು ವ್ಯಕ್ತಪಡಿಸಿದ್ದಾನೆ. ಮತ್ತೊಬ್ಬರು 'ಪ್ರಗತಿಯ ಕತೆ ಮೀನಿನ ಗಾಳವಿದ್ದ ಹಾಗೆ; ಒಳ್ಳೆಯದರ ರುಚಿ ತೋರಿಸಿ ಕಷ್ಟಕ್ಕೆ ಸಿಕ್ಕಿಸುತ್ತದೆ' ಎಂದಿದ್ದಾರೆ. ಈಗ ಪರಸ್ಪರ ವಿರುದ್ಧವಾದ ಭಾವನೆಗಳಿಗೆಲ್ಲ ಪ್ರಗತಿಯನ್ನು ಅನ್ವಯಿಸುತ್ತಿದ್ದೇವೆ. ಮನಸ್ಸಿಗೆ ಭ್ರಮಾದ ಉಂಟುಮಾಡುವ ಮಾತಾಗಿದೆ ಈ ಪ್ರಗತಿ. ಪ್ರಕೃತಿರಹಸ್ಯ ದುರ್ಭೇದ್ಯವಾದ್ದು. ಹಾಗೇ ವಿಜ್ಞಾನದ ಪ್ರಗತಿ ಕೂಡ ಒಂದು ದಿನ ತಟಕ್ಕನೆ ನಿಂತುಬಿಡಬಹುದೇನೊ !

ಹಾಗಾದರೆ ಹಿಂದಿಗಿಂತ ಈಗ ಸ್ಥಿತಿ ಉತ್ತಮವಾಗಿಲ್ಲವೆ ಎಂದು ಕೇಳಬಹುದು. ಬೇರೆಬೇರೆ ಸಂಗತಿಗಳ ತಿಳಿವಳಿಕೆ ಹೆಚ್ಚಿದೆ. ಅವುಗಳ ಉಪಯೋಗಕ್ಕೆ ಬೇಕಾದ ಆತ್ಮವಿವೇಚನೆ ಹೆಚ್ಚಿಲ್ಲ. ನಿತ್ಯಜೀವನಕ್ಕೆ ಬೇಕಾದ ಪ್ರಜ್ಞೆ ಹೆಚ್ಚಿಲ್ಲ. ಈ ಸದಸದ್ವಿವೇಚನೆಯ ವಿಷಯದಲ್ಲಿ ನಾವು ಉಪನಿಷತ್ಕಾಲಕ್ಕಿಂತ, ರಾಮಾಯಣ ಮಹಾಭಾರತಗಳ ಕಾಲಕ್ಕಿಂತ ಮುಂದೆ ಹೋಗಿಲ್ಲ. ವಿಷಯಜ್ಞಾನ ಹೆಚ್ಚಿ ವಿವೇಕ ಇದ್ದಂತೆಯೇ ಇದೆ. ಟೆನಿಸನ್ ಹೇಳುವಂತೆ, 'ತಿಳಿವು ಬರುತ್ತದೆ : ಆದರೆ ವಿವೇಕ ತಡಮಾಡುತ್ತದೆ.' (Knowledge comes; but wisdom lingers.)

**ಮನುಷ್ಯಪ್ರಯತ್ನ–ಸ್ವಾತಂತ್ರ್ಯ :** ಹಾಗಾದರೆ ಪ್ರಗತಿ ಇಲ್ಲವೇ ಇಲ್ಲವೆ? ಮನುಷ್ಯಪ್ರಯತ್ನಕ್ಕೆ ಅವಕಾಶವಿಲ್ಲವೆ ? ಫಲವಿಲ್ಲವೆ ?— ಎಂಬ ಪ್ರಶ್ನೆಗಳು ಏಳುತ್ತವೆ. ಡೀನ್ ಇಂಗ್ ಹೇಳುವಂತೆ ಸ್ವಲ್ಪಮಾತ್ರ ಪ್ರಗತಿ ಉಂಟು. ಉತ್ಕರ್ಷಕ್ಕಾಗಿ, ಅಭಿವೃದ್ಧಿಗಾಗಿ ದುಡಿಯುವುದು ಮನುಷ್ಯನ ಅಧಿಕಾರ. ಮನುಷ್ಯಪ್ರಯತ್ನಕ್ಕೆ ಸ್ಥಾನವಿಲ್ಲದಿದ್ದರೆ ಪಾಪಪುಣ್ಯಗಳು ಕರ್ಮದ ಫಲ ಎಂಬ ಮಾತಿಗೆ ಅರ್ಥವಿಲ್ಲ. ಜೀವಕ್ಕೆ ಸ್ವಾತಂತ್ರ್ಯ ಉಂಟು. ಸ್ವಾತಂತ್ರ್ಯದ ಜೊತೆಗೆ ಜವಾಬ್ದಾರಿಯೂ ಉಂಟು.

ಹಿಂದುಗಳಲ್ಲಿ ದೈವವಾದ—ಎಂದರೆ ‘ಅದೃಷ್ಟವಿದ್ದಂತೆ ಆಗುತ್ತದೆ; ನಮ್ಮ ಪ್ರಯತ್ನವೇನೂ ಇಲ್ಲ’ ಎಂಬ ವಾದ—ಪ್ರಬಲವಾಗಿದೆ. ‘ಈಸಬೇಕು, ಇದ್ದು ಜೈಸಬೇಕು’ ಎಂಬ ಪ್ರಚಾರ ಕಡಮೆಯಾಗಿದೆ. ಬುದ್ಧಿಯ ಮಾರ್ಗದಲ್ಲಿ ನಡೆಯುವವರು, ಚೆನ್ನಾಗಿ ವಿವೇಚನೆ ಮಾಡಿ ಕೆಲಸ ಮಾಡುವವರು, ದೈವವಾದವನ್ನೇ ಪಟ್ಟುಹಿಡಿಯದೆ ತಮ್ಮ ಸ್ವಾತಂತ್ರ್ಯದ ಅಳವನ್ನರಿತು ಪಾಪದೂರರಾಗಿ ಬಾಳುತ್ತಾರೆ.

ಭಾವಾವೇಶ ಬುದ್ಧಿಕಾರ್ಯವಾಗಿ ನಡೆಯಬೇಕು; ಬುದ್ಧಿ ಬೆಳೆಯಬೇಕು. ‘ನಮ್ಮ ಬುದ್ಧಿಯನ್ನು ಪ್ರಚೋದಿಸು’ (ಧಿಯೋ ಯೋ ನಃ ಪ್ರಚೋದಯಾತ್) ಎಂಬುದು ನಮ್ಮ ಪ್ರಾರ್ಥನೆ. ವಿಮರ್ಶನ ವಿವೇಚನಗಳು ಬುದ್ಧಿಯ ಕಾರ್ಯ, ಅದರ ಲಕ್ಷಣ. ಈಗ ಸುಮ್ಮನೆ ಮಂತ್ರೋಚ್ಚಾರ ಮಾಡುವುದು ರೂಢಿಯಾಗಿ, ಸ್ವತಂತ್ರ ವಿವೇಚನೆ ಇಲ್ಲವಾಗಿದೆ. ಸ್ವತಂತ್ರವಾಗಿ ವಿಚಾರಮಾಡಿ ಸರಿತೋರಿದರೆ ಒಪ್ಪಿಕೊಳ್ಳಬೇಕು. ಈಗ ಸ್ವಬುದ್ಧಿ ಜವಾಬ್ದಾರಿ ಹೊರುವ ಅಭ್ಯಾಸ ಕಡಮೆಯಾಗಿದೆ. ದೇವರ ಮೇಲೆ ಜವಾಬ್ದಾರಿ ಹಾಕುವ ಅಭ್ಯಾಸ ಹೆಚ್ಚಾಗಿಬಿಟ್ಟಿದೆ.

ನಮ್ಮ ಉಪದೇಶ, ತತ್ತ್ವ ಎಲ್ಲಿಂದಲೇ ಬರಲಿ ನಾವು ಸ್ವಂತವಾಗಿ ವಿಚಾರ ಮಾಡಿ ತೀರ್ಮಾನಕ್ಕೆ ಬರಬೇಕು. ಇದು ನಮ್ಮ ದೊಡ್ಡ ಜವಾಬ್ದಾರಿ. ಧರ್ಮದ ಮಾತೇ ಆಗಲಿ, ರಾಜಕೀಯ ಸಾಮಾಜಿಕಾದಿಗಳಿಗೆ ಸಂಬಂಧಿಸಲಿ, ಮಾತು ಎಲ್ಲಿಯೋ ಹುಟ್ಟಿದ್ದಿರಲಿ, ಎಂಥ ನಾಡ ಹಿರಿಯರ ಬಾಯಿಂದಲೇ ಬಂದಿರಲಿ, ಅದನ್ನು ಪರ್ಯಾಲೋಚಿಸಿ ತೂಗಿ, ಆಮೇಲೆ ನಿರ್ಧಾರಕ್ಕೆ ಬರುವ ಹೊಣೆ ಎಲ್ಲರ ಮೇಲೂ ಹೊತ್ತಿರುತ್ತದೆ. ಸ್ವಾತಂತ್ರ್ಯ ಪರಿಮಿತವೇನೋ ಹೌದು. ಇರುವ ಸ್ವಾತಂತ್ರ್ಯವನ್ನು ಪೂರ್ಣವಾಗಿ ಉಪಯೋಗಿಸಬೇಕಾದ್ದು ಮನುಷ್ಯನ ಧರ್ಮ, ಕರ್ತವ್ಯ.

ಪ್ರಪಂಚವೊಂದು ಅಶ್ವತ್ಥವೃಕ್ಷದಂತೆ (ಊರ್ಧ್ವಮೂಲಮಧಶ್ಶಾಖಮಶ್ವತ್ಥಂ ಪ್ರಾಹುರವ್ಯಯಂ). ಇದರ ಬೇರು ಮೇಲೆ. ದೇವರಲ್ಲಿ. ಕೊಂಬೆಗಳು ಕೆಳಗೆ; ಸಮಸ್ತ ಜೀವರಾಶಿಗಳೂ ಕೊಂಬೆಗಳು. ಈ ಮರ ಒಂದು ದಿನ ಇದ್ದಂತೆ ಮರುದಿನ ಇರುವುದಿಲ್ಲ. ಒಂದು ಕಡೆ ಬಾಡುತ್ತಿದ್ದರೆ ಇನ್ನೊಂದು ಕಡೆ ಚಿಗುರುತ್ತಿರುತ್ತದೆ. ಬಾಡುವುದು ಕಡಮೆಯಾಗಿ ಚಿಗುರುವುದು ಹೆಚ್ಚಾಗುವಂತೆ ಮನುಷ್ಯ ಪ್ರಯತ್ನಿಸಬೇಕು.

ಲೋಕೋದ್ಧಾರಕ್ಕಾಗಿ ಕೆಲಸ ಮಾಡುತ್ತಿದ್ದೇವೆಂದು ಯಾರೂ ತಿಳಿದುಕೊಳ್ಳಬಾರದು. ನಮ್ಮ ಪ್ರಯತ್ನ ನಮ್ಮ ಏಳ್ಗೆಗಾಗಿ. ನಮ್ಮ ಬಾಳಿನ ಸಫಲತೆಗಾಗಿ, ನಮ್ಮ ಜೀವಸಂಸ್ಕಾರಕ್ಕಾಗಿ.

[ಕನ್ನಡ ನುಡಿ : ಫೆಬ್ರವರಿ 19, 1940]

# ಶಾಸನ ರಚನೆ ಮತ್ತು ಪ್ರಜಾಭಿಪ್ರಾಯ

1

ನಮ್ಮ ದೇಶದಲ್ಲಿ ಈಚೆಗೆ ಹೊಸಹೊಸ ಕಾನೂನುಗಳು ಮಳೆಗಾಲದ ಝರಿ ತೊರೆಗಳಂತೆ ಉಬ್ಬುಬ್ಬಿ ಬರುತ್ತಿವೆ. ಅವು ಗಾತ್ರದಲ್ಲಿ ವಿಪರೀತವಾಗಿರುವುದು ಮಾತ್ರವೇ ಅಲ್ಲ ; ಅವುಗಳ ವಿಷಯ ವಿವಿಧತೆ ಭ್ರಾಂತಿಕಾರಕವಾಗಿದೆ ಮತ್ತು ಅವುಗಳ ವಿವರಾಂಶಗಳನ್ನು ಗ್ರಹಿಸಿ ಮನಸ್ಸಿನಲ್ಲಿ ರೂಪಿಸಿಕೊಳ್ಳುವುದು ಅಸಾಧ್ಯವಾಗಿದೆ. ಈ ಶಾಸನಪ್ರವಾಹವನ್ನು ಯಾರಾದರೂ ಪರೀಕ್ಷಿಸಿ ನೋಡುತ್ತಿದ್ದಾರೆಯೆ ? ಶಾಸನದ ಮಂತ್ರಿಗಳಾದರೂ ತಾವು ಮಾಡುತ್ತಿರುವ ಕೆಲಸದ ಆಧಾರವೇನು, ಪರಿಣಾಮವೇನು ಎಂಬುದನ್ನು ತಳಮುಟ್ಟ ಶೋಧನೆ ಮಾಡಿದ್ದಾರೆಯೇ ?

ರಾಜ್ಯಶಾಸನವು ಪ್ರಜಾಭಿಪ್ರಾಯದ ಪ್ರತಿಬಿಂಬವೆಂಬುದು ಪ್ರಜಾರಾಜ್ಯ ಪದ್ಧತಿಯ ಮೂಲ ತತ್ವ. ರಾಜ್ಯದ ಸಮಸ್ತ ಆಡಳಿತಗಳೂ ಶಾಸನದಂತೆ ನಡೆಯಬೇಕಾದವು ; ಶಾಸನವಾದರೋ ಜನದ ಇಷ್ಟಕ್ಕನುಸಾರವಾಗಿ ನಡೆಯಬೇಕಾದದ್ದು. ಈಗ ಬಂಡಿಬಂಡಿಯಾಗಿ ನಡೆಯುತ್ತಿರುವ ಶಾಸನಕಲಾಪವು ಜನದ ಅಭಿಪ್ರಾಯದ ಮೇರೆಗೇ ಆಗುತ್ತಿದೆಯೆ? ಜನಕ್ಕೆ ಅವರ ನಿಜಸ್ವರೂಪದ ಅರಿವಾದರೂ ಇದೆಯೆ ?

ರಾಜಕೀಯದಲ್ಲಿ ಅಧಿಕಾರಕ್ಕಾಗಿ ಪಕ್ಷ ಕಕ್ಷಿಗಳು ಹಾರಾಡಿ ಹೋರಾಡುವುದು ಸ್ವಾಭಾವಿಕ. ಅವು ತಮ್ಮ ತಮ್ಮ ಮೇಲ್ಮೆಯನ್ನು ತೋರ್ಪಡಿಸಿಕೊಳ್ಳುವುದಕ್ಕೋಸ್ಕರ ಹೊಸಹೊಸ ಕಾನೂನುಗಳನ್ನು ಹೊಸಹೊಸ ಕಾರ್ಯ ಯೋಜನೆಗಳನ್ನು ದೇಶದ ಮುಂದಿರಿಸುತ್ತವೆ. ಪ್ರತಿಯೊಂದು ಪಕ್ಷವೂ ಭೂಮಿಗೆ ಸ್ವರ್ಗವನ್ನು ತಂದಿರಿಸಲು ತನ್ನದೇ ಮೆಹನತ್ತೆಂದೂ ಮೆಚ್ಚಿಕೆ ಪಡೆಯುವ ಮೇಲ್ಪೋಟಿಯಲ್ಲಿ ಶಾಸನ ಪುಸ್ತಕದ ಗಾತ್ರವನ್ನು ಮತ್ತಷ್ಟು ಬೆಳೆಸುತ್ತದೆ. ಶಾಸನಸಭೆಗಳಲ್ಲಿರುವವರು ತಾವೇನೂ ಸುಮ್ಮನೆ ಕುಳಿತಿಲ್ಲವೆಂದು ತೋರಿಸಿಕೊಳ್ಳುವುದಕ್ಕೂ ಕಾನೂನು ಕಡತದ ಹೊರೆಯನ್ನು ದೊಡ್ಡದು ಮಾಡಬೇಕಾಗುತ್ತದೆ. ಪಕ್ಷದಲ್ಲಿ ಸಂಖ್ಯಾಬಲವಿದ್ದರೆ ಶಾಸನ ರಚನೆ ಕಷ್ಟವಲ್ಲ. ಕಷ್ಟವಾದದ್ದು ಆಡಳಿತ. ಶಾಸನಕ್ಕೆ ಬೇಕಾದದ್ದು ಕಾಗದ, ಮಸಿ. ಈ ಕೆಲಸ ಹೀಗೆ ಅಗ್ಗವಾದದ್ದಾದ ಕಾರಣ ಹಾಗೂ ಹೀಗೂ ಕಾನೂನು ಬೆಳೆಯುತ್ತದೆ.

ಅವಕ್ಕೆ ತಕ್ಕಂತೆ ಜನದ ಸುಖಸಂಪತ್ತು ಬೆಳೆಯುತ್ತಿದೆಯೆಂಬುದು ಮಾತ್ರ ಖಾತರಿಯ ಮಾತಲ್ಲ.

ನಮ್ಮಲ್ಲಿ ಈಗ ಶಾಸನರಚನೆ ಆಗುತ್ತಿರುವ ರೀತಿಯನ್ನು ನೋಡೋಣ: ಪ್ರಜೆ ಚುನಾವಣೆ ಮಾಡಿದ ಪ್ರತಿನಿಧಿಗಳು ನಮ್ಮ ಶಾಸನಸಭೆಗಳಲ್ಲಿ ಇರುತ್ತಾರೆಂಬುದು ನಿಜ. ಆದರೆ ಅವರು ಕೆಲಸಮಾಡುವ ಕ್ರಮ ಹೇಗೆ? ಶಾಸನಸಭೆಯ ಒಳಗಡೆ ಎರಡು ಮೂರು ರಾಜಕೀಯ ಪಕ್ಷಗಳಿವೆ. ಆ ಪಕ್ಷಗಳಲ್ಲಿ ಕಾಂಗ್ರೆಸ್ ಪಕ್ಷದ ಸಂಖ್ಯೆ ಮಿಕ್ಕವು ಗಳಿವಕ್ಕಿಂತ ದೊಡ್ಡದು. ಆದಕಾರಣ ಕಾಂಗ್ರೆಸ್ ನಾಯಕರು ಮಂತ್ರಿಪದವಿಗಳಲ್ಲಿ ಇರುತ್ತಾರೆ. ಇದು ನ್ಯಾಯವಾದದ್ದೇ. ಕಾಂಗ್ರೆಸ್ ಪಕ್ಷದ ಶಾಸನಸಭಾಸದಸ್ಯರಾದರೋ ತಮ್ಮ ಪಕ್ಷದ ನಾಯಕರ ಹಿಡಿತಕ್ಕೆ ಒಳಪಟ್ಟವರಾಗಿರುತ್ತಾರೆ. ಹೀಗೆ ಈ ಪ್ರಬಲ ಪಕ್ಷದ ಶಾಸನ ಸದಸ್ಯರು ತಮ್ಮ ನಾಯಕರ ಅಧೀನದಲ್ಲಿ ಒಂದು ಪಂಗಡವಾಗಿ ಯಾವ ಯಾವ ಕಾನೂನು, ಯಾವಯಾವ ಕಾರುಬಾರು ಆಗಬೇಕೆಂಬದನ್ನು ತಮ್ಮ ಪಕ್ಷ ಸಭೆ ಯಲ್ಲಿ ನಿರ್ಣಯಿಸಿ ಕೊಳ್ಳುತಾರೆ. ಈ ಏಕಪಕ್ಷದ ನಿರ್ಣಯವೇ ಕೆಲವು ದಿನವಾದ ಬಳಿಕ ಶಾಸನ ಸಭೆಯ ಮುಂದೆ ಕಾನೂನಿನ ಮಸೂದೆಯಾಗಿ, ಅಥವಾ ಕರಡು ಠರಾವಾಗಿ ಅವತರಿಸುತ್ತದೆ. ಶಾಸನಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಸಂಖ್ಯೆ ದೊಡ್ಡದಾದ ಕಾರಣ ಆ ಪಕ್ಷದ ಒಳಗಣ ತೀರ್ಮಾನವೇ ಶಾಸನ ಸಂಸ್ಥೆಯಲ್ಲಿ ಆ ಸಂಸ್ಥೆಯ ಹೊರಗಣ ತೀರ್ಮಾನವಾಗುತ್ತದೆ. ಎಂದರೆ ಈಗಣ ಶಾಸನ ರಚನೆಯೆಲ್ಲಾ ಏಕಪಕ್ಷದ ಕೈವಾಡವೆಂಬುದು ಸ್ಪಷ್ಟವಾಗಿದೆ.

ಕಾಂಗ್ರೆಸ್ ಪಕ್ಷವೇ ಸಮಸ್ತದೇಶದ ಏಕೈಕ ಪ್ರತಿನಿಧಿಯೆನ್ನುವ ಪಕ್ಷದಲ್ಲಿ ಇನ್ನು ಬೇರೆಯಾಗಿ ಶಾಸನಸಭೆ ಇರುವುದೇತಕ್ಕೆ? ಹಾಗಲ್ಲದೆ, ಕಾಂಗ್ರೆಸ್ ಪಕ್ಷವು ದೇಶವೆಲ್ಲ ಅಲ್ಲ, ದೇಶದ ಒಂದು ಭಾಗ ಮಾತ್ರ: ದೇಶದ ಮಿಕ್ಕ ಭಾಗ ಇತರ ಪಕ್ಷಗಳಲ್ಲಿಯೂ, ನಿಷ್ಪಾಕ್ಷಿಕ ಜನದಲ್ಲಿಯೂ ನಿಂತಿದೆ—ಎಂದು ಹೇಳುವುದಾದರೆ ಆ ಇತರ ಪಕ್ಷಗಳ ಮತ್ತು ನಿಷ್ಪಾಕ್ಷಿಕರ ಪ್ರತಿನಿಧಿಗಳು ಶಾಸನಸಭೆಯಲ್ಲಿ ಅಲ್ಪಸಂಖ್ಯಾತರಾಗಿ ಅಶಕ್ತ ರಾಗಿದ್ದಾರೆಂಬುದನ್ನು ನಾವು ಆಲೋಚಿಸಬೇಕಾಗಿದೆ. ಅವರಿಗೆ ದೇಶದ ಮಹಾಜನ ಬೆಂಬಲ ಕೊಟ್ಟಲ್ಲದೆ ಪ್ರತಿಪಕ್ಷ ಸ್ತರ ಕೆಲಸ ಸಾರ್ಥಕವಾಗದು.

2

ತತ್ತ್ವವನ್ನು ನೋಡುವುದಾದರೆ ಶಾಸನ ಸಭೆಯೊಳಗಣ ಪಕ್ಷಕಕ್ಷಿಗಳ ಬಲಾಬಲ ಗಳು ಹೇಗೇ ಇರಲಿ ಆ ಸಭೆಯ ಕಾರ್ಯಕಲಾಪಗಳನ್ನು ಸರ್ವಪಕ್ಷಾತೀತರಾದ ರಾಷ್ಟ್ರಕ ಜನರು ಸ್ವತಂತ್ರ ಬುದ್ಧಿಯಿಂದ ಪರೀಕ್ಷಿಸಿ ವಿಮರ್ಶೆ ಮಾಡಬೇಕಾದದ್ದು ಕರ್ತವ್ಯ ವಾಗಿದೆ. ರಾಷ್ಟ್ರಕಧರ್ಮವನ್ನು ಎರಡೇ ಮಾತುಗಳಲ್ಲಿ ಹೇಳಬೇಕಾದರೆ ಅದು ಹೀಗೆ: (1) ಶಾಸನ ವಿಧೇಯತೆ—ಎಂದರೆ ಕಾನೂನು ಕಾಯಿದೆಗಳನ್ನು ತಿಳುವಳಿಕೆಯಿಂದಲೂ, ಪ್ರಾಮಾಣಿಕತೆಯಿಂದಲೂ ಪರಿಪಾಲಿಸುವುದು. (2) ಶಾಸನ ವಿಮರ್ಶನೆ— ಎಂದರೆ ಕಾನೂನುಕಟ್ಟಳೆಗಳಲ್ಲಿಯೂ ಅವುಗಳ ಆಡಳಿತದಲ್ಲಿಯೂ ಇರಬಹುದಾದ ದೋಷ

ಗಳನ್ನೂ ಲೋಪಗಳನ್ನೂ ನಿರ್ಭಯವಾಗಿ ಎತ್ತಿತೋರಿಸಿ ಪರಿಷ್ಕಾರಗಳನ್ನು ಮಾಡಿ ಸುವುದು. ಈ ಎರಡು ಕರ್ತವ್ಯಗಳಲ್ಲಿ ಮೊದಲನೆಯದನ್ನು ನಮ್ಮ ಜನ ಒಂದು ರೀತಿಯಲ್ಲಿ ನಡೆಸುತ್ತಾರೆ. ವಿಧೇಯತೆ ನಮಗೆ ಬಹುಕಾಲದಿಂದ ಅಭ್ಯಾಸವಾಗಿ ಬಂದಿರುವ ಗುಣ. ನಾವು ಸರ್ಕಾರಕ್ಕೆ ಎದುರುಬೀಳುವ ಜನವಲ್ಲ. ಶಾಸನವು ನಮಗೆ ಇಷ್ಟವೋ, ಅನಿಷ್ಟವೋ ; ಅವರ ಅರ್ಥವೇನೋ, ಸ್ವರೂಪವೇನೋ—ಅದನ್ನು ಹೇಗಿದ್ದರೂ ನಡೆಸಿಕೊಡುತ್ತೇವೆ. ಆದರೆ ಅರ್ಥಜ್ಞಾನದಿಂದಲೂ ಯುಕ್ತಾಯುಕ್ತ ವಿವೇಚನೆಯಿಂದಲೂ ಸಲ್ಲಿಸುವ ವಿಧೇಯತೆಯೇ ನ್ಯಾಯವಾದದ್ದು, ಮತ್ತು ಹಿತಕರ ವಾದದ್ದು. ಅಂಥ ವಿವೇಕಪೂರ್ವಕ ವಿಧೇಯತೆ ಈಗ ನಮ್ಮಿಂದ ರಾಜ್ಯಕ್ಕೆ ದೊರೆಯು ತ್ತಿದೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾದೀತು.

ಶಾಸನಕ್ಕೆ ನಾವು ಸಲ್ಲಿಸುವ ವಿಧೇಯತೆಯು ಬುದ್ಧಿಪೂರ್ವಕವಾಗಿರಬೇಕು ಎಂದು ಹೇಳಿದ್ದರಿಂದಲೇ ಶಾಸನವನ್ನು ನಾವು ಅರ್ಥಮಾಡಿಕೊಂಡು ಒಪ್ಪಿರಬೇಕೆಂಬುದು ಸಿದ್ಧ ವಾಗುತ್ತದೆ. ಅಂಥ ಸ್ವಬುದ್ಧಿಪೂರ್ವಕವಾದ ಸಮ್ಮತಿಯೆಂಬುದರಲ್ಲಿಯೇ ರಾಷ್ಟ್ರಕನ ಎರಡನೆಯ ಕರ್ತವ್ಯವಾದ ಸ್ವತಂತ್ರ ವಿಮರ್ಶನೆಯೆಂಬುದು ಅಡಗಿದೆ. ಈ ವಿಮರ್ಶನೆಯ ಕರ್ತವ್ಯ ನಮ್ಮ ಮಹಾಜನರಿಂದ ಈಗ ತಕ್ಕಷ್ಟು ಚೆನ್ನಾಗಿ ನಡೆಯು ತ್ತಿಲ್ಲವೆಂಬುದನ್ನು ಎಲ್ಲರೂ ಒಪ್ಪಲೇಬೇಕು. ಸರ್ಕಾರದ ಮಂತ್ರಿಗಳೂ ಇತರ ಶಾಸನ ಸದಸ್ಯರೂ ಆಗಿಂದಾಗ್ಗೆ ತರುವ ಶಾಸನ ಸೂಚನೆಗಳನ್ನೂ, ಕಾರ್ಯಯುಕ್ತ ಸೂಚನೆಗಳನ್ನೂ ಸ್ವತಂತ್ರ ದೃಷ್ಟಿಯಿಂದ ಯಾರೂ ಪರೀಕ್ಷೆಮಾಡುತ್ತಿಲ್ಲ. ಈ ಕೆಲಸವನ್ನು ನಡೆಸಲು ತಕ್ಕ ಸಾಮರ್ಥ್ಯವುಳ್ಳ ಜನರು ನಮ್ಮ ದೇಶದಲ್ಲಿ ಇಲ್ಲವೆಂದಲ್ಲ. ಸರ್ಕಾರದ ಹುದ್ದೆಗಳಲ್ಲಿದ್ದು ವಿಶ್ರಾಂತರಾಗಿರುವವರೂ, ಜಡ್ಜಿಪದವಿಯಿಂದ ನಿವೃತ್ತ ರಾಗಿರುವವರೂ, ಲಾಯರುಗಳೂ, ಭಾರೀ ವ್ಯವಹಾರಗಾರರೂ, ಮೊದಲಾದವರೂ ನಮ್ಮ ದೇಶದಲ್ಲಿ ಬೇಕಾದಷ್ಟು ಮಂದಿ ಇದ್ದಾರೆ. ಅವರಲ್ಲಿ ಯಾರೂ ಶಾಸನರಚನೆಯ ಪರೀಕ್ಷೆಯ ಕೆಲಸಕ್ಕೆ ಕೈಹಚ್ಚುತ್ತಿಲ್ಲ. ನಮ್ಮ ವೃತ್ತಪತ್ರಿಕೆಗಳೂ ಈ ಅವಶ್ಯ ಕಾರ್ಯಕ್ಕೆ ಗಮನ ಕೊಡುತ್ತಿಲ್ಲ. ಹೀಗಾಗಿ ಕಾಂಗ್ರೆಸ್ ನಾಯಕರ ಬುದ್ಧಿಗೆ ಯಾವ ಕ್ಷಣಕ್ಕೆ ಯಾವುದು ಸರಿಯೆಂದು ತೋರುತ್ತದೆಯೋ ಅದೇ ಅವರ ಮಂತ್ರಿಗಳ ಮೂಲಕ ಶಾಸನ ಸಭೆಯಿಂದ ದೇಶದ ಮೇಲೆ ಹೇರಲ್ಪಡುತ್ತಿದೆ. ಇದು ವಾಸ್ತವವಾದ ಪ್ರಜಾಪ್ರಭುತ್ವವಲ್ಲ. ಇದು ಏಕಪಕ್ಷಪ್ರಭುತ್ವ. ಆದರೆ ಈ ಪರಿಸ್ಥಿತಿಗಾಗಿ ನಿಂದಿಸ ಬೇಕಾದದ್ದು ಕಾಂಗ್ರೆಸ್ ಸಂಸ್ಥೆಯನ್ನಲ್ಲ. ಎಲ್ಲ ದೇಶಗಳಲ್ಲಿಯೂ ಸಾಮಾನ್ಯವಾಗಿ ರಾಜಕೀಯ ಪಕ್ಷಗಳು ಹಿಡಿಯುವಂಥ ಮಾರ್ಗವನ್ನೇ ನಮ್ಮ ದೇಶದಲ್ಲಿ ಕಾಂಗ್ರೆಸ್ ಅನುಸರಿಸುತ್ತಿದೆ. ಒಂದಾನೊಂದು ರಾಜಕೀಯ ಪಕ್ಷವು ಇತರ ಪಕ್ಷಗಳ ಭಯವಿಲ್ಲದಿರು ವಷ್ಟು ಪ್ರಬಲವಾಗಿ ಬೆಳೆದಾಗ ಅದು ನಡೆಯುವುದು ಹೀಗೆಯೇ. ಈಗ ಕರ್ತವ್ಯ ಲೋಪವಿರುವುದು ನಮ್ಮ ಮಹಾಜನವರ್ಗದಲ್ಲಿ. ಶಾಸನ, ಕಾರ್ಯಪರೀಕ್ಷೆಗೆ ಬೇಕಾದ ವಿದ್ಯೆ, ಬುದ್ಧಿ, ಅನುಭವಗಳುಳ್ಳ ಸ್ವತಂತ್ರ ರಾಷ್ಟ್ರಕರು ತಮ್ಮ ಕರ್ತವ್ಯವನ್ನು ಗ್ರಹಿಸಿ ಮುಂದೆಬರುವ ಹೊರತು ನಮ್ಮ ಶಾಸನಗಳು ಸಮರ್ಪಕವಾಗುವ ಭರವಸೆ ಇರದು.

ಶಾಸನವೆಂದರೆ ಪ್ರಜಾವ್ಯಕ್ತಿಗಳ ಮತ್ತು ಪ್ರಜಾಸಮೂಹಗಳ ನಡವಳಿಕೆಯ ತಿದ್ದುಪಾಟು. ಯಾವುದೋ ಒಂದು ವಿಷಯದಲ್ಲಿ ಈಗಿರುವ ಏರ್ಪಾಟುಗಳು ಸರಿಯಾಗಿಲ್ಲವೆಂದು ಅವನ್ನು ಬದಲಾಯಿಸಹೊರಡತಕ್ಕದ್ದು ಕಾನೂನು. ಆ ಬದಲಾವಣೆಯಿಂದ ಕೆಲವು ಜನಕ್ಕೆ ಅನುಕೂಲವೂ, ಹಾಗೆಯೇ ಕೆಲವು ಜನಕ್ಕೆ ಪ್ರತಿಕೂಲವೂ ಆಗುವುದು ಖಂಡಿತ. ಈ ಅನುಕೂಲತೆ ಅನನುಕೂಲತೆಗಳ ಕಾರಣದಿಂದ ಜನರು ತಮ್ಮ ತಮ್ಮ ಪರಸ್ಪರ ವ್ಯವಹಾರಗಳನ್ನೂ ವ್ಯವಸ್ಥೆಗಳನ್ನೂ ಅಷ್ಟೋ ಇಷ್ಟೋ ಬದಲಾಯಿಸಿಕೊಳ್ಳಲೇಬೇಕಾಗುತ್ತದೆ. ಹೀಗೆ ಜನಜೀವನಕ್ಕೆ ಬಿಕ್ಕಟ್ಟು ಸಡಿಲುಗಳ ಮೇಲು ಚೌಕಟ್ಟಿನಂತಿರುವುದು ಶಾಸನದ ಸ್ವರೂಪ. ಅದು ಎಂಥಾದ್ದಾದರೂ ಅದರಿಂದ ಸಮಾಜವು ಯಾವುದೋ ಅಂತಸ್ತಿನಲ್ಲಿ ಕೊಂಚಮಟ್ಟಿಗಾದರೂ ಕದಲಲೇಬೇಕಾಗುತ್ತದೆ. ಹಾಗೆ ಸಮಾಜವನ್ನೂ ಜನದ ನೆಮ್ಮದಿಯನ್ನೂ ಅಲುಗಿಸಿ ಕುಲುಗಸುವಂಥಾ ಕಾರ್ಯವನ್ನು ಮಹಾಜನರು ಪರೀಕ್ಷಿಸಿ ನೋಡದೆ ಬಿಟ್ಟರೆ ತಮ್ಮ ಯೋಗಕ್ಷೇಮವನ್ನು ತಾವೇ ಕೆಡಿಸಿಕೊಂಡಂತಾದೀತು.

ಶಾಸನ ಪರೀಕ್ಷೆಗೆ ಎಷ್ಟೋ ದೃಷ್ಟಿಸ್ಥಾನಗಳಿರುತ್ತವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ಸೂಚಿಸಬಹುದು :—

3

ಹೊಸ ಕಾನೂನಿಗೆ ವಾಸ್ತವವಾಗಿ ಅವಶ್ಯಕತೆಯುಂಟೆ ? ಅದು ಅವಶ್ಯವೆಂಬುದು ಜನದ ನಿಜವಾದ ಅನುಭವದಿಂದ ಗೊತ್ತಾಗಿರಬೇಕು, ಬರಿಯ ಶಂಕೆ ಊಹೆಗಳ ಮೇಲೆ ಕಟ್ಟಿದ್ದಾಗಿರಬಾರದು. ಆ ಅನುಭವವಾದರೊ ಬಹುಮಂದಿಯದಾಗಿರಬೇಕು. ಅಲ್ಲೊಬ್ಬರು ಇಲ್ಲೊಬ್ಬರು ಮಾತ್ರ ಪಟ್ಟ ಅನುಭವವಾದರೆ ಸಾಲದು. ಮತ್ತು ಅದು ದೀರ್ಘಕಾಲದ ಅನುಭವವಾಗಿರಬೇಕು. ಯಾವುದೋ ಒಂದೆರಡು ವಿಶೇಷಸಂದರ್ಭಗಳ ಅನುಭವದ ಆಧಾರದಿಂದ ಒಂದು ಶಾಸನವನ್ನು ರಚಿಸಹೊರಡುವುದು ಅತಿಪ್ರಯತ್ನವಾದೀತು. ಸಾಲ್ಕನೆಯದಾಗಿ ಈ ಅನುಭವವು ಜನಜೀವನದ ಒಂದು ಮೂಲ ವಿಷಯಕ್ಕೆ ಅಥವಾ ಒಂದು ಮಹಾಪ್ರಸಂಗಕ್ಕೆ ಸಂಬಂಧಪಟ್ಟದ್ದಾಗಿರಬೇಕು. ಸಣ್ಣಪುಟ್ಟ ವಿಚಾರಗಳಿಗೂ ಹಂಗಾಮಿ ಪ್ರಶ್ನೆಗಳಿಗೂ ಶಾಸನಯುಕ್ತವಾಗದು.

## ಶಾಸನವಿಲ್ಲದೆ ಆಗದೆ?

ಎಷ್ಟೋ ಸಮಾಜಕಾರ್ಯಗಳನ್ನು ಶಾಸನನಿರ್ಬಂಧವಿಲ್ಲದೆ ಕೇವಲ ಶಿಷ್ಟಾಭಿಪ್ರಾಯ ಬಲದಿಂದ ನಡೆಸುವುದು ಸಾಧ್ಯವಾಗುತ್ತದೆ. ಜನರಲ್ಲಿ ಮದ್ಯ, ಭಂಗಿ ಮೊದಲಾದ ಎಷ್ಟೋ ದುರಭ್ಯಾಸಗಳನ್ನು ಲೋಕಾಪವಾದದ ಭಯ ತಡೆದಿದೆ. ಸಭ್ಯರ ಆಕ್ಷೇಪಣೆಗೆ ಹೆದರಿ ಎಷ್ಟೋ ಜನ ದುಷ್ಕಾರ್ಯದಿಂದ ವಿಮುಖರಾಗಿರುತ್ತಾರೆ. ನಮ್ಮ ದೇಶದಲ್ಲಿ ಎಷ್ಟೋ ಒಳ್ಳೊಳ್ಳೆಯ ಕೆಲಸಗಳು ಪೂರ್ವಕಾಲದಲ್ಲಿ ಜನದ ಸ್ವಂತ ಸಮ್ಮತಿಯಿಂದಲೇ

ನಡೆಯುತ್ತಿದ್ದವು. ನಮ್ಮ ಹಳ್ಳಿಗಳ ಕೆರೆಕುಂಟೆಗಳು, ನಮ್ಮ ಗುಡಿ ಗೋಪುರಗಳು ಸತ್ರಗಳು, ಮಂಟಪಗಳು ಇವೆಲ್ಲಾ ದೇಶಕ್ಕೆ ಅಪಾರವಾದ ಸಂಪತ್ತಾಗಿವೆ. ಈ ಹೇರಳವಾದ ಲೋಕೋಪಕಾರಗಳು ಶಾಸನದ ನಿರ್ಬಂಧದಿಂದ ಆದುವಲ್ಲ. ಜನದ ಸಹಜೋತ್ಸಾಹವೇ ಆ ಸತ್ಕಾರ್ಯಗಳನ್ನು ಆಗ ಮಾಡಿಸಿದ್ದು. ಮೈಸೂರಿನ ದಿವಾನ್ ರಂಗಾಚಾರ್ಯರೂ, ಸರ್ ಎಂ. ವಿಶ್ವೇಶ್ವರಯ್ಯನವರೂ ಜನದ ಸಮಾಜಾಭಿಮಾನ ದಿಂದಲೇ ದೇಶಕಾರ್ಯಗಳು ನಡೆಯಬೇಕೆಂದು ವಾದಿಸುತ್ತಿದ್ದರು. ವಿಶ್ವೇಶ್ವರಯ್ಯನವರ ಕಾಲದಲ್ಲಿ ಹಳ್ಳಿಯ ಜನರು ವಾರಕ್ಕೊಂದು ದಿನ—ಸಾಮಾನ್ಯವಾಗಿ ಸೋಮವಾರ—ಊರೊಟ್ಟಿನ ಕೆಲಸಕ್ಕಾಗಿ ಮನೆಗೊಬ್ಬಾಳಿನಂತೆ ಬರಬೇಕೆಂದು ಒಂದು ಕಾರ್ಯ ಯೋಜನೆ ಮಾಡಿದ್ದರು. ಅದರಲ್ಲಿ ನಿರ್ಬಂಧವಿರಲಿಲ್ಲ. ಆದರೂ ಅದು ಕೆಲವು ಕಡೆ ಕೆಲವು ದಿನ ಚೆನ್ನಾಗಿಯೇ ನಡೆಯಿತು. ಆ ಏರ್ಪಾಟನ್ನು ಕಾನೂನು ಮೂಲಕ ಶಾಶ್ವತ ಪಡಿಸಬೇಕೆಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಕೆಲಮಂದಿ ಸರ್ಕಾರಕ್ಕೆ ಸಲಹೆ ಕೊಟ್ಟರು. ವಿಶ್ವೇಶ್ವರಯ್ಯನವರು ಅದಕ್ಕೊಪ್ಪಲಿಲ್ಲ. ಸರ್ಕಾರದ ಮತ್ತು ಕಾನೂನಿನ ನಿರ್ಬಂಧ ವಿಲ್ಲದೆ ಖುದ್ದುರಾಜಿಯಿಂದಲೇ ಜನ ಒಳ್ಳೆಯ ಕೆಲಸ ನಡೆಸಬೇಕೆಂಬುದು ಅವರ ಮನೋಗತ. ಅದೇ ನಿಜವಾದ ಸ್ವಾತಂತ್ರ್ಯಪ್ರಿಯರ ಮತ. ಯಾವುದು ನಿರ್ಬಂಧವಾಗಿ ಬರುತ್ತದೆಯೋ ಅದು ಜನದ ಉತ್ಸಾಹವನ್ನು ಮೊಟಕುಮಾಡಿ ಅವರ ಸ್ವಶಕ್ತಿಯನ್ನು ಬೆಳೆಯಬಿಡದೆ ಕುಗ್ಗಿಸುತ್ತದೆ. ಅದು ಸಮಾಜಕ್ಕೆ ಹಾನಿ. ಸದ್ಯಕ್ಕೆ ಲಾಭಕರವೆಂದು ತೋರುವ ಶಾಸನವು ದೂರ ಪರಿಣಾಮದಲ್ಲಿ ನಷ್ಟಕರವಾದೀತು. ಆಗಬೇಕಾದ ಒಳ್ಳೆಯದು ಕಾನೂನಿನ ಮತ್ತು ಸರ್ಕಾರದ ಬಲಾತ್ಕಾರದಿಂದಲ್ಲದೆ, ಕೂಡಿದಮಟ್ಟಿಗೂ ಜನದ ನೈಜಹಿತೋತ್ಸಾಹದಿಂದಲೇ ನಡೆಯುವಂತಾದರೆ ಅದು ಮತ್ತಷ್ಟು ಒಳ್ಳೆಯ ದಾಗುತ್ತದೆ.

ಒಂದು ಹೊಸ ಕಾನೂನಿಗೆ ಜನರ ಮನಸ್ಸನ್ನು ಮುಂದಾಗಿ ಸಿದ್ಧಪಡಿಸಬೇಕಾ ದದ್ದು ದೊಡ್ಡ ಸಂಗತಿ. ಕಾನೂನು ಜನದ ಮೇಲೆ ಸಿಡಿಲು ಗುಡುಗಿನಂತೆ ಹಠಾತ್ತಾಗಿ ಇಳಿಯಬಾರದು. ಅದರ ಅರ್ಥವನ್ನೂ ಸ್ವಭಾವವನ್ನೂ ಮುಂಚಿತವಾಗಿ ಅರಿತು ಕೊಳ್ಳಲು ಜನಕ್ಕೆ ಕಾಲಾವಕಾಶವೂ, ವಿಚಾರ ಸಾಮಗ್ರಿಯೂ ದೊರೆಯಬೇಕು. ಈ ಪೂರ್ವಸಿದ್ಧತೆ ನಮ್ಮ ದೇಶದಲ್ಲಿ ನಡೆಯುತ್ತಲೇ ಇಲ್ಲ. ಇಂಗ್ಲೆಂಡಿನಲ್ಲಿ ಮದುವೆಯಂಥ ಒಂದು ದೊಡ್ಡ ಜೀವನ ವಿಷಯವನ್ನು ಕುರಿತು ಕಾನೂನಾಗಬೇಕಾದರೆ ಅದಕ್ಕೆ ಪೂರ್ವಭಾವಿಯಾಗಿ ನಾಲ್ಕಾರು ವರ್ಷ ಅದು ಮಹಾಜನ ಸಭೆಗಳಲ್ಲಿಯೂ, ವಿದ್ವತ್ಸಂಸ್ಥೆ ಗಳಲ್ಲಿಯೂ, ವೃತ್ತಪತ್ರಿಕೆಗಳಲ್ಲಿಯೂ ಚರ್ಚೆಯಾಗಿರುತ್ತದೆ. ಆ ವಿಷಯದಲ್ಲಿ ಕಾನೂನು ಅವಶ್ಯವೆ ? ಅದು ಹೇಗಿರಬೇಕು ? ಎಂಬ ಪ್ರಶ್ನೆಗಳನ್ನು ಸಕಾರಣವಾಗಿ ಪರ್ಯಾಲೋಚಿಸಿ ವರದಿ ಮಾಡಲು "ರಾಯಲ್ ಕಮಿಷನ್" ಎಂಬಂಥ ಒಂದು ವಿಶೇಷ ಸಮಿತಿ ಏರ್ಪಾಟಾಗುತ್ತದೆ. ಆ ಸಮಿತಿ ದೇಶದ ಎಲ್ಲ ಭಾಗಗಳಿಂದಲೂ ಅಭಿಪ್ರಾಯಗಳನ್ನು ಸಂಗ್ರಹಿಸಿ ಸಂಬಂಧಪಟ್ಟ ಸಂಖ್ಯೆ ಸಂಗತಿಗಳನ್ನು ಪರಿಶೀಲನೆ ಮಾಡಿ ವರದಿ ಬರೆಯುತ್ತದೆ. ಆ ವರದಿಯ ಆಧಾರದ ಮೇಲೆ ಪಾರ್ಲಿಮೆಂಟಿನ ಮಸೂದೆ ತಯಾರಾಗುತ್ತದೆ. ಅದು ಪ್ರಕಟವಾಗಿ ಮಹಾಜನದ ಮುಂದೆ ಅಭಿ

ಪ್ರಾಯದ ಬಗ್ಗೆ ಬರುತ್ತದೆ. ಹೀಗೆ ಸಾವಕಾಶವಾಗಿ ನಡೆಯುವ ಕಾರ್ಯವಿಧಾನದ ಪ್ರತಿಯೊಂದು ಘಟ್ಟದಲ್ಲಿಯೂ ಯಥೇಷ್ಟವಾಗಿ ತಕರಾರುಗಳೂ ವಾದ ಪ್ರತಿವಾದಗಳೂ ನಡೆದು ಅವರಿಂದ ಜನಕ್ಕೆ ಒಂದು ವಿದ್ಯಾಭ್ಯಾಸವಾಗಿ ಅವರ ಮನಸ್ಸು ಹೊಸ ಬದಲಾವಣೆಗೆ ಸಿದ್ಧವಾಗುತ್ತದೆ.

ಹೊಸ ಶಾಸನದ ಸ್ವಭಾವವೂ ಉದ್ದೇಶವೂ ಈ ರೀತಿ ಜನಕ್ಕೆ ಮೊದಲೇ ಮನದಟ್ಟಾಗಿರುವುದರಿಂದ ಆ ಶಾಸನ ಕೊಂಚಮಟ್ಟಿಗಾದರೂ ಸಾರ್ಥಕವಾಗುತ್ತದೆ. ನಮ್ಮಲ್ಲಾದರೋ ಶಾಸನದ ಮಸೂದೆ ದೇಶದಲ್ಲೆಲ್ಲಾ ನಾನಾ ಜನಭಾಷೆಗಳಲ್ಲಿ ಚೆನ್ನಾಗಿ ಪ್ರಕಟವಾಗಿರುವುದು ಕೂಡ ಇಲ್ಲ. ಅದರ ಕರಡು ಪ್ರತಿ ಸಿಕ್ಕುವುದೂ ಕೂಡ ಎಷ್ಟೋ ವೇಳೆ ಕಷ್ಟವೇ. ನೆನಸಿದಾಗ ಕಾನೂನಾಗುತ್ತದೆ ನಮ್ಮ ದೇಶದಲ್ಲಿ.

## 4

ಈಗಣ ಎಷ್ಟೋ ಕಾನೂನುಗಳು ವಿಜ್ಞಾನಶಾಸ್ತ್ರದ ಸಂಗತಿಗಳನ್ನು ಒಳಗೊಂಡಿರುತ್ತವೆ. ಉದಾಹರಣೆಗಾಗಿ, ವಿವಾಹ ಸಂಬಂಧದ ಶಾಸನವು ಮನಶ್ಶಾಸ್ತ್ರಜ್ಞಾನವನ್ನು ವಂಶಾನುಕ್ರಮ (ಹೆರೆಡಿಟಿ) ವಿಜ್ಞಾನವನ್ನೂ ದಾಯಾವಿಭಾಗ ಶಾಸನವು ಲೋಕಾಂತರ ಶ್ರದ್ಧೆಯ ವಿಚಾರವನ್ನೂ ದೇವಾಲಯ ಶಾಸನವು ಆಗಮ ತಂತ್ರ ವಿಶ್ವಾಸವನ್ನೂ ಅವಲಂಬಿಸಿಕೊಂಡಿರುತ್ತವೆ. ಹಾಗೆಯೇ ಆಹಾರ ವಸ್ತು ನಿಯಂತ್ರಣ ಶಾಸನಗಳು ಸಸ್ಯವಿಜ್ಞಾನ, ಜೀವವಿಜ್ಞಾನ ಮೊದಲಾದ ವಿಜ್ಞಾನಶಾಸ್ತ್ರಗಳನ್ನು ಆಶ್ರಯಿಸಿಕೊಂಡಿರುತ್ತವೆ. ದೇಶ ವಿದೇಶ ವ್ಯಾಪಾರಗಳಿಗೆ ಸಂಬಂಧಪಟ್ಟ ಕಾನೂನು ಅರ್ಥಶಾಸ್ತ್ರ ಸೂತ್ರಗಳಿಗೆ ಸಂಬಂಧಪಟ್ಟಿರುತ್ತದೆ. ನಮ್ಮ ಶಾಸನಕರ್ತರುಗಳು ಈ ನಾನಾ ಬಗೆಯ ಶಾಸ್ತ್ರಗಳ ಪರಿಚಯವನ್ನು ಸಂಪಾದಿಸಿಕೊಂಡಿರುತ್ತಾರೆಯೆ? ಅವರು ಮಾಡಬೇಕೆಂದಿರುವ ಶಾಸನಕ್ಕೆ ಇರುವ ವಿಜ್ಞಾನಶಾಸ್ತ್ರದ ಆಧಾರ ಸರಿಯಾಗಿದೆಯೆ ? ಅವರಲ್ಲಿರುವ ಕರ್ಮತಂತ್ರ ವಿಚಾರ (ಟೆಕ್ನಿಕಲ್) ಸರಿಯಾಗಿದೆಯೇ ? ಯಾವ ಶಾಸನಕ್ಕೆ ವಿಜ್ಞಾನತಂತ್ರ ಸಂವಿಧಾನಗಳ ತಳಹದಿ ಭದ್ರವಿಲ್ಲವೋ ಆ ಶಾಸನ ಇಂದಲ್ಲದಿದ್ದರೆ ನಾಳೆ ಮುರಿದುಬೀಳುವುದು ಖಂಡಿತ.

ಕಾನೂನಿನ ಉದ್ದೇಶವು ಸಂಪೂರ್ಣವಾಗಿ ಒಪ್ಪತಕ್ಕದ್ದಾಗಿರಬಹುದು, ಉದಾತ್ತವಾಗಿರಬಹುದು. ಆದರೆ ಅದನ್ನು ಜಾರಿಗೆ ತರುವುದು ಸಾಧ್ಯವೇ ? ಮನುಷ್ಯ ಸ್ವಭಾವದ ಈಗಿನ ಸ್ಥಿತಿಯಲ್ಲಿ ಮತ್ತು ನಮ್ಮ ಸಮಾಜದ ಈಗಿನ ಸಂದರ್ಭಗಳಲ್ಲಿ ಆ ಶಾಸನವನ್ನು ಪ್ರಯೋಗಕ್ಕೆ ತರಲು ನಮಗೆ ಬೇಕಾದ ಉಪಕರಣ ಸಿದ್ಧತೆ ಇದೆಯೇ ? —ಎಂಬುದನ್ನು ನೋಡಬೇಕು. ಮೈಸೂರು ಸಂಸ್ಥಾನದಲ್ಲಿ ಸಣ್ಣ ವಯಸ್ಸಿನವರು ಬೀಡಿ ಸಿಗರೇಟ್ ಸೇದುವುದನ್ನು ತಪ್ಪಿಸುವುದಕ್ಕೆಂದು ಎಷ್ಟೋ ವರ್ಷಗಳ ಹಿಂದೆ ಕಾನೂನು ಮಾಡಿದರು. ಅದರ ಫಲವೇನಾಗಿದೆ ? ಮೊದಲು ಒಂದೆರಡು ದಿನ ಪೊಲೀಸ್ ಇಲಾಖೆಯ ಚಿಲ್ಲರೆ ನೌಕರರು ಸಣ್ಣ ಪುಟ್ಟ ಹುಡುಗರಿಂದ ಒಂದೆರಡು ಕಾಸು ಸುಲಿಗೆ ಮಾಡಿಕೊಳ್ಳುವ ಹಾಗಿತ್ತು. ಆಮೇಲೆ ಅದೂ ನಡೆಯದೇ ಹೋಯಿತು.

ಈಗ ಆ ವಿಚಾರವೇ ಎಲ್ಲರಿಗೂ ಮರೆತುಹೋಗಿದೆ. ಅಂಥಾ ಕಾನೂನಿನಿಂದ ಯಾರಿಗೇನು ಪ್ರಯೋಜನ ? ಸಾಧನ ಸೌಕರ್ಯವಿಲ್ಲದ ಶಾಸನ ದೇಶಕ್ಕೆ ಬರಿಯ ಹೊರೆ.

ಉದ್ದಿಷ್ಟವಾಗಿರುವ ಶಾಸನವು ನಮ್ಮ ಸಮಾಜದ ಆರ್ಥಿಕ ಸ್ಥಿತಿಗೂ ಸಾಮಾಜಿಕ ಸ್ಥಿತಿಗೂ ಹೊಂದಿಕೊಳ್ಳುವಂಥಾದ್ದೆ ? ಹಳ್ಳಿಯ ಪಾಠಶಾಲೆಗಳಲ್ಲಿ "ಹುಡುಗರು ಬೆಳಿಗ್ಗೆ ಏಳು ಗಂಟೆಗೆ ಸರಿಯಾಗಿ ಹಾಜರಿರಬೇಕು ; ಮೂರು ದಿನ ಲೇಟಾಗಿ ಬಂದ ಹುಡುಗನು ಎರಡಾಣೆಯೋ ನಾಲ್ಕಾಣೆಯೋ ದಂಡ ತೆರಬೇಕು ?" ಎಂದು ವಿಧಾಯಕ ಮಾಡುವುದು ಸುಲಭ. ಅದು ಒಂದು ದೃಷ್ಟಿಯಿಂದ ಯುಕ್ತವೂ ಇರಬಹುದು. ಆದರೆ ನಮ್ಮ ಹಳ್ಳಿಯಲ್ಲಿ ಮನೆಮನೆಗೂ ಗಡಿಯಾರ ಒದಗಿಸುವವರು ಯಾರು ? ಆ ಗಡಿಯಾರಗಳಲ್ಲಿ ಹೆಚ್ಚು ಕಡಮೆಯಾಗದಂತೆ ನೋಡಿಕೊಳ್ಳುವವರು ಯಾರು ? ಕಾಲ ಪರಿಪಾಲನೆಯ ನಿಯಮವೇನೋ ನಮ್ಮ ಜನ ಕಲಿಯಬೇಕಾದದ್ದೇ. ಆದರೆ ಹಳ್ಳಿಹಳ್ಳಿಗೂ ಗಡಿಯಾರ ಬರುವುದು ಹೇಗೆ ? ಈ ಯೋಜನೆ ಮರೆತು ಮಾಡಿದ ಕಾನೂನು ಕಿರುಕುಳವೇ.

5

ಹೊಸ ಕಾನೂನು ಹಿಂದಿನ ಕಾನೂನುಗಳಿಗೆ ಎಷ್ಟು ಮಾತ್ರ ಹೊಂದಿಕೊಳ್ಳುತ್ತದೆ ? ಎಂಬುದನ್ನು ನೋಡಬೇಕು. ಇದು ವಿಶೇಷವಾಗಿ ವಕೀಲರಿಗೆ ಸಾಧ್ಯವಾದ ಕೆಲಸ. "ವ್ಯವಸಾಯ", "ಹಕ್ಕುದಾರಿ", "ಬಾಡಿಗೆ", "ಗೇಣಿ" ಇಂಥ ಮಾತುಗಳು ಭೂಸಂಬಂಧವಾದ ಶಾಸನಗಳಲ್ಲಿ ಪದೇ ಪದೇ ಪ್ರಯೋಗವಾಗುತ್ತವೆ. ಆದರೆ ಒಂದೇ ಪಾರಿಭಾಷಿಕ ಶಬ್ದಕ್ಕೆ ಒಂದೊಂದು ಕಾನೂನಿನಲ್ಲಿ ಒಂದೊಂದು ಬಗೆ ಅರ್ಥವಾಗುವಂತಿದ್ದರೆ ಆಗ ಭ್ರಾಂತಿಗೂ ಸಂದಿಗ್ಧತೆಗೂ ಕಾರಣವಾಗುತ್ತದೆ. ಮಾತುಗಳ ವಿಚಾರ ಹೇಗೋ ವಿಷಯ ಪ್ರಸಂಗಗಳ ವಿಚಾರವೂ ಹಾಗೆಯೇ. ಶಾಸನವೆಂಬುದು ಜಡೆಜಡೆಯಾದ ಪ್ರಬಂಧ. ಅದರ ಎಳೆಗಳ ವ್ಯಾಪನೆ ಎಲ್ಲೆಲ್ಲಿಗೋ ಹೋಗುತ್ತದೆ. ಅದನ್ನೆಲ್ಲಾ ಪರೀಕ್ಷಿಸದೆ ಮಾಡಿದ ಕಾನೂನು ಅನುದ್ದಿಷ್ಟವಾದ ಆಪತ್ತುಗಳಿಗೆ ದಾರಿ ಮಾಡುತ್ತದೆ.

ಪ್ರತಿಯೊಂದು ಕಾನೂನೂ ಯಾವುದಾದರೊಂದು ರೀತಿಯಲ್ಲಿ ಜನದ ನಡವಳಿಕೆಯನ್ನು ಸೋಕಿ ಬದಲಾಯಿಸಬಲ್ಲದ್ದಾಗುತ್ತದೆ ಎಂಬುದನ್ನು ಮೊದಲೇ ಹೇಳಿದೆ. ಆಹಾರ ವಸ್ತುಗಳ ಶೇಖರಣೆಯ ಕಾನೂನಿನಿಂದ ಧಾನ್ಯಗಳನ್ನು ಬಚ್ಚಿಡುವುದು ಜನಕ್ಕೆ ಅಭ್ಯಾಸವಾಯಿತು. ಕಂಟ್ರೋಲ್ ಕಾನೂನಿನಿಂದ ಕಳ್ಳಸಂತೆ ವ್ಯಾಪಾರ ರೂಢಿಗೆ ಬಂತು. ಹೀಗೆ ಬಂದ ಕೆಟ್ಟಚಾಳಿಯ ವ್ಯಾಪನೆ ಇತರ ಜೀವನ ಕ್ಷೇತ್ರಗಳಿಗೂ ತಗಲಿದರೆ ಆಶ್ಚರ್ಯವಲ್ಲ. ದುರದೃಷ್ಟ ದಾಂಪತ್ಯದ ಕಷ್ಟನಿವಾರಣೆಗೆಂದು ಮಾಡಿದ ಕಾನೂನು ವಿವಾಹ ಗೌರವದ ತುಚ್ಛೀಕಾರಕ್ಕೆ ಪ್ರೋತ್ಸಾಹಕಾರಕವಾಗಬಹುದು. ಪ್ರತಿಯೊಂದು ಕಾನೂನಿನಿಂದಲೂ ಜನದ ಸ್ವಭಾವ ಹಾಗೋ ಹೀಗೋ ಮಾರ್ಪಡಬಹುದು. ಅದನ್ನು ಸಮಾಜ ಹಿತಚಿಂತಕರು ಯೋಚಿಸಬೇಕು.

ಪ್ರತಿಯೊಂದು ಕಾನೂನಿನಿಂದಲೂ ಸಮಾಜದ ಜೀವನ ಯಾವುದೋ ಒಂದು ಭಾಗದಲ್ಲಿ ಅಷ್ಟೋ ಇಷ್ಟೋ ಬದಲಾವಣೆ ಹೊಂದಲೇ ಹೊಂದುತ್ತದೆ ಎಂದು ಹೇಳಿದೆವಷ್ಟೆ. ಈ ಬದಲಾವಣೆಯಲ್ಲಿ ಕೆಲವರಿಗೆ ಬಾಧೆಯೋ ನಷ್ಟವೋ ತಟ್ಟುತ್ತದೆ. ಹಾಗೆ ಕಷ್ಟನಷ್ಟಗಳಿಗೆ ಗುರಿಯಾದವರಿಗೆ (ಕಾಂಪೆನ್ಸೇಷನ್) ಅಸೌಕರ್ಯ ಪರಿಹಾರ ರೂಪವಾಗಿ ಯಾವ ಸೌಕರ್ಯವನ್ನಾದರೂ ಕಾನೂನು ಒದಗಿಸುತ್ತದೆಯೆ ? ಇನಾಂದಾರಿಗಳನ್ನು ರದ್ದುಪಡಿಸುವುದರಲ್ಲಿ ಜಮೀನು ಕಳೆದುಕೊಳ್ಳುವವರಿಗೆ ನಷ್ಟಪರಿಹಾರದ ಏರ್ಪಾಟಿದೆಯೇ ? ಪ್ರಯಾಣ ಸಾಧನಗಳ ರಾಷ್ಟ್ರಸ್ವಕರಣದ ಏರ್ಪಾಟಿನಲ್ಲಿ ಬಸ್ ಮಾಲೀಕರಿಗೆ ಪರಿಹಾರ ದ್ರವ್ಯ ದೊರೆಯುತ್ತದೆಯೇ ? ಇದು ನ್ಯಾಯ ವ್ಯವಸ್ಥೆಯ ಮೂಲ ಪ್ರಶ್ನೆ. ನ್ಯಾಯವಿವೇಚನೆಯಿಲ್ಲದ ಶಾಸನ ಎಂಥಾದ್ದು ?

ಹೊಸ ಕಾನೂನು ಮಾಡುವ ವಿಧಿಯು ಜನವನ್ನು ಒತ್ತಾಯಪಡಿಸತಕ್ಕದ್ದೆ ? ಅಥವಾ ಅವರವರ ಇಷ್ಟಕ್ಕೆ ಸ್ವಾತಂತ್ರ್ಯ ಕೊಡತಕ್ಕದ್ದೆ ? ಈಗ ವಿಧವಾ ವಿವಾಹದ ಕಾನೂನಿದೆ. ಅದು ಯಾರನ್ನೂ ನಿರ್ಬಂಧಪಡಿಸುವುದಿಲ್ಲ. ಆದರೆ ವಿವಾಹವಾಗಬೇಕೆಂಬ ವಿಧವೆಗೆ ಅದು ಶಾಸನ ಸಮ್ಮತಿಯ ಬಲವನ್ನು ದೊರಕಿಸುತ್ತದೆ. ಈ ವ್ಯತ್ಯಾಸ ಬಹಳ ಮುಖ್ಯವಾದದ್ದು. ಐಚ್ಛಿಕವಾದ ವಿಧಿಯಿಂದ ಯಾರ ಸ್ವಾತಂತ್ರ್ಯಕ್ಕೂ ಹಾನಿಯಿಲ್ಲ. ಆದರೆ ನಿರ್ಬಂಧಕಾರಿಯಾದುದು ಕಿರುಕುಳಕ್ಕೆ ದಾರಿ ಮಾಡುತ್ತದೆ.

ಪ್ರತಿಯೊಂದು ಕಾನೂನಿನಲ್ಲಿಯೂ ಒಂದು ವಿಧಾಯಕ ವಾಕ್ಯವೂ ಒಂದು ದಂಡನ ವಾಕ್ಯವೂ ಇರಲೇಬೇಕು. ವಿಧಾಯಕ ಮುರಿದವರಿಗೆ ದಂಡನೆ. ದಂಡನೆಯ ಭಯ ತೋರದ ವಿಧಿಗೆ ಯಾರೂ ವಿಧೇಯರಾಗುವುದಿಲ್ಲ. ಹೀಗೆ ಶಾಸನದ ಬಲ ಇರುವುದು ದಂಡನ ವಾಕ್ಯದಲ್ಲಿ. ಹಾಗಾದರೆ ಆ ದಂಡನೆಯನ್ನು ನಿಷ್ಕರ್ಷೆ ಮಾಡಬೇಕಾದವರು ಯಾರು ? ನಷ್ಟಭಾಗಿಗಳಿಗೆ ನಷ್ಟಪರಿಹಾರವನ್ನು ನಿರ್ಣಯ ಮಾಡಬೇಕಾದವರು ಯಾರು ? ಹೀಗೆ ಶಾಸನವನ್ನು ಅನ್ವಯಿಸುವ ಪ್ರಸಂಗಗಳಲ್ಲಿ ಕೋರ್ಟುಗಳ ಆವಶ್ಯಕತೆ ಅನಿವಾರ್ಯವಾಗುತ್ತದೆ. ಈಚೀಚೆಗೆ ಆಗುತ್ತಿರುವ ಕಾನೂನುಗಳಲ್ಲಾದರೋ ಸರ್ಕಾರದ ಕಾರ್ಯಕರ್ತ ಶಾಖೆಯವರು ತಮ್ಮ ಕಾರುಬಾರು ಸಲೀಸಾಗಿ ನಡೆಯಬೇಕೆಂದು ಕೋರ್ಟುಗಳ ಅಧಿಕಾರವನ್ನು ಮೊಟಕು ಮಾಡಿರುವುದುಂಟು. ಇದು ಜನಕ್ಕೆ ಪ್ರತಿಕೂಲ. ಒಂದಾನೊಂದು ಶಾಸನದ ಆಡಳಿತದಲ್ಲಿ ಕೋರ್ಟಿನ ಪ್ರವೇಶಕ್ಕೆ ಅವಕಾಶವಿದ್ದಷ್ಟೂ ಜನಕ್ಕೆ ಅನ್ಯಾಯದ ಸಂಭವ ಕಡಮೆ ಆದದ್ದರಿಂದ ಹೊಸ ಕಾನೂನಿನಲ್ಲಿ ಕೋರ್ಟಿಗೆ ಎಂಥ ಸ್ಥಾನವಿದೆ ಎಂಬುದನ್ನು ಪರೀಕ್ಷಿಸಿ ನೋಡಬೇಕು.

ಸಮಾಜದ ಜೀವನದಲ್ಲಿ ಯಾವುದೋ ಒಂದು ಕೊರತೆ ಇರುವುದು ಅನುಭವದಿಂದ ಗೊತ್ತಾದರೆ ಆಗ ಅದರ ನಿವಾರಣೆಗಾಗಿ ಕಾನೂನು ಬೇಕಾಗುತ್ತದೆ. ಆದರೆ ಕಾನೂನು ಮಾಡುವವರು ಆ ಕೊರತೆಯ ನಿವಾರಣೆಗಾಗಿ ಎಷ್ಟು ಅಧಿಕಾರ ಅವಶ್ಯವೋ ಅಷ್ಟನ್ನು ಮಾತ್ರವೇ ಸರಕಾರಕ್ಕೆ ವಹಿಸಿಕೊಡದೆ ಅದರ ಜೊತೆಗೆ ಇನ್ನೂ ಕೆಲವು

ಹೆಚ್ಚಿನ ಅಧಿಕಾರವನ್ನು ವಹಿಸಿಕೊಡಬಹುದು. ಹಾಗೆಯೇ ಹಳೆಯ ಅನನುಕೂಲತೆಯ ನಿವಾರಣೆಗಾಗಿ ಎಷ್ಟು ನಿಯಂತ್ರಣವನ್ನು ಕಲ್ಪಿಸುವುದು ಅವಶ್ಯವೋ ಅದಕ್ಕಿಂತ ಹೆಚ್ಚಿನ ನಿರ್ಬಂಧವನ್ನು ಜನದ ಮೇಲೆ ಹೊರಿಸಬಹುದು. ಹೀಗೆ ಶಾಸನದಿಂದ ಆಗಬಹುದಾದ ಅತಿರೇಕ ಅಧಿಕಪ್ರಸಂಗಗಳ ವಿಷಯದಲ್ಲಿಯೂ ಎಚ್ಚರಿಕೆಯಿಂದ ಇರಬೇಕಾದದ್ದು ಶಾಸನಕರ್ತರ ಕರ್ತವ್ಯ. ಅನಾವಶ್ಯಕವಾಗಿ ನಿರ್ಬಂಧಗಳನ್ನು ಸಮಾಜದ ಮೇಲೆ ಹೇರಬಾರದು. ಜನದ ಸ್ವಾತಂತ್ರ್ಯಕ್ಕೆ ಅಕಾರಣವಾಗಿ ಭಂಗ ಉಂಟುಮಾಡಬಾರದು.

ಈ ಮೇಲೆ ಹೇಳಿರುವುವು ಮೂಲಸೂತ್ರಗಳು. ಈ ಸೂತ್ರಗಳಂತೆ ಪ್ರತಿಯೊಂದು ಕಾನೂನು ಮಸೂದೆಯನ್ನೂ ಅದರಿಂದ ಆಗಬಹುದಾದ ಏರ್ಪಾಟುಗಳನ್ನೂ ಪರಿಶೀಲನೆ ಮಾಡುವುದು ರಾಷ್ಟ್ರಕಧರ್ಮದ ಮುಖ್ಯ ಕರ್ತವ್ಯವಾಗಿರುತ್ತದೆ. ಆ ಕರ್ತವ್ಯ ಎಷ್ಟು ಉತ್ತಮವಾಗಿ ನಡೆಯುತ್ತದೆಯೋ ರಾಜ್ಯಶಾಸನ ಅಷ್ಟು ಸಮರ್ಪಕವಾಗಿರುತ್ತದೆ ; ಅದರಿಂದ ಜನಕ್ಷೇಮ ಅಷ್ಟು ಹೆಚ್ಚಾಗಿ ಸಾಧನೆಯಾಗುತ್ತದೆ.

[ಪ್ರಜಾಮತ : ದೀಪಾವಳಿ ವಿಶೇಷಾಂಕ, 1954]

# ಕಾಂಗ್ರೆಸ್ ಸರಕಾರಗಳು

## ದ್ವಿಪಕ್ಷ ಘಟನೆಯ ಅವಶ್ಯಕತೆ

ಮೈಸೂರಿನ ರಾಜಕೀಯದಲ್ಲಿ ಈ ಹೊತ್ತು ಮೇಲಕ್ಕೆ ಕಾಣಿಸಿಕೊಂಡಿರುವ ಅಪಸ್ವರವು ಅದಕ್ಕೆ ಸಂಬಂಧಪಟ್ಟ ಕಕ್ಷಿ ವ್ಯಕ್ತಿಗಳಿಗೆ ಕೀರ್ತಿ ತರುವಂಥಾದ್ದಲ್ಲದಿದ್ದರೂ, ಜನತೆಗೆ ಅವಶ್ಯವಾದ ಪಾಠವನ್ನು ಕಲಿಸಬಲ್ಲದ್ದಾಗಿದೆ. ಆ ಪಾಠವನ್ನು ಗ್ರಹಿಸಲು ಜನಕ್ಕೆ ಮನಸ್ಸಿದ್ಧತೆ ಉಂಟಾಗಿದೆಯೋ ಇಲ್ಲವೋ ಅದು ಬೇರೆ ಮಾತು. ಇಂದೊದಗಿರುವ ಅಸಂದರ್ಭದಲ್ಲಿ ಮಹತ್ತ್ವದ ಪಾಠವಂತೂ ಅಡಗಿಕೊಂಡಿದೆ.

ಪ್ರಜಾರಾಜ್ಯದ ಮರ್ಯಸ್ಥಾನಗಳಲ್ಲಿ ಮಂತ್ರಿಗಳ ಯೋಗ್ಯತೆ ಒಂದು ಅತಿ ಮುಖ್ಯವಾದದ್ದು. ಸರಕಾರವು ಯಶಸ್ವಿಯಾಗಬೇಕಾದರೆ ಮಂತ್ರಿ ಸಂಪುಟದಲ್ಲಿರಬೇಕಾದ ಗುಣಗಳು ಎರಡು : (1) ನೀತಿ ವಿವೇಕ, (2) ಕಾರ್ಯದಕ್ಷತೆ. ಈ ಎರಡೂ ಮಂತ್ರಿಗಳಲ್ಲಿ ಸೇರಿದ್ದರೆ ಸರಕಾರ ತಕ್ಕಮಟ್ಟಿಗೆ ತೃಪ್ತಿಕರವಾದೀತು. ಆ ಎರಡರಲ್ಲಿ ಒಂದು ಗುಣವಾದರೂ ಚೆನ್ನಾಗಿದ್ದಲ್ಲಿ ಆ ಸರಕಾರವನ್ನು ಅಷ್ಟಿಷ್ಟು ಸಹಿಸಲಾದರೂ ಆದೀತು. ಎರಡು ಗುಣಗಳಲ್ಲಿ ಒಂದನ್ನು ಕೂಡ ಸ್ಥಾಪಿಸಲಾರದ ಸರಕಾರಕ್ಕಾಗಿ ಯಾರು ಅಳಬೇಕು ?

ಮಂತ್ರಿತ್ವಕ್ಕೆ ಬೇಕಾದ ಗುಣಯೋಗ್ಯತೆಯುಳ್ಳ ಜನರು ಈ ದೇಶದಲ್ಲಿಲ್ಲವೆ ?—ಎಂಬುದಲ್ಲ ಈಗಿನ ಪ್ರಶ್ನೆ. ಅಂಥವರು ಅಧಿಕಸಂಖ್ಯಾಪಕ್ಷದಲ್ಲಿ ಇದ್ದಾರೆಯೆ ? ಎಂಬುದು ಪ್ರಶ್ನೆ. ಏಕೆಂದರೆ ಮಂತ್ರಿ ಸಂಪುಟದ ರಚನೆಯಾಗುವುದು ಆಧಿಕ್ಯ ಪಕ್ಷದ ಕೈಯಿಂದ. ಕಾಂಗ್ರೆಸ್ಸಿನ ನಾಯಕರಲ್ಲಿ ನೀತಿನಿಷ್ಠೆಗೂ ಕಾರ್ಯಸಾಮರ್ಥ್ಯಕ್ಕೂ ಹೆಸರು ಪಡೆದವರು ತಕ್ಕಷ್ಟು ಮಂದಿಯಾದರೂ ಇದ್ದಿದ್ದರೆ ನಮ್ಮ ರಾಜಕೀಯದಲ್ಲಿ ಈ ಹೊತ್ತಿನ ದುಸ್ಸಂಧಿಗೆ ಕಾರಣವಿರುತ್ತಿರಲಿಲ್ಲ.

ನೀತಿನಿಷ್ಠೆ ಎಂದರೆ ಪವಿತ್ರ ಶಬ್ದಗಳ ಶುಕಪಾಠವಲ್ಲ. ಸತ್ಯ, ಅಹಿಂಸೆ, ತ್ಯಾಗ, ಸಮಾಜಸೇವೆ, ನಿಸ್ಸ್ವಾರ್ಥ, ದೀನೋದ್ಧಾರ—ಇಂಥಾ ಮಾತುಗಳು ಈಗ ಅಗ್ಗವಾಗಿಬಿಟ್ಟಿವೆ. ಅವುಗಳನ್ನು ತಿರುಗಿಸಿ ತಿರುಗಿಸಿ ಭಾಷಣ ಮಾಡುವವರೆಲ್ಲ ನೀತಿನಿಷ್ಠ

ರೆಂದು ಹೇಗೆ ನಂಬಲಾದೀತು ? ಮನುಷ್ಯನ ನೀತಿಯನ್ನು ಅವನ ಮಾತಿನಿಂದಲ್ಲದೆ ನಡವಳಿಕೆಯಿಂದ ನಿಶ್ಚಯಿಸಿಕೊಳ್ಳುವಷ್ಟು ತಿಳಿವಳಿಕೆ ಸಾಮಾನ್ಯವಾಗಿ ಎಲ್ಲರಿಗೂ ಇರುತ್ತದೆ. ಇಂಡಿಯಾ ದೇಶದ ನಾನಾ ಪ್ರಾಂತಗಳಲ್ಲಿ—ಮೈಸೂರಿನಲ್ಲಿ ಮಾತ್ರವಲ್ಲ, ಮದರಾಸಿನಲ್ಲಿ, ಬಂಗಾಳದಲ್ಲಿ, ಉತ್ತರಪ್ರದೇಶದಲ್ಲಿ,—ಯಾವ ಪ್ರದೇಶದಲ್ಲಿ ನೋಡಿದರೂ ಕಾಂಗ್ರೆಸ್ ನಾಯಕರ ತುಟಿಯ ಮೇಲಣ ನೀತಿ ಸೂತ್ರಗಳು ಸರಕಾರದ ಆಡಳಿತಗಳಲ್ಲಿ ರೂಪಗೊಂಡಿರುವಂತೆ ತೋರುತ್ತಿಲ್ಲ.

ಇನ್ನು ಕಾರ್ಯಸಾಮರ್ಥ್ಯವನ್ನು ನೋಡೋಣವೆಂದರೆ, ಆ ಭಾಗದಲ್ಲಿಯೂ ಸಮಾಧಾನ ದೊರೆಯುವಂತಿಲ್ಲ. ಮೊನ್ನೆ ಮದರಾಸಿನಲ್ಲಿ ಶ್ರೀ ಪ್ರಕಾಶಂ ಅವರೂ ಶ್ರೀ ಕಾರಂತರವರೂ ಅಲ್ಲಿಯ ಕೆಲ ಮಂತ್ರಿಗಳ ಮೇಲೆ ಹೊರಿಸಿದ ಆಕ್ಷೇಪಣೆಗಳನ್ನೂ ಅವುಗಳಿಗೆ ಆ ಮಂತ್ರಿಗಳು ಕೊಟ್ಟ ಉತ್ತರಗಳನ್ನೂ ನೋಡಿದರೆ ರಾಜ್ಯಕಾರ್ಯಗಳಲ್ಲಿ ವಿಚಕ್ಷಣೆ ಎಷ್ಟು ಶೂನ್ಯವಾಗಿದೆಯೆಂಬುದು ಸ್ಪಷ್ಟಪಡುತ್ತದೆ. ಅನೇಕ ಮಂದಿ ಮಂತ್ರಿಗಳಿಗೆ "ಜವಾಬ್ದಾರೀ ಸರಕಾರ" ಎಂಬ ಪದದ ಒಳತತ್ತ್ವವೇ ಮನ ಹೊಕ್ಕಂತೆ ಇಲ್ಲ. "ಕೈಕೆಳಗಿನ ಅಧಿಕಾರಿ ತಪ್ಪು ಮಾಡಿದ್ದರೆ ಅದಕ್ಕೆ ಮಂತ್ರಿ ಹೇಗೆ ಜವಾಬ್ದಾರ ?"—ಎಂದು ಒಬ್ಬಾತ ಕೇಳಿದ್ದಾರೆ. ಆದ ತಪ್ಪಿಗೆ ಆ ಭಾಗದ ಮಂತ್ರಿ ಜವಾಬ್ದಾರನಾಗದೆ ಹೋದರೆ ಜವಾಬ್ದಾರಿ ಸರಕಾರವೆಂಬುದೆಲ್ಲಿ ? ಹಿಂದೆ ಬೇಜವಾಬ್ದಾರೀ ಸರಕಾರವೆನಿಸಿಕೊಂಡಿದ್ದ (ಬ್ಯೂರಾಕ್ರಸಿ) ಭೃತ್ಯಾಧಿಕಾರಿಗಳ ಕಾಲದಲ್ಲಿ ಶಾಸನ ಸಭೆಗೆ ಇಂಥ ಪ್ರತ್ಯುತ್ತರ ಬರುತ್ತಿರಲಿಲ್ಲ. ನಮ್ಮ ಪ್ರಜಾಮಂತ್ರಿಗಳ ರಾಜಕೀಯ ಪ್ರಜ್ಞೆ ಇಷ್ಟುಮಟ್ಟಿನದಾಗಿದೆ.

ಈ ಮೇಲಣ ಚರ್ಚೆಯಿಂದ ಹೊರಪಡುವ ಅಂಶ ಇಷ್ಟು :—ದೇಶದ ರಾಜಕೀಯಸ್ಥರಲ್ಲಿ ಕಾಂಗ್ರೆಸ್ಸಿಗರ ಸಂಖ್ಯೆ ಹೆಚ್ಚು. ಆದದ್ದರಿಂದ ಸರಕಾರವನ್ನು ರಚಿಸುವ ಜವಾಬ್ದಾರಿ ಕಾಂಗ್ರೆಸ್ಸಿಗೆ ಸೇರಿದ್ದಾಗಿದೆ. ಆ ಕರ್ತವ್ಯವನ್ನು ನಿರ್ವಹಿಸುವುದರಲ್ಲಿ ಕಾಂಗ್ರೆಸ್ಸು ತನ್ನ ನಾಯಕತ್ವದ ವಿಷಯದಲ್ಲಿ ವ್ಯಕ್ತಿಯೋಗ್ಯತೆಯನ್ನು ನೋಡದೆ ಹೋದಲ್ಲಿ ಅವರ ಸರಕಾರ ಯಶಸ್ವಿಯಾಗಲಾರದು.

ಒಂದು ರಾಜಕೀಯ ಪಕ್ಷದ ಅತ್ಯಂತ ಮಹತ್ತ್ವದ ಕರ್ತವ್ಯವೆಂದರೆ—ತನ್ನ ನಾಯಕನನ್ನು ಆರಿಸಿಕೊಳ್ಳುವುದು. ಪಕ್ಷದ ಕೀರ್ತಿ ಅಪಕೀರ್ತಿಗಳು ಆ ನಾಯಕನ ಯೋಗ್ಯತೆ ಅಯೋಗ್ಯತೆಗಳನ್ನು ಅವಲಂಬಿಸಿಕೊಂಡಿರುತ್ತವೆ. ಆದದ್ದರಿಂದ ಆ ಪಕ್ಷದ ಜಾಗರೂಕತೆ ವಿವೇಕಗಳೆಲ್ಲವೂ ಮೊದಲು ನಾಯಕನನ್ನು ಗೊತ್ತುಮಾಡುವುದರಲ್ಲಿರಬೇಕು. ಎರಡನೆಯದಾಗಿ, ಒಬ್ಬ ನಾಯಕನನ್ನು ನಿಯಾಮಕ ಮಾಡಿದ ಬಳಿಕ, ಅದು ಆತನಿಗೆ ತನ್ನ ಸಹಮಂತ್ರಿಗಳನ್ನು ಆರಿಸಿಕೊಳ್ಳುವ ಬಗ್ಗೂ ಕಾರ್ಯನೀತಿಗಳನ್ನು ಗೊತ್ತುಮಾಡಿಕೊಳ್ಳುವ ಬಗ್ಗೂ ವಿಸ್ತಾರವಾಗಿ ಅವಕಾಶ ಕೊಡಬೇಕು. ಅಂಥಾ ಸ್ವಾತಂತ್ರ್ಯವಿಲ್ಲದೆ ಇರುವ ಪಕ್ಷನಾಯಕನು ತನ್ನ ಜವಾಬ್ದಾರಿಯನ್ನು ನಿರ್ವಹಿಸಲು ಅಶಕ್ತನಾಗುತ್ತಾನೆ. ಆರಿಸಿದ ನಾಯಕನನ್ನು ಪಕ್ಷವು ನಂಬಬೇಕು ; ಅವನಿಗೆ ತೀರ

ಅವಶ್ಯವೆನಿಸಿದಾಗ ಸಲಹೆ ಕೊಡಬಹುದು. ಆದರೆ ಅವನ ಕೈಗಳನ್ನು ಬಿಗಿಯಬಾರದು. ನಮ್ಮ ಇಂದಿನ ಪಕ್ಷಯೋಜನೆಯಲ್ಲಿ ಕಾಂಗ್ರೆಸ್ ನಾಯಕರಿಗೆ ಅಂಥ ನಂಬಿಕೆಯೂ ಸ್ವಾತಂತ್ರ್ಯವೂ ದೊರೆಯುತ್ತಿಲ್ಲವೆಂಬುದು ವಾಸ್ತವದ ಮಾತು. ಪಕ್ಷದ ಒಳಗಡೆ ನಾಲ್ಕಾರು ತೆರದ ವರ್ತಕ ಕೂಟಗಳೂ, ಜಾತಿಮತ ಕೂಟಗಳೂ, ದುಂಡಾವರ್ತಿಯ ಕೂಟಗಳೂ ಸೇರಿಕೊಂಡು, ತಾವುತಾವು ಪೋಟಾಪೋಟಿ ಮಾಡಿಕೊಂಡು, ಮಂತ್ರಿ ಸಂಪುಟದ ಮೇಲೆ ಬಲಾತ್ಕಾರ ಹಾಕುತ್ತಿರುತ್ತವೆ. ಇಂಥಾ ಒತ್ತಾಯದ ಕೂಟಗಳು —"ಪ್ರೆಷರ್ ಗ್ರೂಪ್ಸ್"—ಸಾಮಾನ್ಯವಾಗಿ ಎಲ್ಲಾ ಪ್ರಜಾಪ್ರಭುತ್ವದ ದೇಶಗಳಲ್ಲಿಯೂ ಇರುತ್ತವೆ. ಅವು ಅಧಿಕಾರ-ರಾಜಕೀಯದ—"ಪವರ್ ಪಾಲಿಟಿಕ್ಸ್"—ಸಹಜ ಲಕ್ಷಣಗಳು. ಇಂಥ ದುರ್ಲಕ್ಷಣಗಳು ಇಲ್ಲವೆಂದೇ ಹೇಳಬಹುದಾದ, ಅಥವಾ ತೀರ ಕಡಮೆಯೆಂದಂತೂ ಖಂಡಿತವಾಗಿ ಹೇಳಬಹುದಾದ ರಾಜ್ಯ ಈಗ ಇಂಗ್ಲೆಂಡು ಒಂದು ಮಾತ್ರ. ಅದಕ್ಕೆ ಕಾರಣವನ್ನು ಸುಲಭವಾಗಿ ಊಹಿಸಬಹುದು. ಇಂಗ್ಲೆಂಡಿನಲ್ಲಿ ಪ್ರಜಾರಾಜ್ಯ ಆರೇಳು ಶತಮಾನಗಳಿಂದ ಸಂತತವಾಗಿ, ಅನೂಚಾನವಾಗಿ ಬೆಳೆದುಕೊಂಡು ಬಂದಿದೆ. ಸಂಪ್ರದಾಯದ ಮಹಿಮೆಯಿಂದ ಇಂಗ್ಲೆಂಡಿನ ವ್ಯವಸ್ಥೆ ಕೂಡಿದ ಮಟ್ಟಿಗೂ ಚೊಕ್ಕಟವಾಗಿ ಭದ್ರವಾಗಿ ಬೆಳೆದುಕೊಂಡು ಬಂದಿದೆ. ಇತರ ದೇಶಗಳಿಗೆ ಪ್ರಜಾರಾಜ್ಯ ಪದ್ಧತಿ ಹೊಸದು. ನಮಗಂತೂ ತೀರಾ ಹೊಸದು. ನಾವು ಈಗಲೇ ಜಾಗರೂಕರಾಗಿ ಪ್ರಜಾರಾಜ್ಯದ ತಳಹದಿಯನ್ನು ಭದ್ರವಾಗಿ ಕಟ್ಟದೆ ಹೋದಲ್ಲಿ ಅನಾಯಕತ್ವದ ಭೀತಿ ನಮಗೆ ತಪ್ಪಿದ್ದಲ್ಲ.

ಇಂಗ್ಲೆಂಡಿನ ರಾಜಕೀಯ ಚರಿತ್ರೆಯಿಂದ ಹೊರಪಡುವ ಪಾಠಗಳಲ್ಲಿ ಅತ್ಯಂತ ಮುಖ್ಯವಾದದ್ದು ರಾಜಕೀಯ ಪಕ್ಷಗಳ ಗುಣಾವಗುಣಗಳನ್ನು ಕುರಿತದ್ದು. ಪಕ್ಷ ಘಟನೆಯಿಂದ ದೇಶಕಾರ್ಯಗಳು ಕೆಡದೆ ಚೆನ್ನಾಗಿ ಆಗಬೇಕಾದರೆ ದೇಶದಲ್ಲಿ ಪಕ್ಷಗಳು ಎರಡಾದರೂ ಇರಬೇಕು. ಒಂದು ಅಧಿಕೃತ ಪಕ್ಷ ; ಇನ್ನೊಂದು ಪ್ರತಿಪಕ್ಷ. ಹಾಗೆ ಎರಡಿರದೆ ಪಕ್ಷವು ಒಂದೇ ಒಂದು ಆಗಿದ್ದರೆ ಅದು ತಾನೂ ಕೆಡುತ್ತದೆ, ದೇಶವನ್ನೂ ಕೆಡಿಸುತ್ತದೆ. ಒಂದು ಪಕ್ಷದ ದುಷ್ಪ್ರವೃತ್ತಿಗಳನ್ನು ಹದ್ದಿನಲ್ಲಿಟ್ಟು, ಅದಕ್ಕೆ ಎಚ್ಚರ ಕೊಡುತ್ತ, ಅದು ತನ್ನ ಗುಣಗಳನ್ನು ಹೆಚ್ಚಿಸಿಕೊಳ್ಳುವಂತೆ ಪ್ರೇರಿಸುತ್ತಿರುವುದು ಪ್ರತಿಪಕ್ಷ. ಎಂದರೆ ಒಂದು ಪಕ್ಷದ ಯೋಗ್ಯತೆ ಅದರ ಪ್ರತಿಪಕ್ಷದ ಯೋಗ್ಯತೆಗೆ ಅನುಸಾರವಾಗಿ ಇರುತ್ತದೆ. ಪಕ್ಷ ಪ್ರತಿಪಕ್ಷಗಳೆರಡೂ ಬಹುಮಟ್ಟಿಗೆ ಸಮಾನ ಸ್ಕಂಧಗಳಾಗಿದ್ದ ಪಕ್ಷದಲ್ಲಿ ಅವುಗಳ ಅನ್ಯೋನ್ಯ ಭಯವೇ ಅವುಗಳ ಅಂತರ್ಬಲಕ್ಕೆ ಕಾರಣವಾಗುತ್ತದೆ.

ಈಗ ನಮ್ಮ ದೇಶದ ರಾಜಕೀಯದಲ್ಲಿ ಕಾಂಗ್ರೆಸ್ಸು ಪ್ರತಿಪಕ್ಷ ಭಯವಿಲ್ಲದಿರುವ ಏಕೈಕ ಪಕ್ಷ. ಅದರ ಪ್ರಭುತ್ವ ಒಬ್ಬ ವ್ಯಕ್ತಿಯ ನಿರಂಕುಶತೆಗೆ ಬದಲಾಗಿ ಒಂದು ಗುಂಪಿನ ನಿರಂಕುಶತೆ. ಸರಕಾರದ ಭೀತಿಯಿಲ್ಲದ ಮನುಷ್ಯ ವ್ಯಕ್ತಿಯ ಚರ್ಯೆ ಹೇಗೋ ಪ್ರತಿಪಕ್ಷ ಭೀತಿಯಿಲ್ಲದ ರಾಜಕೀಯ ತಂಡದ ಚರ್ಯೆಯೂ ಹಾಗೆಯೇ—ಮೊದಲು ಇತರರಿಗೆ ಅಸಹ್ಯವಾಗಿ ಆಮೇಲೆ ತನಗೇ ಅಪಾಯ ತಂದುಕೊಳ್ಳು

ವಂಥಾದ್ದು. ಹಾಗೆ ಆಯ ತಪ್ಪಿದ ಸ್ಥಿತಿ ಇಂದು ಕಾಂಗ್ರೆಸ್ಸಿನದು. ಅದರ ದೇಹದ ಒಳಗಣ ರೋಗಾಣುಗಳು ಈಗ ಕೆರಳಿ ಮೇಲಕ್ಕೆ ಕಾಣಿಸಿಕೊಳ್ಳುತ್ತಿವೆ. ಒಂದು ದೃಷ್ಟಿಯಿಂದ ಅದು ಒಳ್ಳೆಯದೇ. ಜ್ವರ ಮೂಲ ದೇಹದೊಳಗೆ ಸೇರಬಾರದು ; ಸೇರಿದ ಮೇಲೆ ಅದು ಹೊರಕ್ಕೆ ಬಂದುಬಿಟ್ಟರೆ ತಾನೆ ಆರೋಗ್ಯ ?

ಕಾಂಗ್ರೆಸ್ಸಿಗೆ ಸರಿಸಮವಾಗಿ ನಿಲ್ಲುವ ಪ್ರತಿಪಕ್ಷ ಹುಟ್ಟುವುದರ ಸೂಚನೆ ಈಗ ದೇಶದಲ್ಲಿ ಕಾಣಬರುತ್ತಿಲ್ಲ. ಕಾಂಗ್ರೆಸ್ಸಿಗೆ ಅದರ ಅರುವತ್ತೈದು ವರ್ಷಗಳ ಚರಿತ್ರೆಯಿಂದಲೂ ಗಾಂಧಿ ಮಹನೀಯರ ಸಂಪರ್ಕದಿಂದಲೂ ಬಂದಿರುವ ಪ್ರಭಾವವು ಪ್ರತಿಕಕ್ಷಿಯೆಬ್ಬಿಸಬೇಕೆನ್ನುವವರಿಗೆ ಹೆದರಿಕೆಯುಂಟುಮಾಡುವಷ್ಟರದಾಗಿದೆ. ರಾಜಕೀಯಕ್ಕೆ ಬರಬೇಕೆನ್ನುವವನಿಗೆ—"ಕಾಂಗ್ರೆಸ್ಸು ಸೇರಿದರೆ ಅವಕಾಶ, ಕಾಂಗ್ರೆಸ್ಸು ಬಿಟ್ಟರೆ ಇಲ್ಲ" ಎಂದು ಅನುಭವದಿಂದ ಗೊತ್ತಾಗಿದೆ. ಇಂಥಾದ್ದರಲ್ಲಿ ಪ್ರತಿಪಕ್ಷ ಕಟ್ಟಲು ಎಂಥವರು ಮುಂದೆ ಬಂದಾರು ?

ದ್ವಿಪಕ್ಷ ಘಟನೆಗೆ ಸದ್ಯ ತೋರುವುದು ಒಂದೇ ದಾರಿ ; ಕಾಂಗ್ರೆಸ್ಸು ತಾನೇ ಬಿರಿದು ಎರಡು ಹೋಳಾಗಬೇಕು. ಒಂದು ಹೋಳು ಅಧಿಕಾರ ವಹಿಸುವರಾಗಬೇಕು, ಇನ್ನೊಂದು ಪ್ರತ್ಯರ್ಥಿ (ಅಪೊಸಿಷನ್) ಆಗಿ ನಿಲ್ಲಬೇಕು.

ಹಾಗೆ ಕಾಂಗ್ರೆಸ್ಸು ಒಡೆದ ಮಾತ್ರದಿಂದಲೇ ನಮ್ಮ ರಾಜಕೀಯ ನೆಟ್ಟಗಾಗುತ್ತದೆಂದು ಭಾವಿಸತಕ್ಕದ್ದಲ್ಲ. ಒಂದು ಬೆರಣಿಯನ್ನು ಎರಡು ತುಂಡು ಮಾಡಿದ್ದರಿಂದ ಯಾವ ಒಂದು ಭಾಗವಾದರೂ ಸುಗಂಧವಾದೀತೆ ?

ಒಂದು ರಾಜಕೀಯ ಪಕ್ಷಕ್ಕಿರುವ ಬಲಸ್ಥಾನಗಳು ಮುಖ್ಯವಾಗಿ ಎರಡು :

(1) ಅದರ ಕಾರ್ಯಯೋಜನೆಯ ಜನಾನುಕೂಲತೆ ;

(2) ಅದರ ಪ್ರಮುಖ ವ್ಯಕ್ತಿಗಳ ಕಾರ್ಯಸಾಮರ್ಥ್ಯ.

ಕಾರ್ಯಯೋಜನೆ ಕಾಗದದ ಮೇಲೆ ಆಕರ್ಷಕವಾಗಿ ಕಂಡರೆ ಸಾಲದು. ಅದರಲ್ಲಿ ಕಾಣಿಸಿರುವ ಕಾರ್ಯಗಳನ್ನು ನೆರವೇರಿಸಿಕೊಡಲು ಬೇಕಾದ ಸಾಮರ್ಥ್ಯ ವಿಚಕ್ಷಣೆಗಳು ಪಕ್ಷ ನಾಯಕರಲ್ಲಿರಬೇಕು. ಸರಕಾರವೆಂದರೆ ಭಾಷಣಗಳಲ್ಲ.

ಈ ಎರಡು ಭಾಗಗಳಲ್ಲಿಯೂ ಒಂದು ಪಕ್ಷದ ಬಲ ಹೆಚ್ಚುವುದು ಎದುರು ಪಕ್ಷದ ಪೈಪೋಟಿಯ ಕಾರಣದಿಂದ. ಪೇಟೆಯಲ್ಲಿ ಪದಾರ್ಥಗಳ ಗುಣ ಹೆಚ್ಚುವುದೂ ಬೆಲೆ ಇಳಿಯುವುದೂ ಪೈಪೋಟಿಯಿಂದ. ರಾಜಕೀಯದಲ್ಲಿ ಪಕ್ಷಗಳ ಯೋಗ್ಯತೆ ಬೆಳೆಯುವುದೂ ಹಾಗೆಯೇ.

ದ್ವಿಪಕ್ಷ ಘಟನ ಇರಬೇಕಾದದ್ದು ಪಕ್ಷಗಳ ಪರಸ್ಪರ ಬಲಪರೀಕ್ಷೆ ಬಲಪ್ರೇರಣೆಗಳಿಗೋಸ್ಕರ ಮಾತ್ರವೇ ಅಲ್ಲ ; ಪಕ್ಷಗಳ ಧ್ಯೇಯಗಳ ಮತ್ತು ಕಾರ್ಯಯೋಜನೆಗಳ

ಪರಿಷ್ಕರಣೆಗಾಗಿಯೂ ಪಕ್ಷಗಳು ಎರಡಾಗಿದ್ದು, ಅವುಗಳಲ್ಲಿ ಸ್ಪರ್ಧೆಯಿರುವುದು ಆವಶ್ಯಕ. ಯಾವ ರಾಜಕೀಯ ಪಕ್ಷಕ್ಕೇ ಆಗಲಿ, ಅದರ ಪ್ರಾರಂಭ ಕಾಲದಲ್ಲಿ ಗೊತ್ತಾದ ಕಾರ್ಯಸೂತ್ರಗಳೇ ಎಲ್ಲ ಕಾಲಕ್ಕೂ ಸಾಕಾಗಲಾರವು. ಲೋಕಸ್ಥಿತಿ ಸ್ವಾಭಾವಿಕವಾಗಿ ಬದಲಾಯಿಸುತ್ತಿರುತ್ತದೆ. ಸಮಾಜ ಸಂದರ್ಭಗಳು ಮಾರ್ಪಡುತ್ತವೆ. ಜನಾನುಭವಗಳಲ್ಲಿ ವ್ಯತ್ಯಾಸ ಬರುತ್ತದೆ. ಹಾಗೆಯೇ ಅಭಿಪ್ರಾಯಗಳೂ ಬೆಳೆದು ಬದಲಾಯಿಸುತ್ತವೆ. ಇದನ್ನನುಸರಿಸಿ ರಾಜಕೀಯ ಪಕ್ಷದ ಧ್ಯೇಯಗಳೂ ಕಾರ್ಯವಿಧಾನಗಳೂ ಆಗಿಂದಾಗ್ಗೆ ತಿದ್ದಾವಣೆ ಹೊಂದಬೇಕಾಗುತ್ತದೆ. ಈಗ ಕಾಂಗ್ರೆಸ್ ಎರಡು ಪಕ್ಷವಾಗಿ ಒಡೆದರೂ ಆ ಎರಡು ಪಂಗಡಗಳ ಧ್ಯೇಯಗಳೂ, ವಿಧಾನಗಳೂ ಸದ್ಯದಲ್ಲಿಯೇ ಬೇರೆ ಬೇರೆಯಾಗಲಾರವು. ಮಹಾತ್ಮರ ಶಿಷ್ಯತ್ವದ ಪ್ರಯೋಜನವನ್ನು ಉಭಯ ಪಕ್ಷಗಳೂ ಈಗ ಒಂದೇ ರೀತಿ ಬಯಸುತ್ತವೆ. ಸತ್ಯ, ಅಹಿಂಸೆ, ಚರಕ, ಖಾದಿ, ಹಿಂದಿ, ಹರಿಜನೋದ್ಧಾರ, ಮದ್ಯನಿರೋಧ, ಗ್ರಾಮೋದ್ಧಾರ— ಇವೇ ಮೊದಲಾದ ಗಾಂಧೀ ಕಾರ್ಯಕ್ರಮಗಳನ್ನು "ನಾವು ಹೆಚ್ಚಾಗಿ ನಡೆಸುತ್ತೇವೆ." "ನಾವು ಹೆಚ್ಚಾಗಿ ನಡೆಸುತ್ತೇವೆ" ಎಂದು ಉಭಯ ಪಕ್ಷಗಳವರೂ ಘೋಷಣೆ ಮಾಡಿಕೊಂಡು ಹೊರಟಾರು. ಆದರೆ ಈ ಉಪಾಯ ಬಹುಕಾಲ ಸಾಗಲಾರದು. ಎರಡು ಪಕ್ಷಗಳಿಂದಲೂ ಹೊರಗಡೆ ಇರುವ ದೇಶಪ್ರಜೆ ಈ ಹಳೆಯ ಕಾರ್ಯಕ್ರಮಗಳಲ್ಲಿ ಕಾಣಬಾರದ ಹೊಸ ಅನುಕೂಲತೆಗಳನ್ನು ಅಪೇಕ್ಷಿಸುತ್ತದೆ. ಅನ್ನ, ಬಟ್ಟೆ, ಮನೆ, ಉದ್ಯೋಗ, ಕೈಗಾರಿಕೆ, ವಿಜ್ಞಾನ ವಿದ್ಯೆ, ವೈದ್ಯಸಹಾಯ, ಯಂತ್ರೋಪಕರಣ, ರೈಲು, ಮೋಟಾರು—ಇಂಥವುಗಳನ್ನೆಲ್ಲ ಜನ ಬಯಸುತ್ತಾರೆ. ಆ ನಾನಾ ಅಪೇಕ್ಷೆಗಳಿಗೆ ತಕ್ಕಂತೆ ಎರಡು ಪಕ್ಷಗಳೂ ತಮ್ಮ ತಮ್ಮ ಕಾರ್ಯಸೂತ್ರಗಳನ್ನು ತಿದ್ದಿಕೊಳ್ಳಬೇಕಾಗುತ್ತದೆ. ಹಾಗೆ ಆದಾಗಲೇ ನಿಜವಾದ ಪ್ರಜಾ ರಾಜಕೀಯ. ದೇಶದಲ್ಲಿ ಎರಡು ಪಕ್ಷಗಳಿದ್ದಲ್ಲದೆ ಸರಕಾರದ ಕಾರ್ಯಯೋಜನೆಗಳು ಪ್ರಜಾಪೇಕ್ಷೆಯಂತೆ ತಿದ್ದುಪಾಟು ಪಡೆಯುವುದು ದುರ್ಲಭ. ಹೀಗೆ ನೋಡಿದರೂ ದ್ವಿಪಕ್ಷ ಘಟನೆ ಪ್ರಜಾಸೌಕರ್ಯಕ್ಕೆ ಅತ್ಯವಶ್ಯವಾದ ಏರ್ಪಾಟು.

ಕಾಂಗ್ರೆಸ್ ಸಂಸ್ಥೆಯಲ್ಲಿ ಈಗ ವ್ಯಕ್ತಿಯೋಗ್ಯತಾ ಸಂಪತ್ತು ಹೇರಳವಾಗೇನೂ ಇಲ್ಲ. ಮಂತ್ರಿ ಪದವಿಗೆ ಬೇಕಾದ ನೀತಿಶುದ್ಧತೆಯನ್ನೂ ವಿದ್ಯಾಬಲವನ್ನೂ ಕಾರ್ಯದಕ್ಷತೆಯನ್ನೂ ಸಂಪಾದಿಸಿಕೊಂಡಿರುವವರು ಕಾಂಗ್ರೆಸ್ಸಿನಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಕಾಣಬರುತ್ತಾರೆಯೇ ಹೊರತು ಅಂಥವರ ಸಂಖ್ಯೆ ಯಥೇಷ್ಟವಾಗಿದೆಯೆಂದು ಹೇಳುವಂತಿಲ್ಲ. ಸಂಸ್ಥಾನಗಳ ಮಂತ್ರಿ ಸಂಪುಟಗಳನ್ನು ನೋಡಿದರೂ, ದೆಹಲಿಯದನ್ನೇ ನೋಡಿದರೂ ಈ ವ್ಯಕ್ತಿಯೋಗ್ಯತಾ ದಾರಿದ್ರ್ಯವು ಚೆನ್ನಾಗಿ ಕಾಣಬರುತ್ತದೆ. ಹೀಗಿರುವಲ್ಲಿ ಅಣ್ಣಯ್ಯನು ಪದವಿಯಿಂದುರುಳಿ ತಮ್ಮಯ್ಯನು ಅಲ್ಲಿಗೆ ಹತ್ತಿದರೆ ದೇಶಕ್ಕಾಗುವ ಲಾಭವೇನು ?

ರಾಜಕೀಯ ಪಕ್ಷದ ದೃಷ್ಟಿಯಿರಬೇಕಾದದ್ದು ತನ್ನ ತತ್ತ್ವಗಳ ಮೇಲೆ ಮತ್ತು ತಾನು ದೇಶಕ್ಕೆ ವಾಗ್ದಾನ ಮಾಡಿರುವ ಕಾರ್ಯಯೋಜನೆಗಳ ಮೇಲೆ; ಅಧಿಕಾರ

ಸ್ಥಾನಗಳ ಮೇಲೆ ಅಲ್ಲ. ಪಕ್ಷವು ಕೈಗೊಂಡಿರುವ ಪ್ರತಿಜ್ಞೆಗಳನ್ನು ನಡಸಿಕೊಡಲೊಪ್ಪಿಕೊಂಡವನು ಪಕ್ಷನಾಯಕ. ಆತನೇ ಮುಖ್ಯಮಂತ್ರಿ. ಆತನನ್ನು ಗೊತ್ತುಮಾಡಿದ ಮೇಲೆ ಅವನೊಪ್ಪಿಕೊಂಡಂತೆ ಕಾರ್ಯಸಾಧನೆ ಮಾಡಲು ಎಂಥೆಂಥವರು ಸಹಾಯಕ್ಕೆ ಬೇಕೋ ಅದನ್ನು ಆಲೋಚಿಸಿ ನಿಷ್ಕರ್ಷೆ ಮಾಡಿಕೊಳ್ಳುವ ಸ್ವಾತಂತ್ರ್ಯ ಅವನದು. ಅವನಿಗೆ ಬೇಕಾದ ಸಹಾಯಕ ಜನ ಪಕ್ಷದ ಒಳಗಡೆ ಇಲ್ಲವೆಂದು ಅವನಿಗೆ ತೋರಿದಾಗ ಪಕ್ಷದ ಹೊರಗಡೆಯಿಂದ ಅಂಥವರನ್ನು ತಂದುಕೊಳ್ಳಲು ಅವನಿಗೆ ಅವಕಾಶವಿರಬೇಕು. ಅವನು ಯಾರನ್ನಾದರೂ ನಿಯಮಿಸಿಕೊಳ್ಳಲಿ ; ಪಕ್ಷಕ್ಕೆ ಕೀರ್ತಿ ಬರುವಂತೆ, ಪಕ್ಷದ ಧ್ಯೇಯಗಳನ್ನು ಅನುಸರಿಸಿ, ಅವನು ದೇಶಕಾರ್ಯಗಳನ್ನು ನಿರ್ವಹಿಸುತ್ತಿದ್ದಾನೆಯೆ ? ಇದಿಷ್ಟನ್ನೇ ಪಕ್ಷವು ನೋಡಬೇಕಾದದ್ದು. ಅಧಿಕಾರ ಸ್ಥಾನಗಳ ಹಂಚಿಕೆಯ ಪ್ರಶ್ನೆ ಪಕ್ಷಕ್ಕೆ ಅಷ್ಟು ಮುಖ್ಯವಾಗಬಾರದು.

ಪ್ರಜಾರಾಜ್ಯದ ದೇಶಗಳಲ್ಲಿ ರಾಜಕೀಯ ಪಕ್ಷದ ಬೆಳವಣಿಗೆ ಆಗುವುದು ಒಂದು ಬಗೆಯುಲ್ಲಲ್ಲ. ಕೆಲವು ತತ್ತ್ವಗಳನ್ನು ಹಿಡಿದು ಒಂದು ಪಕ್ಷ ಹುಟ್ಟಿಕೊಳ್ಳಬಹುದು ; ಕೆಲಕೆಲವು ಗುಂಪುಗಳ ಲಾಭಸಾಧನೆಗಾಗಿ ಒಂದು ಪಕ್ಷ ಏರ್ಪಡಬಹುದು ; ಒಬ್ಬ ಪ್ರಮುಖ ವ್ಯಕ್ತಿಯ ವಾಗ್ಧೋರಣೆಗೋ ಐಶ್ವರ್ಯಕ್ಕೋ ಸಮಾಜಗಣ್ಯತೆಗೋ ಕುಟಿಲ ಚಮತ್ಕಾರಕ್ಕೋ ಇತರ ಪ್ರಭಾವಕ್ಕೋ ಒಳಗಾಗಿ ಕೆಲವು ಮಂದಿ ಒಂದು ಪಕ್ಷವನ್ನು ಸ್ಥಾಪಿಸಬಹುದು ; ಯಾವುದೋ ಒಂದು ಉದ್ವೇಗದಿಂದ ಅಥವಾ ಭೀತಿಯಿಂದ ಕೆಲವರು ಒಂದು ಪಕ್ಷವಾಗಿ ಸೇರಿಕೊಳ್ಳಬಹುದು ;—ಹೀಗೆ ರಾಜಕೀಯ ಪಕ್ಷದ ಉತ್ಪತ್ತಿಯ ವಿಧಾನಗಳು ನಾನಾಕಾರಿರುತ್ತವೆ. ಮತ್ತು ಒಂದು ಪಕ್ಷವು ಕೆಲವು ಕಾಲ ಬಾಳಿ ಕೆಲಸ ಮಾಡಿ, ಆಮೇಲೆ ಎರಡಾಗಿಯೋ ಮೂರಾಗಿಯೋ ಒಡೆಯುವುದೂ ಉಂಟು. ಇಂಥ ಎಲ್ಲ ಸಂಗತಿಗಳಿಗೂ ಇಂಗ್ಲೆಂಡ್, ಅಮೆರಿಕಾ, ಫ್ರಾನ್ಸುಗಳ ಚರಿತ್ರೆಗಳಲ್ಲಿ ನಿದರ್ಶನಗಳು ದೊರೆಯುತ್ತವೆ. ನಮ್ಮ ಕಾಂಗ್ರೆಸ್ ಸಂಸ್ಥೆ ಮನುಷ್ಯಸ್ವಭಾವವನ್ನು ಮೀರಬಲ್ಲದ್ದೇನೂ ಅಲ್ಲ. ಇತರ ಕಡೆಗಳಲ್ಲಿ ಆಗಿರುವಂತೆ ನಮ್ಮಲ್ಲಿಯೂ ಒಂದು ಸಂಸ್ಥೆ ಎರಡಾಗಿ ಒಡೆದರೆ ಅದಕ್ಕಾಗಿ ಯಾರೂ ಎದೆ ಬಡಿದುಕೊಳ್ಳಬೇಕಾದದ್ದಿಲ್ಲ. ಸದ್ಯಕ್ಕೆ ಮೈಸೂರಿನ ಕಾಂಗ್ರೆಸ್ಸಿನಲ್ಲಿ ತೋರಿರುವ ಬಿರುಕಿನಲ್ಲಿ ಮೂಲ ತತ್ತ್ವಗಳ ಮತ್ತು ಸಾರ್ವಜನಿಕ ಧ್ಯೇಯಗಳ ಪ್ರಸಕ್ತಿಯೇನೂ ತೋರಿಬರುತ್ತಿಲ್ಲ. ವ್ಯಕ್ತಿಪ್ರತಿಷ್ಠೆ ವ್ಯಕ್ತಿಸ್ಪರ್ಧೆಗಳೇ ಇಲ್ಲಿ ಎದ್ದು ಕಾಣುತ್ತಿರುವುದು. ದೆಹಲಿಯ ಕಾಂಗ್ರೆಸ್ ಮಹಾ ಸೌಧದಲ್ಲಿಯ ಬಿರುಕಿನಲ್ಲಿ ವ್ಯಕ್ತಿಕಾರಣಗಳ ಜೊತೆಗೆ ಆಡಳಿತದ ನೀತಿ ವಿಧಾನ ಪ್ರಶ್ನೆಯೂ ಸೇರಿಕೊಂಡಿದೆ.

ಒಟ್ಟಿನಲ್ಲಿ—

(1) ಪ್ರತಿಪಕ್ಷ ಭೀತಿ,

(2) ಸ್ವಪಕ್ಷದ ಕಾರ್ಯನೀತಿಯೋಜನೆಗಳ ಸಮಯೋಚಿತವಾದ ಪುನಃ ಪರಿಷ್ಕರಣೆ,

(3) ಸ್ವಪಕ್ಷದೊಳಗಣ ವ್ಯಕ್ತಿಶಕ್ತಿ ನ್ಯೂನತೆಯ ಸಂದರ್ಭದಲ್ಲಿ ಉಚಿತವರಿತುಹೊರಗಣಿಂದ ಸಹಾಯ ತೆಗೆದುಕೊಳ್ಳಲು ಪಕ್ಷ ನಾಯಕನಿಗೆ ಸ್ವಾತಂತ್ರ್ಯ—

ಈ ಮೂರು ಅಂಶಗಳೂ ಪಕ್ಷಘಟನಾವಲಂಬಿಯಾದ ಪ್ರಜಾರಾಜ್ಯ ಪದ್ಧತಿಯಲ್ಲಿ ಅವಶ್ಯವಾಗಿರಬೇಕಾದ ಲಕ್ಷಣಗಳು.

ಜವಾಬ್ದಾರೀ ಸರಕಾರವೆಂಬುದು ಒಂದು ಅಂಧಾಚಾರವಲ್ಲ; ಲೋಕದಲ್ಲಿ ದೊಡ್ಡ ದೊಡ್ಡವರೆಲ್ಲಾ ಆ ಮಾತನಾಡುತ್ತಾರೆ. ಆದದ್ದರಿಂದ ಹಾಗೆ ನಾವೂ ಆಡೋಣ—ಎಂಬ "ಫ್ಯಾಷನ್"ವಿಷಯವಲ್ಲ. ಅದು ಒಂದು ಕಾರ್ಯಕಾರಣ ವಿವೇಚನೆಯಿಂದ ತೋರಿಬಂದಿರುವ ಕಾರ್ಯವ್ಯವಸ್ಥೆ. ಅದರಿಂದ ಕೆಲವು ಗೊತ್ತಾದ ಉದ್ದೇಶಗಳು ನೆರವೇರಬೇಕು. ಆ ಉದ್ದೇಶಗಳನ್ನು ಜವಾಬ್ದಾರೀ ಸರಕಾರವು ಸಾಂಗಪಡಿಸಲಾರದೆ ಹೋದಲ್ಲಿ, ಆ ಜವಾಬ್ದಾರೀ ಸರಕಾರವೆಂಬುದು ದೇಶಕ್ಕೆ ಒಂದು ಹೊಸ ಶವಭಾರದಂತೆಯೇ ಸರಿ.

ಈ ಹೊಸ ರಾಜ್ಯಕ್ರಮದ ಮೂಲತತ್ತ್ವಗಳನ್ನೂ ಅಂತರ್ಭಾವಗಳನ್ನೂ ನಮ್ಮ ಜನತೆ ಚೆನ್ನಾಗಿ ಗ್ರಹಿಸಬೇಕಾದ ಕಾಲ ಈಗ ಬಂದಿದೆ. ಇನ್ನು ಕೆಲವು ತಿಂಗಳುಗಳೊಳಗಾಗಿ, ಮುಂದೆ ರಾಜ್ಯವಾಳತಕ್ಕವರನ್ನು ಪ್ರಜಾಜನರು ಚುನಾಯಿಸುವ ದಿವಸ ಬರುತ್ತದೆ. ಆ ಚುನಾವಣೆಗಳು ನಿಜವಾಗಿ ಪ್ರಯೋಜನಕರವಾಗಬೇಕಾದರೆ ಮಹಾಜನರು ಬರಿಯ ಬೀದಿಯ ಕೂಗುಗಳಿಗೆ ಮನಸೋತು ನಡೆಯುವವರಾಗದೆ, ತತ್ತ್ವಗಳನ್ನು ಆಲೋಚಿಸುವವರಾಗಬೇಕು.

ಸದ್ಯಕ್ಕೆ ಮೈಸೂರಿನಲ್ಲಿ ಕಾಂಗ್ರೆಸ್ಸಿನಿಂದ ಹೊರಗಡೆ ಪ್ರಜಾಭಿಪ್ರಾಯವೆಂಬುದು ಮೌನವಾಗಿದೆ. ಇಂಡಿಯದ ಎಲ್ಲ ಭಾಗಗಳಲ್ಲೂ ಸಾರ್ವಜನಿಕ ಪರಿಸ್ಥಿತಿಯು ಈಗ ಹೀಗೆಯೇ ಇದೆಯೆಂದು ಹೇಳಬಹುದು. ದೇಶದ ದುರದೃಷ್ಟದಲ್ಲಿ ಇದು ಮೊದಲನೆಯ ಅಂಶ. ಕಾಂಗ್ರೆಸ್ ಸರಕಾರಗಳ ಅವ್ಯವಸ್ಥೆ ಎಲ್ಲರ ಬಾಯಲ್ಲೂ ಇದ್ದರೂ ಆ ಅಸಮಾಧಾನವನ್ನು ಸಂಸ್ಥಾಮುಖೇನ ಗಟ್ಟಿಯಾಗಿ ವ್ಯಕ್ತಪಡಿಸಲು ಯಾರೂ ಧೈರ್ಯ ಮಾಡುತ್ತಿಲ್ಲ. ಕಾಂಗ್ರೆಸ್ಸಿಗರನ್ನು ಎದುರುಹಾಕಿಕೊಂಡರೆ ತಾತ್ಕಾಲಿಕವಾಗಿ ಅನೇಕ ತೊಂದರೆಗಳು ಸಂಭವಿಸುತ್ತವೆ. ಒಂದಾನೊಂದು ಸಂಸ್ಥಾನದಲ್ಲಿ ಒಬ್ಬ ಕಾಂಗ್ರೆಸ್ ಪಕ್ಷದ ಪ್ರಜಾಪ್ರತಿನಿಧಿಯು ಅಲ್ಲಿಯ ಶಾಸನ ಸಭೆಯಲ್ಲಿ ಕಾಂಗ್ರೆಸ್ ಸರಕಾರಕ್ಕೆ ಪ್ರತಿಕೂಲವಾದ ಪ್ರಶ್ನೆಗಳನ್ನೂ ನಿರ್ಣಯಗಳನ್ನೂ ಹಾಕಿದ ಕಾರಣದಿಂದ, ಗ್ರಾಮಾಂತರದಲ್ಲಿ ವಾಸವಾಗಿದ್ದ ಆತನಿಗೆ ಆಹಾರ ಸಾಮಗ್ರಿಯ ಸರಬರಾಯಿ ವಿಷಯದಲ್ಲಿಯೂ ಸಣ್ಣಪುಟ್ಟ ಜೀವನ ಸೌಕರ್ಯಗಳ ವಿಷಯದಲ್ಲಿಯೂ ಕಿರುಕುಳವಾದದ್ದು ವಾಸ್ತವದ ಸಂಗತಿ. ಆದರೆ ಇಂಥಾ ಕಿರುಕುಳದ ಅಂಜಿಕೆಯಿಂದ ನಮಗೆ ಬಿಡುಗಡೆ ಎಂದಿಗೆ? ದೇಶದಲ್ಲಿ ಪಕ್ಷದಾಕ್ಷಿಣ್ಯವಿಲ್ಲದ ಮತ್ತು ಪ್ರಾಮಾಣಿಕತೆಯ

ಧೈರ್ಯವುಳ್ಳ ಸಾರ್ವಜನಿಕರು ಹತ್ತಾರು ಮಂದಿಯಾದರೂ ಇದ್ದು, ಸರಕಾರದ ನಡವಳಿಕೆಗಳನ್ನು ಬಹಿರಂಗವಾಗಿ ಟೀಕೆ ವಿಮರ್ಶನೆಗಳಿಗೆ ಗುರಿಪಡಿಸುತ್ತಿದ್ದಿದ್ದರೆ, ಮೈಸೂರಿನ ಕಳೆದ ಮೂರು ವರ್ಷಗಳ ಚರಿತ್ರೆ ಸ್ವಲ್ಪಮಟ್ಟಿಗಾದರೂ ಬೇರೆ ತೆರದ್ದಾಗಿ ಪ್ರೋತ್ಸಾಹಕರವಾಗಿರುತ್ತಿತ್ತೆಂದು ತೋರುತ್ತದೆ. ನಮ್ಮಲ್ಲಿ ಸರಕಾರದ ಅನುಭವವುಳ್ಳ ಭಾರೀ ಪೆನ್‌ಷನ್‌ದಾರರೂ, ರಾಜಕೀಯ ಪ್ರಜ್ಞೆಯುಳ್ಳ ವಕೀಲರೂ, ಇತರ ಮಹನೀಯರೂ ಬಹುಮಂದಿ ಇದ್ದಾರೆ. ಅವರು ಯಾವ ರಾಜಕೀಯ ಕಕ್ಷಿಯ ಹಂಗಿಗೂ ಒಳಪಡಬೇಕಾದವರಲ್ಲ. ಅಂಥವರು ದೇಶಕಾರ್ಯ ವಿಚಾರಗಳಲ್ಲಿ ತಮ್ಮ ಅಭಿಪ್ರಾಯವನ್ನು ಬಹಿರಂಗವಾಗಿ ಹೇಳಲು ಮೊದಲು ಮಾಡಿದರೆ ಕಾಂಗ್ರೆಸ್ ಸರಕಾರ ಸಹ—ಅದು ಅಣ್ಣಯ್ಯನ ಪಕ್ಷದ್ದೇ ಆಗಲಿ, ತಮ್ಮಯ್ಯನ ಪಕ್ಷದ್ದೇ ಆಗಲಿ—ಕೊಂಚಮಟ್ಟಿಗಾದರೂ ತನ್ನ ದಾರಿಯನ್ನು ತಿದ್ದಿಕೊಳ್ಳಬೇಕಾದೀತು.

**ಸಿದ್ಧಾಂತ ವಾಕ್ಯ ಇಷ್ಟು: ಪ್ರಜಾರಾಜ್ಯದ ಶ್ರೇಯಸ್ಸು ಪ್ರಜಾವ್ಯಕ್ತಿಯ ರಾಷ್ಟ್ರಕರ್ತವ್ಯನಿಷ್ಠೆಗೆ ತಕ್ಕಂತೆ ಇರುತ್ತದೆ. ರಾಜಕೀಯಪಕ್ಷದ ಸಾರ್ಥಕತೆ ವ್ಯಕ್ತಿಸಾಕ್ಷಿಕನ ಯೋಗ್ಯತೆಗೆ ತಕ್ಕಂತೆ ಇರುತ್ತದೆ.**

[ಡಿಸೆಂಬರ್ 13, 1950]

[ ಈ ಲೇಖನದಲ್ಲಿ ಹೇಳಿರುವ ಸಾರಭೂತವಾದ ವಿಚಾರಧಾರೆ 36 ವರ್ಷಗಳಷ್ಟು ಹಿಂದಿನ ಮೈಸೂರು ಸಂಸ್ಥಾನದ ಆಳುವ ಪಕ್ಷವಾಗಿದ್ದ ಕಾಂಗ್ರೆಸ್ ಸರ್ಕಾರದ ಬಗೆಗೂ ಅಂದಿನ ರಾಜಕೀಯ ವಿದ್ಯಮಾನಕ್ಕೂ ಸಂಬಂಧಪಟ್ಟಿದ್ದಾದರೂ, ಇಂದಿನ ಭಾರತ ರಾಷ್ಟ್ರದ ಹಾಗೂ ಕರ್ನಾಟಕ ರಾಜ್ಯದ ರಾಜಕೀಯ ವಿದ್ಯಮಾನಗಳಿಗೂ ಸಂಬಂಧಪಟ್ಟಂತೆ ಎಷ್ಟು ಪ್ರಸ್ತುತವಾಗಿದೆ ಎಂಬುದನ್ನು ಪರಿಭಾವಿಸಿದರೆ ಡಿ.ವಿ.ಜಿ. ಅವರ ರಾಜಕೀಯ ದೂರದರ್ಶಿತ್ವ ಎಂಥದು ಎಂಬುದು ಅರಿವಾಗುತ್ತದೆ.—ಸಂ. ]

# ಮುಖ್ಯಮಂತ್ರಿತ್ವಕ್ಕಿರಬೇಕಾದ ಶಾಸಕ ಸದಸ್ಯತ್ವದ ಅರ್ಹತೆ

ಮೈಸೂರಿನ ಸದ್ಯದ ಮುಖ್ಯಮಂತ್ರಿಗಳು ಸ್ವತಃ ರಾಜೀನಾಮೆ ಕೊಡುವುದರಿಂದಲಾಗಲಿ, ತಮ್ಮ ರಾಜಕೀಯ ಪಕ್ಷದ ಅವಿಶ್ವಾಸ ಸೂಚನೆಯ ಮೂಲಕ ಪಕ್ಷನಾಯಕತ್ವವನ್ನು ಕಳೆದುಕೊಂಡದ್ದರಿಂದಲಾಗಲಿ, ಮುಖ್ಯಮಂತ್ರಿ ಪದವಿ ಬಿಡುವಾದರೆ ಆಗ ಆ ಸ್ಥಾನಕ್ಕೆ ಬೇರೊಬ್ಬರನ್ನು ರಾಜಪ್ರಮುಖರು ನಿಯಮಿಸುವಲ್ಲಿ ಆ ಬೇರೊಬ್ಬರು ಈಗ ಶಾಸನ ಸಂಸ್ಥೆಯಲ್ಲಿರುವ ಕಾಂಗ್ರೆಸ್ ಪಕ್ಷ ಪ್ರಮುಖರಾಗಿರಬೇಕೆ, ಅಥವಾ ಶಾಸನ ಸಂಸ್ಥೆಯ ಹೊರಗಣ ಕಾಂಗ್ರೆಸ್ ಪ್ರಮುಖರು ಬೇಕಾದರೂ ಆಗಬಹುದೆ?

ಇದೊಂದು ತತ್ತ್ವಾತ್ಮಕವಾದ ಪ್ರಶ್ನೆ. ಇಂಡಿಯಾದ ಈ ಗಣರಾಜ್ಯ ನಿಬಂಧನೆಯಲ್ಲಿ ಈ ಪ್ರಶ್ನೆಗೆ ಸ್ಪಷ್ಟವಾದ ಉತ್ತರವಿಲ್ಲ. ಮಂತ್ರಿನಿಯೋಜನೆಯನ್ನು ಕುರಿತ ವಿಧಿಯು ನಿಬಂಧನ ಶಾಸನದ 164ನೆಯ ವಿಧಿವಾಕ್ಯದಲ್ಲಿದೆ. ಅದರಂತೆ ಮುಖ್ಯಮಂತ್ರಿಯನ್ನು ನಿಯಮಿಸತಕ್ಕವರು ರಾಜಪ್ರಮುಖರು. ಇತರ ಮಂತ್ರಿಗಳನ್ನು ನಿಯಮಿಸುವವರೂ ರಾಜಪ್ರಮುಖರೇ ಆದರೂ ಅದು ಮುಖ್ಯಮಂತ್ರಿಯ ಸಲಹೆಯ ಮೇಲೆ. ಹೀಗೆ ಮುಖ್ಯೇತರ ಮಂತ್ರಿಗಳ ನಿಯಾಮಕವಾಗುವುದು ವಸ್ತುತಃ ಮುಖ್ಯಮಂತ್ರಿಯಿಂದಲೇ. ಮುಖ್ಯಮಂತ್ರಿಯೂ ಒಬ್ಬ ಮಂತ್ರಿಯೇ ಆದರೂ ಆತನ ಅಧಿಕಾರದಲ್ಲಿ ಸಾಮಾನ್ಯ ಮಂತ್ರಿತ್ವದೊಂದಿಗೆ ಇನ್ನೊಂದು ವಿಶೇಷಾಂಶ ಕೂಡಿಕೊಂಡಿರುತ್ತದೆ. ಈ ರೀತಿ ಮುಖ್ಯಮಂತ್ರಿ ಸ್ಥಾನವು ಸಾಮಾನ್ಯ ಮಂತ್ರಿಸ್ಥಾನದಿಂದ ಬೇರೆ ಮಾಡಲ್ಪಟ್ಟಿದೆ.

ಮೇಲೆ ಉದಾಹರಿಸಿರುವ (164ನೆಯ) ವಿಧಿವಾಕ್ಯದ (4)ನೆಯ ಅಂತರ್ವಾಕ್ಯವು—ಯಾವ ಮಂತ್ರಿಯಾದರೂ ಎಂದಿನ ಆರುತಿಂಗಳ ಅವಿಚ್ಛಿನ್ನ ಕಾಲ ಪರ್ಯಂತವಾದರೂ ಶಾಸನ ಸಂಸ್ಥೆಯಲ್ಲಿಲ್ಲದೆ ಹೋದರೆ ಆ ಕಾಲಾವಧಿ ಮುಗಿದಾಗ ಆತನ ಮಂತ್ರಿತ್ವವು ನಿಲ್ಲತಕ್ಕದ್ದೆಂದು ಸ್ಪಷ್ಟಪಡಿಸುತ್ತದೆ. ಎಂದರೆ, ಆರು ತಿಂಗಳಿಗಿಂತ ಕಡಮೆಯಷ್ಟು ಕಾಲ—ಬೇಕಾದರೆ ಐದು ತಿಂಗಳು ಇಪ್ಪತ್ತೊಂಬತ್ತು ದಿನದ

ಮಟ್ಟಿಗೆ—ಒಬ್ಬಾನೊಬ್ಬ ಮಂತ್ರಿಯು ಶಾಸನಸಂಸ್ಥೆಯ ಸದಸ್ಯನಲ್ಲದೆ ಇದ್ದರೂ ಆಗಬಹುದು. 5 ತಿಂಗಳು 30 ದಿವಸ ಕಳೆಯುವಷ್ಟರೊಳಗಾಗಿ ಆತನು ಆ ಸದಸ್ಯತ್ವ ವನ್ನು ಸಂಪಾದಿಸಿಕೊಂಡರೆ ಸಾಕು ; ಆಗ ಆತನು ಅಲ್ಲಿಂದ ಮುಂದಕ್ಕೂ ಮಂತ್ರಿ ಯಾಗಿರಲರ್ಹನಾಗುತ್ತಾನೆ. ಈ ಆರು ತಿಂಗಳ ವಿನಾಯಿತಿಯನ್ನು ನೋಡಿದರೆ, ಮಂತ್ರಿತ್ವಕ್ಕೆ ನಿಯಮಿಸಲ್ಪಟ್ಟವನು ಆ ದಿವಸ ಶಾಸಕ ಸದಸ್ಯನಾಗಿಯೇ ಇರಬೇಕೆಂಬ ಕಟ್ಟುಪಾಡು ರಾಜ್ಯನಿಬಂಧನ ಗ್ರಂಥದಲ್ಲಿ ಕಾಣುವುದಿಲ್ಲ.

ಆದರೆ, ಈ ವಿನಾಯತಿಯ ಅಂತರ್ವಾಕ್ಯವು ಸಾಮಾನ್ಯ ಮಂತ್ರಿಗಳಿಗೆ ಅನ್ವಯಿಸುವಂತೆ ಮುಖ್ಯಮಂತ್ರಿಗೂ ಅನ್ವಯಿಸುತ್ತದೆಯೆ ? ಶಾಸನ ಸಂಸ್ಥೆಯಲ್ಲಿಲ್ಲ ದಾತನು ಮುಖ್ಯಮಂತ್ರಿಯೂ ಆಗಬಹುದೇ ?

ಈ ಪ್ರಶ್ನೆಗೆ ನಮ್ಮ ರಾಜ್ಯನಿಬಂಧನೆಯಲ್ಲಿ ಕಂಠೋಕ್ತವಾದ ಉತ್ತರವಿಲ್ಲ ದಿರುವುದರಿಂದ ನಾವು ಇಂಗ್ಲೆಂಡಿನ ದೃಷ್ಟಾಂತವನ್ನು ನೋಡುವುದು ಯುಕ್ತವಾಗಿದೆ. ಇಂಗ್ಲೆಂಡಿನ ರಾಜ್ಯನಿಬಂಧನೆ ಲಿಖಿತ ಶಾಸನ ರೂಪದಲ್ಲಿಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಅಲ್ಲಿಯ ರಾಜ್ಯವ್ಯವಸ್ಥೆ ಬಹುಭಾಗದಲ್ಲಿ ಬಹುಕಾಲದ ಸಂಪ್ರದಾಯ ಸಂಕೇತಗಳ ರೂಪದಲ್ಲಿ ಬಂದಿರತಕ್ಕದ್ದು. ಆದದ್ದರಿಂದ ನಮಗೆ ಅಲ್ಲಿಯ ಪದ್ಧತಿ ಲಿಖಿತ ವಾಕ್ಯದಂತೆ ಪ್ರಮಾಣವಾದದ್ದು. ಅದರ ಪ್ರಕಾರ ಮಂತ್ರಿಯಾದವನು, ಸಾಮಾನ್ಯನಾಗಲಿ ಮುಖ್ಯನಾಗಲಿ ಶಾಸಕ ಸಂಸ್ಥೆಯ, ಎಂದರೆ ಪಾರ್ಲಿಮೆಂಟಿನ, ಸದಸ್ಯ ನಾಗಿರಬೇಕೆಂಬುದೇ ನಿತ್ಯನಿಯಮ. ಆ ನಿಯಮವು ವಿನಾಯತಿ ಇಲ್ಲದ್ದಲ್ಲವಾದರೂ ಅಂಥ ವಿನಾಯತಿಗಳು ತೀರಾ ವಿರಳ.

ಆ್ಯನ್ಸನ್ (W. R. Anson) ಎಂಬ ಪ್ರಮಾಣ ಗ್ರಂಥಕಾರನು ಹೀಗೆ ಬರೆದಿದ್ದಾನೆ :

There is no statutory necessity that any one of the ministers should be in Parliament, but in pracitce a Minister who could not obtain a seat in the House of Commons, and who was not, and did not wish to be, a member of the House of Lords, could not continue to hold office for many weeks. (*Law & Custom of the Constitution, Parliament*, p. 5.)

(ಮಂತ್ರಿಯಾದವನು ಪಾರ್ಲಿಮೆಂಟಿನಲ್ಲಿ ಇರಲೇಬೇಕೆಂಬ ಶಾಸನ ನಿರ್ಬಂಧ ವೇನೂ ಇಲ್ಲ. ಆದರೆ ಆಚರಣೆಯಲ್ಲಿ, ಯಾವ ಮಂತ್ರಿಯು ಪ್ರಜಾಸಾಮಾನ್ಯ ಸಭೆಯಲ್ಲಿ ಜಾಗ ಸಂಪಾದಿಸಿಕೊಳ್ಳಲಾರದೆ ಹೋಗಿದ್ದಾನೋ ಮತ್ತು ಶ್ರೀಮಂತ ಸಭೆಯಲ್ಲಿ ಸದಸ್ಯನಲ್ಲವೋ ಅವನು ಬಹುವಾರಗಳ ಕಾಲ ಮಂತ್ರಿ ಪದವಿಯನ್ನುಳಿಸಿ ಕೊಂಡಿರಲಾರ.)

ಕೀತ್ (A. B. Keith) ಹೀಗೆ ಬರೆದಿದ್ದಾನೆ :

It is essential that the Prime Minister shall be able to form a Government which can secure a Vote of Confidence if need be, from the Commons, and the Sovereign must fix finally upon a politician thus qualified ......... The essential principles of Parliamentary Government demand that all officers of Cabinet rank shall be members of one or other House of Parliament. Exceptions are due only to special and temporary circumstances. (*The British Cabinet System*, pp. 30, 50)

(ಮುಖ್ಯಮಂತ್ರಿಯು, ಪ್ರಜಾ ಸಾಮಾನ್ಯಸಭೆಯ ವಿಶ್ವಾಸನಿರ್ಣಯವನ್ನು ಅವಶ್ಯವಾದಾಗ ಸಂಪಾದಿಸಿಕೊಳ್ಳಬಲ್ಲಂಥ ಸರಕಾರವನ್ನು ರಚಿಸುವುದು ಅವಶ್ಯ ವಿಷಯ. ಪ್ರಭುಗಳು ಅದಕ್ಕೆ ತಕ್ಕ ರಾಜಕೀಯಸ್ಥನನ್ನು (ಮುಖ್ಯಮಂತ್ರಿಯಾಗಿ) ಗೊತ್ತುಮಾಡಿಕೊಳ್ಳಬೇಕು...ಮಂತ್ರಿಸಂಪುಟದ ದರ್ಜೆಯ ರಾಜ್ಯಾಧಿಕಾರಿಗಳು ಪಾರ್ಲಿಮೆಂಟಿನ ಎರಡು ಸಭೆಗಳ ಪೈಕಿ ಯಾವುದಾದರೊಂದರ ಸದಸ್ಯರಾಗಿರಲೇ ಬೇಕೆಂದು ಪಾರ್ಲಿಮೆಂಟರಿ ಸರಕಾರ ಪದ್ಧತಿಯ ತತ್ತ್ವಗಳು ವಿಧಾಯಕ ಮಾಡುತ್ತವೆ. ಈ ವಿಧಿಯಿಂದ ವಿನಾಯಿತಿಗಳೇನಾದರೂ ನಡೆದಲ್ಲಿ ಅವು ಕಿಂಚಿತ್ಕಾಲದ ಮತ್ತು ವಿಶೇಷವಾದ ಸಂದರ್ಭಗಳಿಗೆ ಮಾತ್ರ ಸಂಬಂಧಪಟ್ಟವು.)

ಜೆನ್ನಿಂಗ್ಸ್ (W. I. Jennings) ಎಂಬಾತನು ಹೀಗೆ ಬರೆದಿದ್ದಾನೆ :

It is a settled rule that the Prime Minister must be either a Peer or a member of the House of Commons. Parliamentary Government demands not merely that the Prime Minister shall, with his colleagues, be responsible to the House of Commons, but also that he shall be able to justify his policy in Parliament. Every Prime Minister since Sir Robert Walpole (1727) has been in one of the Houses (*Cabinet Government*, P. 21).

[ಮುಖ್ಯಮಂತ್ರಿಯು ಅವನು ನಿಯಮಿತನಾಗುವ ಕಾಲದಲ್ಲಿ ಶ್ರೀಮಂತ ಸಭೆಯ ಅಥವಾ ಪ್ರಜಾ ಸಾಮಾನ್ಯಸಭೆಯ ಸದಸ್ಯನಾಗಿರಬೇಕೆಂಬುದು ನಿಷ್ಕರ್ಷೆಯಾಗಿರುವ ನಿಯಮ. ಮುಖ್ಯಮಂತ್ರಿಯು ತನ್ನ ಸಹೋದ್ಯೋಗಿಗಳೊಡಗೂಡಿ ಪ್ರಜಾ ಸಾಮಾನ್ಯ ಸಭೆಗೆ ಜವಾಬುದಾರನಾಗಿರಬೇಕಾದದ್ದು ಮಾತ್ರವೇ ಅಲ್ಲದೆ ತನ್ನ ಕಾರ್ಯ ನೀತಿಯನ್ನು ಪಾರ್ಲಿಮೆಂಟಿನಲ್ಲಿ ಸಮರ್ಥನ ಮಾಡಬಲ್ಲವನಾಗಿರಬೇಕು—ಎಂಬುದು ಪಾರ್ಲಿಮೆಂಟರಿ ಸರಕಾರದ ಪದ್ಧತಿಗೆ ಅವಶ್ಯವಾಗಿರುತ್ತದೆ. ಸರ್ ರಾಬರ್ಟ್ ವಾಲ್-ಪೋಲ್ ಕಾಲದಿಂದ, ಎಂದರೆ ಸನ್ 1727 ರಿಂದ, ಪ್ರತಿಯೊಬ್ಬ ಮುಖ್ಯಮಂತ್ರಿಯೂ (ನೇಮಕವಾದ ದಿವಸ) ಪಾರ್ಲಿಮೆಂಟಿನ ಎರಡು ಸಭೆಗಳ ಪೈಕಿ ಯಾವುದಾದರೊಂದರ ಸದಸ್ಯನಾಗಿದ್ದುಕೊಂಡಿದ್ದಾನೆ.]

ಹೀಗೆ ಶಾಸನ ಸಂಸ್ಥೆಯ ಸದಸ್ಯತ್ವದಿಂದ—ಆರು ತಿಂಗಳ ಮಟ್ಟಿಗೋ ಆರು ವಾರದ ಮಟ್ಟಿಗೋ—ವಿನಾಯಿತಿ ಕೊಡುವ ಏರ್ಪಾಟು ಇಂಗ್ಲೆಂಡಿನಲ್ಲಿ ಮುಖ್ಯೇತರ

ಮಂತ್ರಿಗೆ ಆಗಬಹುದೇ ಹೊರತು ಮುಖ್ಯಮಂತ್ರಿಗೆ ಸಲ್ಲದೆಂಬುದು ಸಿದ್ಧವಾಗಿದೆ. ಸಾಮಾನ್ಯ ಮಂತ್ರಿಸ್ಥಾನಕ್ಕೆ ಕೊಟ್ಟಿರುವ ವಿನಾಯತಿ ಕೂಡ ಅಲ್ಲಿ ವಾಸ್ತವವಾಗಿ ಪ್ರಯೋಗಕ್ಕೆ ಬಂದಿರುವುದು ಬಹು ಅಪರೂಪವಾಗಿ,—ಕಳೆದ 220 ವರ್ಷಗಳಲ್ಲಿ ಆರೇಳು ಸಾರಿ ಮಾತ್ರ. ಇಂಗ್ಲೆಂಡಿನಲ್ಲಿ ಶಾಸಕ ಸಭಾ ಸದಸ್ಯತ್ವವೂ ಮುಖ್ಯಮಂತ್ರಿಗೆ ಇರಲೇ ಬೇಕಾದ ಪೂರ್ವಸಿದ್ಧತೆ. ಅವನು ಅದನ್ನು ಉತ್ತರೋತ್ತರ ಸಂಪಾದಿಸಿ ಕೊಳ್ಳತಕ್ಕದ್ದಲ್ಲ.

ಆ ವಿನಾಯತಿಯನ್ನು ಮುಖ್ಯಮಂತ್ರಿಗೆ ಕಲ್ಪಿಸಿಕೊಟ್ಟರೆ ಆಗಬಹುದಾದ ಅನರ್ಥ ಗಳೇನೆಂಬುದನ್ನು ನೋಡೋಣ :

(1) ಶಾಸನ ಸಂಸ್ಥೆಯಲ್ಲಿ ಮಂತ್ರಿಸಂಪುಟಕ್ಕೆ ಸತ್ತ್ವಪರೀಕ್ಷೆ ಎಂದಾದರೂ ಯಾವ ವೇಳೆಯಲ್ಲಾದರೂ ಒದಗಿಕೊಳ್ಳಬಹುದು. ಅದು ಒದಗಿದಾಗ ಮಂತ್ರಿ ಸಂಪುಟವು ತೇರ್ಗಡೆ ಹೊಂದಬೇಕಾದರೆ ಮುಖ್ಯಮಂತ್ರಿಯಾಗಿರುವಾತನು ಆ ಸಂಸ್ಥೆ ಯಲ್ಲಿ ತನಗಿರುವ ಬಲಾಬಲಗಳನ್ನು ಚೆನ್ನಾಗಿ ಅರಿತಿರುವವನಾಗಿರಬೇಕು. ಹಾಗೆ ಅದನ್ನರಿತುಕೊಳ್ಳುವುದು ಶಾಸನ ಸಭೆಯ ಪುನರ್ನಿರ್ಮಾಣ ಕಾಲದಲ್ಲಿ ಅಲ್ಲಿಗೆ ಬಂದ ವನಿಗೆ ಮಾತ್ರವೇ ಸಾಧ್ಯ. ಯಾರು ಚುನಾವಣೆಯ ಕಾಲದಲ್ಲಿಯೇ ಚುನಾವಣೆ ಪಡೆದು ಮೊದಲಿನಿಂದ ಶಾಸನಸಭೆಯಲ್ಲಿದ್ದುಕೊಂಡು ಹಳಬನಾಗಿರುತ್ತಾನೋ ಅವನಿಗೆ ಬಲಾಬಲಗೊತ್ತಾಗುವಂತೆ ಚುನಾವಣೆ ಪಡೆಯದೆ ಹೊಸದಾಗಿ ಅಲ್ಲಿಗೆ ಬಂದವನಿಗೆ ಗೊತ್ತಾಗಲಾರದು. ಇಂಥಾ ಆಗಂತುಕನು ಪ್ರಬಲ ರಾಜಕೀಯ ಪಕ್ಷಕ್ಕೆ ಪ್ರಮುಖ ನಾಗಿರಬಹುದು: ಆ ಹೊರಗಣ ಪ್ರಮುಖತೆಯು ಶಾಸನ ಸಭೆಯ ಒಳಗಡೆ ಪ್ರಯೋಜನಕ್ಕೆ ಬಂದೀತೆಂಬುದು ಖಾತರಿಯ ಮಾತಲ್ಲ. ಮಸಲಾ ಎಪ್ಪತ್ತು ಮಂದಿ ಸದಸ್ಯರುಳ್ಳ ಶಾಸನ ಸಂಸ್ಥೆಯಲ್ಲಿ 50 ಮಂದಿ ಕಾಂಗ್ರೆಸ್ಸಿಗರೆಂದಿಟ್ಟುಕೊಳ್ಳೋಣ. ಈ 50 ಮಂದಿಯೂ ಪಕ್ಷನಾಯಕ ದೇವಪ್ಪನ ವಿಷಯದಲ್ಲಿ ತಮ್ಮ ಅಂತರಂಗ ದೊಳಗೆ ಏಕಪ್ರಕಾರವಾದ ಭಾವನೆಯನ್ನಿಟ್ಟುಕೊಂಡಿರುತ್ತಾರೆಂಬ ನಿರೀಕ್ಷಣೆಗೆ ಕಾರಣ ವಿರಲಾರದು. ಪಕ್ಷದ ಒಳಗಡೆಯೇ ಪಂಗಡಗಳಾಗಿ, ಆ ಕಿತ್ತಾಟಗಳಿಂದ ಪಕ್ಷ ಬಿರಿಯು ತ್ತಿರುವುದು ಇಂದಿನ ಅನುಭವದ ಮಾತಾಗಿದೆ.

(i) ಹೀಗಿರುವಲ್ಲಿ ಪಕ್ಷ ನಾಯಕನು ಪಕ್ಷಿಗರ ಪೈಕಿ ಅಧಿಕ ಸಂಖ್ಯೆಗೆ ಸಮ್ಮತ ನಾದವನೆಂದು ಹೇಳಬಹುದೇ ಹೊರತು ಸಮಸ್ತರ ಸಮ್ಮತಿಯನ್ನೂ ಪಡೆದವನೆಂದು ಹೇಳಲಾಗುವುದಿಲ್ಲ. ಹೀಗೆ ಶಾಸನ ಸಭೆಯ 50 ಮಂದಿ ಕಾಂಗ್ರೆಸ್ಸಿಗರಲ್ಲಿ ಮೂವತ್ತು ಮಂದಿ ಪಕ್ಷನಾಯಕರಲ್ಲಿ ನಿಜವಾದ ವಿಶ್ವಾಸವುಳ್ಳವರೆಂದೂ ಉಳಿದ ಇಪ್ಪತ್ತು ಮಂದಿ ಮೇಲೆ ಅವಿಶ್ವಾಸವನ್ನು ತೋರಿಸದಿದ್ದರೂ ಆಂತರ್ಯದಲ್ಲಿ ಅವಿಶ್ವಾಸಿಗಳೆಂದೂ ಇಟ್ಟು ಕೊಳ್ಳೋಣ. ಶಾಸನ ಸಂಸ್ಥೆಯಲ್ಲಿ ವರ ಪರೀಕ್ಷೆಗೆ ಸಮಯ ಬಂದಾಗ ಈ ಇಪ್ಪತ್ತು ಮಂದಿ ಅವಿಶ್ವಾಸಿ ಕಾಂಗ್ರೆಸ್ಸಿಗರು ಕಾಂಗ್ರೆಸ್ಸಿಗರೇ ಅಲ್ಲದ ಇಪ್ಪತ್ತು ಮಂದಿಯೊಡನೆ ಸೇರಿಕೊಂಡು (ವೋಟ್) ಇಷ್ಟಮುದ್ರೆ ಕೊಟ್ಟರೆ ಆಗ ಮಂತ್ರಿಸಂಪುಟ ಎದ್ದು

ಹೋಗಬೇಕಾಗುತ್ತದೆ. ಇಂಥಾ ವಿಷಮ ಸಂಭವವು ಆಗಂತುಕನಾಗದೆ ಹಿಂದಿನ ಚುನಾವಣೆಯ ಜಯದಿಂದ ಶಾಸನ ಸಂಸ್ಥೆಗೆ ಬಂದಿರುವ ಮುಖ್ಯಮಂತ್ರಿಯ ಕಾಲದಲ್ಲಿ ಬಹು ಕಡಮೆಯಾಗಿರುತ್ತದೆ. ಅಂಥಾ ಸಂಭವದ ಅಪಾಯವನ್ನು ಸರಕಾರಕ್ಕೆ ಕಡಮೆ ಮಾಡುವುದು ಎಲ್ಲ ದೃಷ್ಟಿಗಳಿಂದಲೂ ಕರ್ತವ್ಯವಾಗಿರುತ್ತದೆ. (ii) ಪ್ರಜಾ ಪ್ರಾತಿನಿಧ್ಯವನ್ನು ಸಂಪಾದಿಸದೆ ಇರುವ ಯಾರೋ ಒಬ್ಬನು ಬಲಾತ್ಕಾರದಿಂದ ತಮ್ಮೊಳಕ್ಕೆ ನುಗ್ಗಿಸಲ್ಪಟ್ಟಿದ್ದಾನೆಂಬ ಅಸಮಾಧಾನವು ವಿಹಿತ ಕ್ರಮದಲ್ಲಿ ಪ್ರತಿನಿಧಿಗಳಾಗಿರುವ ಶಾಸಕರಲ್ಲಿ ಹುಟ್ಟುವುದು ಅಸ್ವಾಭಾವಿಕವಲ್ಲ. ಇಂಥಾ ಅಸಮಾಧಾನಕ್ಕೆ ಅವಕಾಶವುಂಟುಮಾಡಿದರೆ ಮಂತ್ರಿಸಂಪುಟಕ್ಕೆ ಹಾನಿ: ಮಂತ್ರಿಸಂಪುಟ ಭದ್ರವಾಗಿಲ್ಲದಿದ್ದರೆ ಸರಕಾರದ ಆಡಳಿತಗಳು ವ್ಯವಸ್ಥೆ ತಪ್ಪಿಯಾವು. ಇಂಥಾ ಅಪಾಯವನ್ನು ಸಾಧ್ಯವಿರುವ ಮಟ್ಟಿಗೂ ಕಡಮೆ ಮಾಡಬೇಕಾದರೆ ಸಾಮಾನ್ಯ ಮಂತ್ರಿಗಳಿಗಿರುವ ವಿನಾಯತಿಯನ್ನು ಮುಖ್ಯಮಂತ್ರಿಗೆ ಅನ್ವಯಿಸಬಾರದು.

(2) ಆಗಂತುಕ ಮಂತ್ರಿಯು ಶಾಸಕ ಸದಸ್ಯತ್ವವನ್ನು ಆರು ತಿಂಗಳೊಳಗಾಗಿ ಸಂಪಾದಿಸಿಕೊಂಡರೆ ಸಾಕೆಂಬುದಲ್ಲವೆ ವಿನಾಯತಿ? ಮುಖ್ಯಮಂತ್ರಿಯೂ ಆ ವಿನಾಯತಿಗೊಳಪಟ್ಟು ನೇಮಕವಾಗಿದ್ದಾನೆಂದಿಟ್ಟುಕೊಳ್ಳೋಣ. ಅವನು ನೇಮಕವಾದ ಬಳಿಕ ಎರಡು ತಿಂಗಳಿಗೋ ಮೂರು ತಿಂಗಳಿಗೋ ಶಾಸನ ಸಭೆಯಲ್ಲಿ ಒಂದು ಸ್ಥಾನ ಹೇಗೋ ಖಾಲಿಯಾಗುತ್ತದೆ. ಅಥವಾ ಖಾಲಿ ಮಾಡಲ್ಪಡುತ್ತದೆ ಎಂದೂ. ಆ ಸ್ಥಾನಕ್ಕೆ ಈ ಆಗಂತುಕ ಮುಖ್ಯಮಂತ್ರಿಯು ಅಭ್ಯರ್ಥಿಯಾಗಿ ನಿಂತುಕೊಳ್ಳುತ್ತಾನೆ ಎಂದೂ ಇಟ್ಟುಕೊಳ್ಳೋಣ. ಈ ಚುನಾವಣೆಯಲ್ಲಿ ಅವನು ಜಯಶಾಲಿಯಾದರೆ ಎಲ್ಲ ಸರಿಹೋಗುತ್ತದೆ. ಆದರೆ ಅವನಿಗೆ ಜಯವುಂಟೇ ಉಂಟೆಂದು ಭರವಸೆ ಕೊಡಬಲ್ಲವರು ಯಾರು? ಅವನಿಗೆ ಅಪಜಯವಾದರೆ ಆ ಕೂಡಲೇ ಮಂತ್ರಿಸಂಪುಟ ಮತ್ತೆ ಅತಂತ್ರವಾಗುತ್ತದೆ: ಅದು ಪುನರ್ನಿರ್ಮಿತವಾಗಬೇಕಾಗುತ್ತದೆ. ರಾಜಪ್ರಮುಖರು ಇನ್ನೊಂದು ಸಲ ಮುಖ್ಯಮಂತ್ರಿಗಾಗಿ ಹುಡುಕಾಡಬೇಕಾಗುತ್ತದೆ. ಇದು ಪ್ರಗತಿಸಾಧಕವಾದ ಸರಕಾರಕ್ಕೆ ದಾರಿಯಲ್ಲ.

ಮಂತ್ರಿಸಂಪುಟ ಪದೇ ಪದೇ ಬದಲಾವಣೆಯಾಗುವುದು ದೇಶಜನದ ದೃಷ್ಟಿಯಿಂದ ಹಿತಕರವೇನೂ ಅಲ್ಲ. ಬದಲಾವಣೆಗೆ ಅವಕಾಶವಿರುವುದು ಸುಲಕ್ಷಣವೇ ಹೊರತು ಆ ಅವಕಾಶವು ತಿಂಗಳು ತಿಂಗಳೂ ಪ್ರಯೋಗಕ್ಕೆ ಬರುವುದು ಸುಲಕ್ಷಣವಲ್ಲ. ಬದಲಾವಣೆಯೆಂಬುದು ದಂಡನೆ. ದಂಡನೆಯೆಂದರೆ ದೋಷಪ್ರದರ್ಶನ. ಸರಕಾರವು ತಪ್ಪು ಮಾಡುವುದು, ಪೆಟ್ಟು ತಿನ್ನುವುದು—ಇದಿಷ್ಟನ್ನೇ ಮಾಡುತ್ತಿದ್ದರೆ ಒಳ್ಳೆಯದನ್ನು ಮಾಡುವುದಕ್ಕೆ ಅದಕ್ಕೆ ಹೊತ್ತೆಲ್ಲಿ? ಭೇದಿಯ ಔಷಧ ಸಿದ್ಧವಾಗಿದೆಯೆಂದು ದಿನ ಬಿಟ್ಟು ದಿನ ಅಜೀರ್ಣ ಮಾಡಿಕೊಳ್ಳಬಹುದೇ?

ಸಾಮಾನ್ಯವಾಗಿ ನಾಲ್ಕು ವರ್ಷಕ್ಕೋ ಐದು ವರ್ಷಕ್ಕೋ ಒಂದುಸಲ ಶಾಸನ ಸಂಸ್ಥೆ ಬದಲಾಯಿಸತಕ್ಕದ್ದೆಂದು ರಾಜ್ಯನಿಬಂಧನೆ ಗೊತ್ತುಮಾಡಿರುತ್ತದೆ. ಶಾಸನ

ಸಂಸ್ಥೆ ಬದಲಾಯಿಸಿದಾಗ ಮಂತ್ರಿಸಂಪುಟ ಬದಲಾಯಿಸತಕ್ಕದ್ದು ಸಹಜ. ಸಂಸ್ಥೆ ಸಂಪುಟಗಳೆರಡೂ ದೇಶಾಭಿಪ್ರಾಯದಲ್ಲಿ ಆಗುವ ಬದಲಾವಣೆಗಳಿಗೆ ಅನುಗುಣವಾಗಿ ಬದಲಾಗುವುದು ನ್ಯಾಯ. ಅದರ ಹೊರತು ಮಧ್ಯೇ ಮಧ್ಯೇ ಶಾಸಕ ಸಂಸ್ಥೆಯ ಅಪನಂಬಿಕೆ ಅಸಮಾಧಾನಗಳ ಕಾರಣದಿಂದ ಮಂತ್ರಿಸಂಪುಟವು ಅಧಿಕಾರ ಭ್ರಷ್ಟ ವಾಗುವುದು ರಾಜಕೀಯದಲ್ಲಿಯ ಪ್ರತಿಪಕ್ಷಿವರ್ಗಕ್ಕೆ ತೃಪ್ತಿಕೊಟ್ಟೀತೇ ಹೊರತು ಜನಾಂಗಕ್ಕೆ ಲಾಭವಾಗಲಾರದು.

ಹೇಗೆ ನೋಡಿದರೂ ಮುಖ್ಯಮಂತ್ರಿ ಸ್ಥಾನಕ್ಕೆ ಆ ಸ್ಥಾನವನ್ನು ಭರ್ತಿಮಾಡುವ ದಿವಸ ಶಾಸಕ ಸಂಸ್ಥೆಯಲ್ಲಿಲ್ಲದಂಥ ಆಗಂತುಕನನ್ನು ನಿಯಮಿಸುವುದು ಸುಸಂಗತ ವಾಗಲಾರದು.

ಇದು ತತ್ತ್ವದೃಷ್ಟಿಯ ವಾದ. ಆದರೆ ನಮ್ಮ ಪ್ರಪಂಚದಲ್ಲಿ ಒಂದು ಕಡೆ ವ್ಯವಹಾರ ಶಕ್ತಿಗಳ ಒತ್ತಾಯಕ್ಕೂ ಇನ್ನೊಂದು ಕಡೆ ತತ್ತ್ವ ಸಿದ್ಧಾಂತಕ್ಕೂ ತಕರಾರು ಹುಟ್ಟಿಕೊಂಡರೆ, ಆಗ ತತ್ತ್ವ ಮೂಲೆಗೆ ಸರಿದು ಹಟದ ಹೊಡೆತ ಮುನ್ನುಗ್ಗುವುದು ಎಲ್ಲರಿಗೂ ಅನುಭವವಾಗಿರುವ ಸಂಗತಿ. ಆದರೂ ತತ್ತ್ವ ವೆಂಬುದೊಂದುಂಟೆಂಬುದನ್ನೂ ಅದರ ಸ್ವರೂಪವೆಂಥದೆಂಬುದನ್ನೂ ಜನ ತಿಳಿದು ಕೊಂಡಿದ್ದಾರೆ. ಅದು ಕಾಲಕ್ರಮದಲ್ಲಿಯಾದರೂ ಫಲಕ್ಕೆ ಬಂದೀತು.

(ಜನವರಿ 3, 1951)

# ನಮ್ಮ ಸಾಹಿತ್ಯದ ಬೆಳವಣಿಗೆ*

**ಜನಸತ್ತ್ವ**

ಇಂದಿಗೆ 28 ವರ್ಷಗಳ ಹಿಂದೆ ರಾಯಚೂರಿನಲ್ಲಿ ಕರ್ಣಾಟಕ ಸಾಹಿತ್ಯ ಸಮ್ಮೇಳನ ನಡೆಯಿತಷ್ಟೆ? ಈ ಪ್ರದೇಶದ ಜನಕ್ಕೆ ಸಾಹಿತ್ಯ ವಿಷಯದಲ್ಲಿರುವ ಅಭಿಮಾನೋತ್ಸಾಹಗಳನ್ನು ಆಗ ನಾನು ಕಣ್ಣಾರ ಕಂಡೆ. ರಾಯಚೂರು ಆಗ ಬೆಂಗಳೂರಿಗೆ ಈಗಿಗಿಂತ ದೂರವಾಗಿತ್ತು,–ಬೇರೊಂದು ರಾಜ್ಯವೇ ಆಗಿತ್ತು. ನನ್ನ ಪಾಲಿಗೆ ಪ್ರಪಂಚಕೇಂದ್ರವೆನಿಸಿದ್ದ ಬೆಂಗಳೂರಿನಿಂದ ಇಷ್ಟೊಂದು ದೂರವಾದ ಕಡೆ, —ವಿದ್ಯಾವೈದುಷ್ಯದ ಹೆಗ್ಗುರುತುಗಳು ಅಷ್ಟು ಹೆಚ್ಚಾಗಿ ಕಾಣಿಸದಿದ್ದ ಕಡೆ.—ಜನಕ್ಕೆ ಅಷ್ಟೊಂದು ಭಾಷಾಭಿಮಾನವೂ ಸಾಹಿತ್ಯೋತ್ಸಾಹವೂ ನೈಜವಾಗಿದ್ದದ್ದನ್ನು ಕಂಡು ನನ್ನೆದೆ ಹಿಗ್ಗಿತು. ಕನ್ನಡದ ಸೇವಕರಿಗೆ ನಮ್ಮ ಇಲ್ಲಿಯ ಅನುಭವದಿಂದ ಧೈರ್ಯಬಂತು. ಈ ಇಪ್ಪತ್ತೆಂಟು ವರ್ಷಗಳಲ್ಲಿ ರಾಯಚೂರಿನ ಸಾಹಿತ್ಯೋತ್ಸಾಹ ಸಂತತವಾಗಿ ಬೆಳೆದು ಇಂದಿನ ಘನರೂಪವನ್ನು ತಾಳಿರುವುದು ಇಲ್ಲಿಯ ಜನಕ್ಕೆ ಕೀರ್ತಿಕರವಾಗಿರುವುದು ಮಾತ್ರವಲ್ಲ. ಅದು ಸಮಸ್ತ ಕನ್ನಡದ ಅಭಿಮಾನಿಗಳಿಗೂ ಪ್ರೋತ್ಸಾಹಕರವಾದ ಸಂಗತಿ.

ನಿಮ್ಮೂರಿನ ಕರ್ಣಾಟಕ ಸಂಘದ ಬೆಳವಣಿಗೆಯಲ್ಲಿ ನನ್ನ ಕಣ್ಣಿಗೆ ಒಂದು ವಿಶೇಷಾಂಶ ಕಾಣಬರುತ್ತಿದೆ. ಈ ಸಂಘ ಬಹುಮಟ್ಟಿಗೆ ಮಹಾಜನ ಪ್ರಯತ್ನದ ಫಲ. ಅದರಲ್ಲಿ ಸರಕಾರದ ಭಾಗ ತೀರ ಕೊಂಚದ್ದು. ಎಲ್ಲಿ ಜನ ತಮಗೆ ಬೇಕಾದ ಸಂಸ್ಥೆ ಸೌಕರ್ಯಗಳನ್ನು ಸ್ವಪ್ರಯತ್ನದಿಂದ ಸಂಪಾದಿಸಿಕೊಳ್ಳುತ್ತಾರೋ,—ಎಲ್ಲಿ ಅವರು ಸರಕಾರದ, ಅಥವಾ ಶಾಸನಾಂಗದ, ಅಥವಾ ಪೌರಸಭೆಯ ಕೈತುತ್ತಿಗೆ ಬಾಯಿಬಿಟ್ಟುಕೊಂಡು ಕುಳಿತಿರದೆ,—ತಮ್ಮ ಸಂಘಟನ ಶಕ್ತಿಯಿಂದ ತಮಗೆ ಬೇಕಾಗಿರುವ ಸಂಸ್ಕೃತಿ ಸಾಧನಗಳನ್ನೂ ಸಾಮಾಜಿಕ ಸೌಕರ್ಯಗಳನ್ನೂ ನಿರ್ಮಿಸಿಕೊಳ್ಳುತ್ತಾರೋ ಅಲ್ಲಿಯವರು ದೇಶಕ್ಕೆ ಜೀವಚೈತನ್ಯದ ಭರವಸೆಯನ್ನು ಕೊಡುತ್ತಾರೆ.

---

* ಪ್ರಾಸ್ತಾವಿಕ ಭಾಷಣ: ಕರ್ಣಾಟಕ ಸಂಘ, ರಾಯಚೂರು. ಇವರು 1962, ಏಪ್ರಿಲ್ 29 ರಂದು ನಡಸಿದ ರಜತಮಹೋತ್ಸವ ಸಂದರ್ಭದಲ್ಲಿ.

ಲೋಕದ ಹೋರಾಟವಲ್ಲಿ ನಿಂತು ಬಾಳುವ ಸಾಮರ್ಥ್ಯ ಈ ಜನಪದಕ್ಕೆ ಉಂಟೆಂಬುದು ಅವರು ಸಾಧಿಸಿದ ಜಯದಿಂದ ಸ್ಪಷ್ಟಪಡುತ್ತದೆ. ಜನಸತ್ತ್ವವೇ ದೇಶಕ್ಕಿರುವ ಮೂಲಧನ. ಜನಸತ್ತ್ವವೇ ಸಾಹಿತ್ಯಕ್ಕೆ ಸ್ಫೂರ್ತಿಸ್ಥಾನ. ಸಾಹಿತ್ಯ ಬೆಳೆದು ಶೋಭಿಸಬೇಕೆಂಬ ಮನೋಗತವುಳ್ಳವರು ಮೊದಲು ಜನಸತ್ತ್ವದ ಅಭಿವೃದ್ಧಿಗೆ ಗಮನ ಕೊಡಬೇಕು.

ಇದೇ ಈ ದಿವಸ ನಾನು ತಮ್ಮಲ್ಲಿ ವಿಶೇಷವಾಗಿ ಅರಿಕೆಮಾಡಬೇಕೆಂದಿರುವ ಮಾತು. ನಮ್ಮ ದೇಶದ ಇಂದಿನ ಜೀವನಕ್ಕೆ ಯಾವ ಒಂದು ತತ್ತ್ವ ಅತ್ಯಂತ ಮುಖ್ಯವಾದದ್ದೆಂದು ನನ್ನ ಮನಸ್ಸಿಗೆ ನಂಬಿಕೆ ಬಂದಿದೆಯೋ ಆ ತತ್ತ್ವವನ್ನು ವಿಸ್ತರಿಸಲು ಈ ಹೊತ್ತಿನ ಸಂದರ್ಭ ಯುಕ್ತವಾದದ್ದೆಂದು ನನಗೆ ತೋರುತ್ತದೆ. ಈ ಅವಕಾಶವನ್ನೊದಗಿಸಿದ್ದಕ್ಕಾಗಿ ರಾಯಚೂರಿನ ಕರ್ಣಾಟಕ ಸಂಘಕ್ಕೆ ನನ್ನ ವಂದನೆಗಳು ಸಲ್ಲುತ್ತವೆ.

## ಪುನರುಜ್ಜೀವನದ ಆದಿ

ಈಗ್ಗೆ 60 ವರ್ಷಗಳ ಹಿಂದೆ ಕನ್ನಡದಲ್ಲಿ ಸಾಹಿತ್ಯ ರಚನೆ ಎಂಥಾ ಸ್ಥಿತಿಯಲ್ಲಿತ್ತು, ಅದಕ್ಕೆ ಜನದ ಪುರಸ್ಕಾರ ಎಷ್ಟುಮಾತ್ರ ಇತ್ತು—ಎಂಬುದು ನನಗೆ ಜ್ಞಾಪಕದಲ್ಲಿ ವಿಶದವಾಗಿದೆ. ಎಲ್ಲ ಭಾಷೆಗಳ ಚರಿತ್ರೆಯಲ್ಲಿರುವಂತೆ ಕನ್ನಡದ ಚರಿತ್ರೆಯಲ್ಲಿಯೂ ಸಾಹಿತ್ಯ ನದಿ ಕೆಲವು ಕಾಲ ತುಂಬಿ ಹರಿದಿದೆ, ಕೆಲವು ಕಾಲ ಬಡಬಡಕಲಾಗಿ ಹರಿದಿದೆ. 1880ರಲ್ಲಿ ಮೈಸೂರು ರಾಜ್ಯ ಪುನರುಜ್ಜೀವಿತವಾಗಿ ಶ್ರೀ ಚಾಮರಾಜೇಂದ್ರ ಒಡೆಯರವರು ಪಟ್ಟಕ್ಕೆ ಬಂದಾಗ, ನಮ್ಮ ಸಾಹಿತ್ಯಕ್ಕೂ ಇನ್ನೊಂದು ಪುನರುಜ್ಜೀವನ ಯೋಗ ಬಂತು. ಅವರ ಮುಖ್ಯಮಂತ್ರಿ ರಂಗಾಚಾರ್ಯರು, ಬಸವಪ್ಪ ಶಾಸ್ತ್ರಿಗಳೇ ಮೊದಲಾದ ವಿದ್ವತ್ಕವಿಗಳಿಂದ ಶಾಕುಂತಲ ಮೊದಲಾದ ಪ್ರಸಿದ್ಧ ಸಂಸ್ಕೃತ ಕೃತಿಗಳನ್ನು ಕನ್ನಡಕ್ಕೆ ಪರಿವರ್ತನೆ ಮಾಡಿಸಿದರು. ವಿದ್ವದ್ಗಾಯಕರಿಂದ ಗೇಯ ಕೃತಿಗಳನ್ನು ರಚನೆಮಾಡಿಸಿದರು. ಹಾಗೆಯೇ ಆಗ್ಗತಾನೆ ಯೂನಿವರ್ಸಿಟಿಗಳಿಂದ ತಯಾರಾಗಿ ಬಂದ ಇಂಗ್ಲಿಷ್ ವಿದ್ಯಾವಂತರಲ್ಲಿ ಮೊದಮೊದಲಿನವರು ಷೇಕ್ಸ್‌ಪಿಯರ್ ಮೊದಲಾದ ಆಂಗ್ಲ ಮಹಾಕವಿಗಳ ಕೃತಿಗಳನ್ನು ಕನ್ನಡಕ್ಕೆ ರೂಪಾಂತರ ಮಾಡಿಕೊಟ್ಟರು ; ನಾನಾ ವಿಜ್ಞಾನ ಶಾಸ್ತ್ರಗಳನ್ನೂ ಇಂಗ್ಲಿಷಿನಿಂದ ಕನ್ನಡಿಗರಿಗೆ ಗ್ರಂಥರೂಪದಲ್ಲಿ ದೊರಕಿಸಿದರು. ಹೀಗೆ ಮತ್ತೊಂದು ನವಯುಗ ಪ್ರಾರಂಭವಾಯಿತು.

ಆದರೆ ಜನಸಾಮಾನ್ಯದ ದೃಷ್ಟಿ ಆ ಕಾಲದಲ್ಲಿ ಇಂಗ್ಲಿಷಿನ ಕಡೆಗೆ ಹೆಚ್ಚಾಗಿತ್ತು. ಇಂಗ್ಲಿಷು ಸರಕಾರಕ್ಕೆ ಬೇಕಾಗಿದ್ದ ಭಾಷೆ ; ಚಾಕರಿ ದೊರಕಿಸುವ ಭಾಷೆ ; ಹೊಸ ಹೊಸ ಕಸಬುಗಳಿಗೆ ದಾರಿತೋರಿಸುವ ಭಾಷೆ ; ನೂತನ ಚಮತ್ಕಾರಗಳನ್ನು ಕಲಿಸುವ ಭಾಷೆ ; ಹಣ ಕೊಡುವ ಭಾಷೆ. ಹೀಗೆ ವಿದ್ಯಾಭ್ಯಾಸದಲ್ಲಿ ಮುಖ್ಯಸ್ಥಾನ ಸಂದದ್ದು ಇಂಗ್ಲಿಷಿಗೆ. ಅದು ಆಗಿನ ಜನದ ಮನೋವೃತ್ತಿ. ಅದನ್ನು ನಾವು ಆಕ್ಷೇಪಣೆ ಮಾಡತಕ್ಕದ್ದಲ್ಲ. ಅಂದಿನ ಸಂದರ್ಭದಲ್ಲಿ ಅದು ಸ್ವಾಭಾವಿಕವಾಗಿದ್ದದ್ದೂ ಹೌದು,

ಯುಕ್ತವಾಗಿದ್ದದ್ದೂ ಹೌದು. ನಮ್ಮ ಜನವನ್ನು ಇಂದಿನ ಜಗಜ್ಜೀವನಕ್ಕೆ ಸಿದ್ಧ ಪಡಿಸಲು ಅವರ ಬುದ್ಧಿಗೂ ಮನಸ್ಸಿಗೂ ಆಗ ಬೇಕಾಗಿದ್ದ ನವೀಕರಣ ಕಾರ್ಯ ಒಂದಿತ್ತು. ಆ ಕಾರ್ಯವನ್ನು ಅಗವಾಡಿಸುವ ಸಾಮರ್ಥ್ಯ ಇದ್ದದ್ದು ಇಂಗ್ಲಿಷಿಗೆ. ಆದರಿಂದ ನಮಗೆ ಆಗಿರುವ ಉಪಕಾರಗಳನ್ನು ಮುಖ್ಯವಾಗಿ ಮೂರು ಅಧಿಕರಣ ಗಳಲ್ಲಿ ಸಂಗ್ರಹಿಸಬಹುದು: ಮೊದಲನೆಯದಾಗಿ, ಇಂಗ್ಲಿಷು ನಮಗೆ ಮಿಕ್ಕ ಪ್ರಪಂಚದ ಜ್ಞಾನವಿಜ್ಞಾನಗಳನ್ನೂ. ಕಾರ್ಯಸಂಧಾನಗಳನ್ನೂ ತಿಳಿಸಿಕೊಟ್ಟಿದೆ; ಎರಡನೆಯದಾಗಿ. ಅದು ನಮ್ಮ ಸಾಮಾಜಿಕ ಭಾವನೆಗಳನ್ನು ವಿಸ್ತಾರಪಡಿಸಿದೆ: ಮೂರನೆಯದಾಗಿ, ಅದು ನಮ್ಮ ಬುದ್ಧಿಕಾರ್ಯಕ್ಕೆ ಹೊಸ ಸಾಮಗ್ರಿಯನ್ನೂ ಹೊಸ ಪ್ರೇರಣೆಗಳನ್ನೂ ತಂದುಕೊಟ್ಟಿದೆ. ಈ ತೆರನಾದ ಅಂತರಂಗ ನವೀಕರಣ ಮತ್ತು ವಿಕಾಸನ ನಮಗೆ ಅತ್ಯವಶ್ಯವಿತ್ತು. ಅದನ್ನು ಇಂಗ್ಲಿಷು ಮಾಡಿಸಿತು. ಆದದ್ದರಿಂದ ಇಂಗ್ಲಿಷಿಗಾಗಿ ನಾವು ವಿನಿಯೋಗಿಸಿದ ಕಾಲಕ್ಕಾಗಿಯೂ ಶ್ರದ್ಧೆಗಾಗಿಯೂ ಈಗ ವಿಷಾದಪಡಬೇಕಾದ ಕಾರಣವೇನಿಷ್ಟೂ ಇಲ್ಲ.

"ಇಂಗ್ಲಿಷಿನಿಂದ ನಾವು ಸಂಪಾದಿಸಿಕೊಳ್ಳಬೇಕಾಗಿದ್ದದ್ದು ಈಗ ತಕ್ಕಮಟ್ಟಿಗೆ ನಮಗೆ ಕೈವಶವಾಗಿದೆ; ಇನ್ನು ಅದರ ಪ್ರಯೋಜನವನ್ನು ಜನಸಾಮಾನ್ಯಕ್ಕೆ ದೊರಕಿಸಬೇಕಾದ ಕಾಲ ಬಂದಿದೆ"—ಎಂದು ದೇಶ ನಾಯಕರಿಗೆ ತೋರಿದಾಗ ಹುಟ್ಟಿತು ಕರ್ಣಾಟಕ ಸಾಹಿತ್ಯ ಪರಿಷತ್ತು. ಅದು ವಿಶ್ವೇಶ್ವರಯ್ಯನವರು ದಿವಾನರಾದ ಬಳಿಕ,—ರಂಗಾಚಾರ್ಯರ ದಿನದಿಂದ ಮುವ್ವತ್ತೈದು ವರ್ಷವಾದ ಮೇಲೆ. ಪರಿಷತ್ತಿಗೆ ಮುಂಚೆ ಅಂಥಾ ಪ್ರಯತ್ನ ನಡೆದಿರಲಿಲ್ಲವೆಂದಲ್ಲ. ಮೈಸೂರಿನ ಭಾಷೋಜ್ಜೀವಿನೀ ಸಭೆ, ಧಾರವಾಡದ ವಿದ್ಯಾವರ್ಧಕ ಸಂಘ ಮೊದಲಾದ ಸಂಸ್ಥೆಗಳು ಅಲ್ಲಲ್ಲಿ ನಡೆಸುತ್ತಿದ್ದ ಪ್ರಯತ್ನಗಳನ್ನು ಶೇಖರವಾಡಿ, ಏಕಾಕಾರದಲ್ಲಿ ಉಪಯೋಗ ಪಡಿಸಬೇಕೆಂಬುದು ಪರಿಷತ್ತಿನ ಸ್ಥಾಪಕರಲ್ಲಿದ್ದ ಯೋಜನೆ. ಪರಿಷತ್ತಿನ ಉದ್ದೇಶಗಳು ವಿಶ್ವವಿಸ್ತಾರವಾಗಿ, ಬಹುಮುಖವಾಗಿದ್ದವು. ಆ ಸಂಸ್ಥೆ ತನ್ನ ಮಿಕ್ಕೆಲ್ಲ ಧ್ಯೇಯಗಳಿಗಿಂತ ಜನಪ್ರಬೋಧನೆಗೆ ಹೆಚ್ಚು ಗಮನ ಕೊಟ್ಟದ್ದು ಯುಕ್ತವಾಗಿಯೇ ಇದೆ. ಸಮರ್ಥ ರಾದ ಲೇಖಕರು ಸಿದ್ಧರಾಗುತ್ತಿದ್ದರೆಂಬುದು ಕಾಣಬರುತ್ತಿತ್ತು: ಅವರ ಲೇಖನಗಳನ್ನು ಆದರಿಸಲು ಜನವನ್ನು ಸಿದ್ಧಪಡಿಸುವ ಕಾರ್ಯ ಉಳಿದಿತ್ತು. ಪರಿಷತ್ತು ಈ ಕರ್ತವ್ಯವನ್ನು ವಹಿಸಿಕೊಂಡಿತು. ಅದರೊಡನೆ ಸಹಕರಿಸಲು ದೇಶದ ನಾನಾ ಭಾಗಗಳಲ್ಲಿ ಕರ್ಣಾಟಕ ಸಂಘಗಳೂ ಇತರ ವಿಧದ ಸಾಹಿತ್ಯ ಸಂಸ್ಥೆಗಳೂ ಹುಟ್ಟಿ ಕೊಂಡವು. ಕಳೆದ 30–40 ವರ್ಷಗಳನ್ನು ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಉತ್ಸಾಹ ಯುಗವೆಂದು ಕರೆಯಬಹುದು.

ಈಗ ಜನಕ್ಕೆ ತಮ್ಮ ಭಾಷೆಯ ವಿಷಯದಲ್ಲಿ ಅಕ್ಕರೆ ಉಕ್ಕಿ ಬಂದಿದೆ. ಸರಕಾರವು ಜನಭಾಷೆಗೆ ಪ್ರಥಮಸ್ಥಾನ ಕೊಡಬೇಕಾದದ್ದು ಅನಿವಾರ್ಯವಾಗಿದೆ. ವಿದ್ಯಾಪ್ರಾಚುರ್ಯವೂ ಬೆಳೆಯುತ್ತಿದೆ. ಓದುವವರ ಸಂಖ್ಯೆ ಹೆಚ್ಚುತ್ತಿದೆ. ಗ್ರಂಥ ಗಳೂ ಹೊಸ ಹೊಸದಾಗಿ ಬಗೆಬಗೆಯಾಗಿ ಹುಟ್ಟುತ್ತಿವೆ. ಎತ್ತ ತಿರುಗಿದರೂ

ಅಭಿವೃದ್ಧಿಯ ಲಕ್ಷಣಗಳು ಕಾಣಬರುತ್ತಿವೆ. ಹಾಗಾದರೆ ಸಾಹಿತ್ಯ ಸೇವಕರು ಕೃತಕೃತ್ಯರಾದಂತೆ ತಾನೆ ? ಅವರು ಈಗ ನಿಶ್ಚಿಂತರಾಗಬಹುದಲ್ಲ ?

ಹಾಗಲ್ಲವೆಂದು ನನ್ನ ವಿನಂತಿ. ಅವರ ಚಿಂತೆ ಈಗ ಕೊನೆಗಾಣುವುದಕ್ಕೆ ಬದಲಾಗಿ ಈಗತಾನೆ ಮೊದಲಾಗಬೇಕಾಗಿದೆ ಎಂದು ನನ್ನ ಅಭಿಪ್ರಾಯ. ಕೈಕೂಸಿನ ಊಟಕ್ಕೆ ಹೆಚ್ಚು ಪಾಕ–ಪರಿಕರಣೆ ಬೇಕಿಲ್ಲ. ಅದು ತಾಯಿ ತಿನ್ನಿಸಿದ್ದನ್ನು ಸೇರಿದಷ್ಟು ತಿನ್ನುತ್ತದೆ, ಸಾಕೆನ್ನಿಸಿದರೆ ಉಗಿದುಬಿಡುತ್ತದೆ. ಸಿಹಿಯನ್ನು ಬಿಟ್ಟರೆ ಉಳಿದ ರುಚಿ ಅದಕ್ಕೆ ಹಿಡಿಸಲಾರದು. ಬೆಳೆದ ಮಗುವಿಗಾದರೋ ರುಚಿ ಘಮಲುಗಳ ಪಾಂಡಿತ್ಯ ದಿನೇ ದಿನೇ ಬೆಳೆಯುತ್ತಿರುತ್ತದೆ ; ಇದು ಬೇಕು, ಅದು ಬೇಡ ;—ಅದು ಬೇಕು, ಇದು ಬೇಡ—ಎಂಬ ಹಟ ಪ್ರಬಲಿಸುತ್ತದೆ. ಅದು ಈ ಭಕ್ಷ್ಯವೋ ಆ ಭೋಜ್ಯವೋ ಬೇಕೆಂದಾಗ ತಿಳಿಯಬರುತ್ತದೆ ನಮ್ಮ ಉಗ್ರಾಣದ ಬಡತನ, ಮತ್ತು ನಮ್ಮ ಪಾಕಶಾಲೆಯ ಅರೆಕೊರೆ. ಸಾಹಿತ್ಯಕರ್ತರಿಗೆ ಈಗ ಅಂಥಾ ಪರೀಕ್ಷಾ ಸಮಯ ಬರುತ್ತಿದೆ. ನಾವು ಏನು ಬರೆದಿಟ್ಟರೂ ಅದನ್ನು ಜನ ಓದಿ ತೃಪ್ತಿಪಡುತ್ತಿದ್ದ ಕಾಲ ಮುಗಿಯಿತು. "ಇನ್ನೂ ಏನೇನಿದೆ ನಿಮ್ಮ ಭಂಡಾರದಲ್ಲಿ ?"—ಎಂದು ಅವರು ಕೇಳುವ ಕಾಲ ಸಮೀಪಿಸುತ್ತಿದೆ. ಜಾಣೆಯಾದ ತಾಯಿ ಅಡಿಗೆಯಲ್ಲಿ ಯೋಚಿಸುವುದು ಮಗುವಿನ ರುಚಿಯನ್ನಾದರೂ, ರುಚಿ ಮಾತ್ರವನ್ನೇ ಅಲ್ಲ ; ಮಗುವಿಗೆ ಪುಷ್ಟಿ ಯಾವುದರಿಂದ ? ಆರೋಗ್ಯ ಯಾವುದರಿಂದ ? —ಇದನ್ನೂ ಆಕೆ ಆಲೋಚಿಸುತ್ತಾಳೆ. ಸಾಹಿತ್ಯ ಕರ್ತನು ಆಕೆಯಂತೆ ವಿಚಾರ ಮಾಡಬೇಕು, ಜನಕ್ಕೆ ರುಚಿಸುವುದು ಯಾವುದು ? ಹಿತಕರ ಯಾವುದು ? ಹಿತಕರವಾದದ್ದನ್ನು ರುಚಿಕರವನ್ನಾಗಿ ಮಾಡುವುದು ಹೇಗೆ ? ಇವು ಸಾಹಿತ್ಯಕರ್ತನು ಎದುರಿಸಬೇಕಾಗಿರುವ ಪ್ರಶ್ನೆಗಳು. ಅವುಗಳನ್ನು ಕೊಂಚ ಬಿಚ್ಚಿ ನೋಡೋಣ.

## ಸಾಹಿತ್ಯ ಜನದ ಮನಸ್ಸು

ಒಂದು ದೇಶದ ಜನತೆಯನ್ನೂ ಅದರ ಸಾಹಿತ್ಯವನ್ನೂ ಕುರಿತು ನಾವು ಎಂದಿಗೂ ಮರೆಯಬಾರದಾದ ತತ್ತ್ವ ಒಂದಿದೆ. ಜನತೆಯ ಮನಸ್ಸೇ ಸಾಹಿತ್ಯ ; ಸಾಹಿತ್ಯವೆಂದರೆ ಜನತೆಯ ಮನಸ್ಸು.

ಮನಸ್ಸು ಸಾಮಾನ್ಯವಾಗಿ ಎರಡು ಅಂತಸ್ತುಗಳಲ್ಲಿ ಕೆಲಸ ಮಾಡುತ್ತದೆ : ಒಂದು ದಿನಚರಿಯದು ; ಇನ್ನೊಂದು ವಿಶೇಷ ಸಮಯದ್ದು. ಭಾಷೆಯೂ ಹಾಗೆಯೇ. "ತರೋಣ ತೆರೋಣ ತಿಂಬೋಣ, ಮಲಗೋಣ, ಮತ್ತೇಳೋಣ"—ಇದು ಒಂದಂತಸ್ತು. "ನನ್ನಿಂದ ನಾನೇ ಜನಿಸಿ ಬಂದೆನೇ ದೇವ ?"—ಇದು ಇನ್ನೊಂದಂತಸ್ತು. ಈ ಎರಡನೆಯ ಅಂತಸ್ತಿನ ಮನಃಕಾರ್ಯವೇ ಸಾಹಿತ್ಯ. ಮೊದಲನೆಯ ವರ್ಗದ್ದು ಮನೆಮಾತು—ಬೀದಿಮಾತು.

ನಮ್ಮ ಅಂತರಂಗಗಳ ಆಳದ ಮಟ್ಟಗಳ ಪ್ರತಿಧ್ವನಿಯೇ ಹಾಡು, ಪದ್ಯ, ಕಥೆ, ನಾಟಕ. ಅದೇ ಇತಿಹಾಸ ಚರಿತ್ರೆ, ವಿಚಾರೋಪನ್ಯಾಸ, ವಿಮರ್ಶನ ಪ್ರಬಂಧ.

ಈ ನಾನಾ ರಚನೆಗಳಲ್ಲಿ ಜನದ ಜೀವಗತಿಯು ಪ್ರತಿಬಿಂಬಿಸಿರುತ್ತದೆ. ಅವರಿಗಿರುವ ಸಂತತವಾದ ಚಿಂತೆಗಳು, ಅವರಿಗೆ ಪದೇ ಪದೇ ಆಗುತ್ತಿರುವ ಮನೋವಿಕಾರಗಳು,—ಆಶೆಗಳು, ಕೊರಗುಗಳು, ರೋಷಗಳು, ಪ್ರೀತಿಗಳು, ಉತ್ಸಾಹಗಳು, ನಿರಾಶೆಗಳು, ಜುಗುಪ್ಸೆಗಳು, ಪುನರುದ್ಯಮಗಳು, ಪುನರ್ನಿರೀಕ್ಷೆಗಳು, ನಂಬಿಕೆಗಳು, ಧ್ಯೇಯಗಳು—ಹೀಗೆ ಮನಸ್ಸು ಬುದ್ಧಿಗಳ ಅಂತರಾಳದಲ್ಲಿ ಹುದುಗಿಕೊಂಡಿರುವ ಎಲ್ಲ ಭಾವ ವಿಭಾವಗಳೂ ಅವರಿಗಾಗಿ ಹುಟ್ಟಿದ ಸಾಹಿತ್ಯದಲ್ಲಿ,—ಅವರು ಮೆಚ್ಚಿ ಓದುವ ಗ್ರಂಥಗಳಲ್ಲಿ—ರೂಪುಗೊಂಡಿರುತ್ತವೆ. ಒಂದು ಪುಸ್ತಕ ಒಬ್ಬ ಮನುಷ್ಯನಿಗೆ ಪ್ರಿಯವಾಯಿತೆಂದರೆ ಆ ಮನುಷ್ಯನಿಗೆ ಬೇಕಾಗಿದ್ದ ಯಾವುದೋ ಒಂದು ತಿಳಿವಳಿಕೆ, ಅಥವಾ ಅವನಿಗೆ ಇಷ್ಟವಾದ ಒಂದಾನೊಂದು ಅನುಭವ, ಆ ಪುಸ್ತಕದಲ್ಲಿ ಅವನಿಗೆ ದೊರೆಯಿತು ಎಂದರ್ಥ. ಗ್ರಂಥದ ಯಾವುದೋ ಗುಣ, ಯಾವುದೋ ದೃಷ್ಟಿ, ಯಾವುದೋ ಸಂಗತಿ, ಅವನ ಮನಸ್ಸನ್ನು ಹಿಡಿದಿರಬೇಕು. ಅದರಿಂದಲೇ ಅವನು ಆ ಗ್ರಂಥಕ್ಕೆ ಅಷ್ಟು ಬೆಲೆ ಕೊಡುತ್ತಾನೆ. ಈ ಸರ್ವಾನುಭವದಿಂದ ಹೊರಡುವ ಸಿದ್ಧಾಂತ ಇಷ್ಟು: ಸಾಹಿತ್ಯವು ಜನತೆಯ ಜೀವಿತಾಶಯಕ್ಕೆ ಕೈಗನ್ನಡಿ; ಜನತೆಯ ಜೀವಿತಾಶಯಗಳು ಸಾಹಿತ್ಯಕ್ಕೆ ಮೂಲ ಸಾಮಗ್ರಿ. ಅವೆರಡೂ ಅನ್ಯೋನ್ಯ ಕಾರ್ಯಕಾರಣಗಳು.

ಈ ತತ್ತ್ವದ ಬೆಳಕಿನಲ್ಲಿ ನಮ್ಮ ಕಳೆದ ಐವತ್ತು ವರ್ಷಗಳ ಚರಿತ್ರೆ ಹೇಗೆ ಕಾಣುತ್ತದೆ? ಸಂಗ್ರಹವಾಗಿ ನೋಡೋಣ.

## ಗ್ರಂಥಾಭಿವೃದ್ಧಿ

ಕನ್ನಡದಲ್ಲಿ ಈಗ ಗ್ರಂಥಾಭಿವೃದ್ಧಿಯಾಗುತ್ತಿರುವುದರ ಸಂಖ್ಯಾಪರಿಮಾಣವನ್ನು ನೋಡಿದರೆ, ನಾವು ಅತೃಪ್ತಿಪಡುವಂತಿಲ್ಲ. 1934ರ ಸುಮಾರಿನಲ್ಲಿ ಸರಾಸರಿ ತಿಂಗಳೊಂದಕ್ಕೆ 10–11 ಪುಸ್ತಕಗಳು ಪ್ರಕಟವಾಗುತ್ತಿದ್ದವು. ಈಚಿನ ಲೆಕ್ಕಗಳು ನನಗೆ ದೊರೆತಿಲ್ಲ. ಈಗ ತಿಂಗಳು ತಿಂಗಳೂ ಬಹುಶಃ 15–20 ಪುಸ್ತಕಗಳು ಹೊರಬೀಳುತ್ತಿರಬಹುದೆಂದು ನನ್ನ ಅಂದಾಜು,—ಎರಡು ದಿನಕ್ಕೊಂದರಂತೆ, ಅಥವಾ ಮೂರು ದಿನಕ್ಕೆರಡರಂತೆ. ಇದು ಹೆಚ್ಚೆಂದು ನಾನು ವಾದಿಸುವವನಲ್ಲ. ಸಂಖ್ಯಾಭಿವೃದ್ಧಿ ಬೇಕಾದದ್ದೇ. ಆದರೆ ಅದಕ್ಕಿಂತ ಮುಖ್ಯವಾಗಿ ಬೇಕಾದದ್ದು ವಿಷಯ ವೈವಿಧ್ಯ; ಅದಕ್ಕಿಂತ ಮುಖ್ಯವಾದದ್ದು ಗ್ರಂಥಗುಣ.

ಸಾಹಿತ್ಯವೆಂದೊಡನೆ ಸಾಮಾನ್ಯಜನದ ಮನಸ್ಸಿಗೆ ತೋರುವುದು ಕಥೆ, ನಾಟಕ, ಪದ್ಯ—ಇಂಥಾ ಮನೋರಂಜನೆಯ ಪ್ರಸಂಗಗಳು. ಅದು ಸ್ವಾಭಾವಿಕ. ಸಾಮಾನ್ಯರಿಗೆ ಮೊದಲು ಬೇಕಾದದ್ದು ವಿನೋದ; ಅದಾದಮೇಲೆ ಬೋಧೆ. ನಾವು ವಿಚಾರಮಾಡಿ ನೋಡಿದ್ದಾದರೆ, ಸಾಹಿತ್ಯ ಶಬ್ದದ ಅರ್ಥ ಇನ್ನೂ ವಿಶಾಲವಾದದ್ದೆಂದು ತೋರುತ್ತದೆ. ನಾನು ತಿಳಿದುಕೊಂಡಿರುವ ಮಟ್ಟಿಗೆ—ಯಾವ ವಾಕ್ಯಸರಣಿಯಿಂದ ಕೇಳಿದವನ ಅಥವಾ ಓದಿದವನ ಹೃದಯಕ್ಕೆ ಒಂದು ಹಿತಾನುಭವವೋ, ಅವನ ಬುದ್ಧಿಗೆ

ಒಂದು ಬೆಳಕೋ, ಅವನ ಜೀವಕ್ಕೆ ಒಂದು ಸತ್ತ್ವಚೋದನೆಯೋ ಉಂಟಾಗುತ್ತದೆಯೋ ಅದು ಸಾಹಿತ್ಯ. ಆ ಲಾಭವು ಪುರಾಣದಿಂದ ಆಗಬಹುದು ; ಕಾದಂಬರಿಯಿಂದ ಆಗಬಹುದು ; ಹಾಡಿನಿಂದ ಆಗಬಹುದು ; ಸಂವಾದದಿಂದ ಆಗಬಹುದು ; ಚರಿತ್ರೆಯಿಂದ ಆಗಬಹುದು ; ಸಮಾಜ ವರ್ಣನೆಯಿಂದ ಆಗಬಹುದು ; ವಸ್ತುವಿಜ್ಞಾನದಿಂದ ಆಗಬಹುದು ; ತತ್ತ್ವಾನ್ವೇಷಣೆಯಿಂದ ಆಗಬಹುದು : ವಿಷಯಸಾಮಗ್ರಿ ಯಾವುದಾದರೇನು ? ನಮಗೆ ಮುಖ್ಯವಾದದ್ದು ಹೃದಯರಸ ಪರಿಪಾಕ,—ಬುದ್ಧಿ ಪರಿಶುದ್ಧಿ,—ಜೀವಸಂಸ್ಕಾರ.

ಲೋಕದಲ್ಲಿ ಜೀವಿಗಳ ಅಂತರಂಗ ರಚನೆಗಳು ಸಾವಿರಾರು ವಿಧವಲ್ಲವೆ ? ಒಂದೊಂದು ಜೀವದ ಅಭಿರುಚಿ ಒಂದೊಂದು ಬಗೆ ; ಒಂದೊಂದು ಜೀವದ ಜೀರ್ಣಶಕ್ತಿ ಒಂದೊಂದು ಬಗೆ. ಆದದ್ದರಿಂದ ಸಾಹಿತ್ಯವು ಒದಗಿಸತಕ್ಕ ಭೋಜನ ಪಾನಕಗಳು ನೂರಾರು ಬಗೆಯವಾಗಿರಬೇಕು. ಹೀಗೆ ಸಾಹಿತ್ಯವು ನಾನಾ ವಿಷಯಗಳನ್ನಾಶ್ರಯಿಸಿ, ನಾನಾ ಪ್ರಕಾರಗಳಲ್ಲಿ ರೂಪುಗೊಳ್ಳುತ್ತದೆ. ಅವುಗಳಲ್ಲಿ ಮುಖ್ಯವಾದ ಕೆಲವು ಜಾತಿಗಳಲ್ಲಿ ಕನ್ನಡದ ಸೊಂಪುಪೆಂಪುಗಳು ನಮ್ಮ ಕಾಲದಲ್ಲಿ ಎಷ್ಟೆಷ್ಟು ಮಾತ್ರ ನಡೆದಿವೆ ? ನೋಡೋಣ. ಕಾವ್ಯಾದಿ ಜಾತಿಯನ್ನು ಪ್ರತ್ಯೇಕ ಪರಿಶೀಲನೆಗಾಗಿ ಕಡೆಗಿರಿಸಿಕೊಂಡು. ಈಗ ಇತರ ಸಾಹಿತ್ಯ ಜಾತಿಗಳನ್ನು ನೋಡೋಣ.

**ಚರಿತ್ರೆ** : ಪ್ರಪಂಚದ ನಾನಾ ಜನಾಂಗಗಳ ಚರಿತ್ರೆಯೂ ಅವುಗಳ ಮಹಾಪುರುಷರ ಜೀವನ ಚರಿತ್ರೆಗಳೂ ಮಾನವ ಜೀವನದ ಪ್ರತ್ಯಕ್ಷ ಕಾವ್ಯ. ಅದರಲ್ಲಿ ಮನೋವೇಧಕ ಸನ್ನಿವೇಶಗಳೂ ಬುದ್ಧಿಶೋಧಕ ಸನ್ನಿವೇಶಗಳೂ ಅಡಿಗಡಿಗೂ ಸಿಕ್ಕುತ್ತವೆ. ಹೀಗಿದ್ದರೂ ಕನ್ನಡದಲ್ಲಿ ಚರಿತ್ರೆಯ ಸಾಹಿತ್ಯ ಇಲ್ಲವೇ ಇಲ್ಲವೆನ್ನಬಹುದು. ಗ್ರೀಸಿನ ಚರಿತ್ರೆಯಿಲ್ಲ ; ರೋಮಿನ ಚರಿತ್ರೆಯಿಲ್ಲ, ಸಮಗ್ರವಾದ ಬ್ರಿಟನ್ನಿನ ಚರಿತ್ರೆಯಿಲ್ಲ ; ಇಂಡಿಯದ ಚರಿತ್ರೆಯೇ ಪಠ್ಯಪುಸ್ತಕಕ್ಕಿಂತ ಮೇಲಣ ದರ್ಜೆಯದಿಲ್ಲ.

**ಸಮಾಜ ವರ್ಣನೆ** : ನಾನಾ ದೇಶಗಳ ನಾನಾ ಮನುಷ್ಯ ಸಮಾಜಗಳ ಆಚಾರ ವ್ಯವಹಾರಕ್ರಮಗಳು, ಹಬ್ಬಗಳು, ವ್ರತಗಳು, ಮತವಿಶ್ವಾಸಗಳು, ಜನನ ಮರಣಕಾಲಗಳ ಸಂಪ್ರದಾಯಗಳು, ಪಾತಕ ಪ್ರಾಯಶ್ಚಿತ್ತವಿಧಿಗಳು, ಕುಲವ್ಯವಸ್ಥೆಗಳು —ಇವೆಲ್ಲ "ಸೋಷಿಯಾಲಜಿ" ಎಂಬ ಸಮಾಜ ಪದ್ಧತಿಯ ವಿಜ್ಞಾನದ ಅಂಶಗಳು. ಆ ವಿಜ್ಞಾನವು ಕುತುಕಕಾರಿಯಾದದ್ದು ಮತ್ತು ವಿಚಾರಪ್ರೇರಕವಾದದ್ದು. ಈ ದೊಡ್ಡ ಸಾಹಿತ್ಯಜಾತಿ ಕನ್ನಡದಲ್ಲಿ ಸದ್ಯಃ ಇಲ್ಲವೇ ಇಲ್ಲವೆನ್ನಬಹುದು.

**ನ್ಯಾಯ ತತ್ತ್ವ** : ಇದು ಜೂರಿಸ್‌ಪ್ರೂಡೆನ್ಸ್ ಎಂಬ ವ್ಯವಹಾರ ನಿರ್ಣಯದ ಮೂಲಾಧಾರ ಶಾಸ್ತ್ರ. ಇದೇ ಎಲ್ಲ ಕಾನೂನು ಕಟ್ಟಲೆಗಳಿಗೂ ತಳಹದಿಯಾದದ್ದರಿಂದ ಲಾಯರುಗಳಿಗೆ ಅತ್ಯಂತ ಉಪಯುಕ್ತವಾದದ್ದು. ರಾಜ್ಯವೆಂಬುದು ಶಾಸನವಶವರ್ತಿಯಾಗಿರತಕ್ಕದ್ದಾದ ಕಾರ್ಯ, ಎಲ್ಲ ರಾಜಕೀಯಸ್ಥರಿಗೂ ಇದು ಪ್ರಥಮ ಪಾಠವಾಗಬೇಕಾದದ್ದು. ಹೀಗಿದ್ದರೂ ಕನ್ನಡದಲ್ಲಿ ಈ ಶಾಸ್ತ್ರವನ್ನು ಕುರಿತು ಗ್ರಂಥ ಹುಟ್ಟಿಲ್ಲ.

**ರಾಜ್ಯಶಾಸ್ತ್ರ :** ಗ್ರಂಥ ಸಾಲದೆಂಬುದು ಈ ಶಾಸ್ತ್ರಕ್ಕೂ ಅನ್ವಯಿಸುತ್ತದೆ.

**ಅರ್ಥಶಾಸ್ತ್ರ :** ನಮ್ಮ ಕಾಲಕ್ಕೆ ಇದು ಅತ್ಯಂತ ಮಹತ್ತ್ವವುಳ್ಳದ್ದಾದರೂ ಕನ್ನಡದಲ್ಲಿ ಇದನ್ನು ಕುರಿತ ಗ್ರಂಥಗಳು ಇನ್ನೂ ಅವಶ್ಯವಾದಷ್ಟು ಬಹುವಾಗಿಲ್ಲ.

**ಇತರ ಸಮಾಜ ವಿಜ್ಞಾನಗಳು:** ಇಲ್ಲೊಂದು ಅಲ್ಲೊಂದು ಲಘು ಗ್ರಂಥವನ್ನು ಬಿಟ್ಟರೆ ಯಾವ ಸಮಾಜ ವಿಜ್ಞಾನಶಾಸ್ತ್ರವನ್ನೂ ಸಮಗ್ರವಾಗಿ ನಿರೂಪಿಸುವ ಗ್ರಂಥ ಕನ್ನಡದಲ್ಲಿಲ್ಲ.

**ಪ್ರಕೃತಿ ವಿಜ್ಞಾನ:** ಜಗದ್ವಸ್ತುಗಳ ರೂಪರಚನೆಗಳನ್ನು ವಿವರಣೆ ಮಾಡುವ, ಮತ್ತು ಇಂದಿನ ಜಗತ್ತಿನಲ್ಲಿ ಅತಿ ಪ್ರಶಸ್ತವಾಗಿರುವ. ಭೌತಶಾಸ್ತ್ರ, ರಸಾಯನ ಶಾಸ್ತ್ರಗಳಲ್ಲಿಯಾಗಲಿ ಜೈವಶಾಸ್ತ್ರ ದೈಹಿಕಶಾಸ್ತ್ರಗಳಲ್ಲಿಯಾಗಲಿ ಸ್ಕೂಲು ಮಟ್ಟಕ್ಕೆ ಮೀರಿದ ವಿಸ್ತಾರ ಗ್ರಂಥಗಳು ಕನ್ನಡದಲ್ಲಿ ಇನ್ನೂ ತಕ್ಕಷ್ಟು ಹುಟ್ಟಿಲ್ಲ. ಅಲ್ಲೊಬ್ಬರು ಇಲ್ಲೊಬ್ಬರು ಉತ್ಸಾಹಿಗಳು ಒಂದೆರಡು ಪುಸ್ತಕಗಳನ್ನು ಬರೆದಿದ್ದಾರೆ. ಅದು ಎಷ್ಟು ಮಾತ್ರವೂ ಸಾಲದು.

**ಜೀವ ಜೀವನ ಮೀಮಾಂಸೆ:** ಇದು ಇಂಗ್ಲಿಷಿನ ಫಿಲಾಸಫಿ ಎಂಬುದು, —ಭೌತಾತೀತ ವಸ್ತುವನ್ನು ಕುರಿತದ್ದು—"ಮೆಟಫಿಸಿಕ್ಸ್." ಜೀವ ಎಂದರೆ ಏನು ? ಜೀವಕ್ಕೂ ಜಗತ್ತಿಗೂ ಸಂಬಂಧ ಹೇಗಿರುತ್ತದೆ ? ಜೀವನದ ಆಶಯವೇನು ? ಇವೇ ಮೊದಲಾದ ಮೂಲತತ್ತ್ವ ಪ್ರಶ್ನೆಗಳನ್ನು ಸ್ವತಂತ್ರ ದೃಷ್ಟಿಯಿಂದ ವಿವೇಚಿಸುವ ಗ್ರಂಥಗಳೂ ಕನ್ನಡದಲ್ಲಿಲ್ಲ. ವೇದವೇದಾಂತಾದಿ ಮತಗಳನ್ನೂ, ಜೈನಬೌದ್ಧಾದಿ ಮತಗಳನ್ನೂ. ಶೈವ-ವೈಷ್ಣವಾದಿಗಳನ್ನೂ ಅವಲಂಬಿಸಿದ ತತ್ತ್ವ ಗ್ರಂಥಗಳು ಕನ್ನಡ ದಲ್ಲಿ ಹೇರಳವಾಗಿವೆ. ಅವೇ ನಮ್ಮ ಪೂರ್ವಸಾಹಿತ್ಯದ ಅಧಿಕ ಭಾಗ. ಆದರೆ ನಾವು ಕೋರುತ್ತಿರುವುದು ಸ್ವತಂತ್ರ ಮಿಮಾಂಸೆಯನ್ನು—ಆಧುನಿಕ ವಿಜ್ಞಾನಾದಿ ಶಾಸ್ತ್ರಗಳ ದೃಷ್ಟಿಯಿಂದ ನಡೆದ ಮಿಮಾಂಸೆಯನ್ನು. ಇದು ಸದ್ಯಕ್ಕೆ ಇಲ್ಲದ್ದು.

ಪ್ರಕೃತಿ ವಿಜ್ಞಾನವೂ ಸಮಾಜ ವಿಜ್ಞಾನ ಪ್ರಪಂಚದಲ್ಲಿ ಈಗ ಶಾಖೋಪ ಶಾಖೆಗಳಾಗಿ ಒಡೆದು, ಅಸಂಖ್ಯೇಯ ಮುಖಗಳಿಂದ ಅನಂತವಾಗಿ ಮುಂದೆ ಸಾಗುತ್ತಿವೆ. ಅವು ಸಾಹಿತ್ಯಕ್ಷೇತ್ರದೊಳಕ್ಕೆ ಬರಬೇಕಾದವಲ್ಲವೆ ? ವಿಜ್ಞಾನಾದಿ ವಾಸ್ತವ ಪ್ರಪಂಚಕ್ಕೂ ಕಾವ್ಯಾದಿ ಕಾಲ್ಪನಿಕ ಪ್ರಪಂಚಕ್ಕೂ ಸಂಬಂಧವೇನೆಂದು ಯಾರಾದರೂ ಕೇಳುವುದಾದರೆ, ಅವರು ಮೊದಲೇ ನಾನು ಅರಿಕೆಮಾಡಿದ ತತ್ತ್ವವನ್ನು ಜ್ಞಾಪಕಕ್ಕೆ ತಂದುಕೊಳ್ಳಬೇಕು : ಜನಸತ್ತ್ವವೇ ಸಾಹಿತ್ಯದ ಜೀವಾಳ. ಜನತೆಯ ಜೀವನದಲ್ಲಿ ಒಂದು ಪುಷ್ಟಿಯೂ ಒಂದು ಚೈತನ್ಯವೂ ತುಂಬಿ ತುಳುಕಾಡುತ್ತಿದ್ದರೆ ಆಗ ಅದು ಕಾವ್ಯಕಥಾನಿರ್ಮಿತಿಗೆ ಸ್ಫೂರ್ತಿ ಕೊಡಬಲ್ಲದ್ದಾಗುತ್ತದೆ. ಜನತೆಯ ಜೀವನ ಕಳೆ ಕಳಿಸಿದರೆ ಆದರ ಸಾಹಿತ್ಯದಲ್ಲಿ ಕಾಂತಿ ತುಂಬುತ್ತದೆ. ಜನಜೀವನದ ಪುಷ್ಟಿ ವಿಕಾಸ ಗಳಿಗೆ ಸಾಧಕವಾದುವು ಚರಿತ್ರೇತಿಹಾಸಗಳು ಮತ್ತು ವಿಜ್ಞಾನ ಶಾಸ್ತ್ರಗಳು. ಬುದ್ಧಿ

ಸಾಹಸ, ಮನೋವಿಸ್ತಾರ,—ಹೊಸ ಅನ್ವೇಷಣೆ, ಹೊಸ ಆಲೋಚನೆ—ಇವು ಜೀವಿತ ಪ್ರಗತಿಯ ಲಕ್ಷಣಗಳು. ಜನಸಾಮಾನ್ಯದಲ್ಲಿ ಅವು ಹರಡಿದ್ದಷ್ಟೂ ಕಾವ್ಯಾದಿ ಕಲ್ಪನಸಾಹಿತ್ಯಕ್ಕೆ ಪ್ರಚೋದನೆ ಹೆಚ್ಚಾಗಿರುತ್ತದೆ. ಆದದ್ದರಿಂದ ಒಳ್ಳೆಯ ಕಾವ್ಯ ಸಾಹಿತ್ಯ ಬೇಕೆನ್ನುವವರು ಮೊದಲು ಆ ತೋಟದ ನೆಲಹರವಿನಲ್ಲಿ ಕೃಷಿ ಮಾಡಬೇಕು. ಜನಸಾಮಾನ್ಯದ ಬುದ್ಧಿ ಮನಸ್ಸುಗಳು ಆ ನೆಲಹರವು.

## ಕಲ್ಪನ ಸಾಹಿತ್ಯ

ಈಗ ಕಲ್ಪನ ಸಾಹಿತ್ಯಕ್ಕೆ ಹೋಗೋಣ. ಆ ಸಾಹಿತ್ಯವನ್ನು ಪ್ರಯೋಜನಕ್ಕೆ ಅನುಸಾರವಾಗಿ ಮೂರು ಮೆಟ್ಟಲುಗಳಲ್ಲಿ ಭಾವಿಸಬಹುದು :

(1) ಮನೋರಂಜಕ ;
(2) ವಿಚಾರಪ್ರೇರಕ ;
(3) ಜೀವೋದ್ಧಾರಕ.

ಈ ಸೋಪಾನವೃಷ್ಟಿಯು ಸಂಗೀತ, ಮೂರ್ತಿಚಿತ್ರಣ ಮೊದಲಾದ ಎಲ್ಲ ಕಲಾನಿರ್ಮಿತಿಗಳಿಗೂ ಅನ್ವಯಿಸುತ್ತದೆ.

ಮನೋರಂಜನೆಯ ಕೃತಿ ಒಂದು ಘಳಿಗೆಯ ವಿನೋದದ್ದು ; ಒಂದು ದಿವಸದ ಉಲ್ಲಾಸದ್ದು. ಅದು ನಮ್ಮ ದಿನಂಪ್ರತಿಯ ಊಟದ ಹಾಗೆ. ದಿನದಿನವೂ ಅಂದಂದಿನ ರುಚಿ ಘಮಲುಗಳು ನಾಲಗೆಯ ಮೇಲಿರುವಾಗ—ಏನು ಸೊಗಸು !—ಅನ್ನಿಸುತ್ತವೆ. ಮಾರನೆಯ ದಿನ ಅದೇ ಶಾಕಪಾಕವೆಂದರೆ ಅಷ್ಟು ಸೊಗಸೆನಿಸುವುದಿಲ್ಲ. ನಾಳೆಯ ಭೋಜನವಾದ ಮೇಲೆ ಇಂದಿನ ಸವಿಗಳು ನೆನಪಿನಲ್ಲಿ ಉಳಿದಿರುವುದಿಲ್ಲ. ಹೀಗೆ ರುಚಿ ತಾತ್ಕಾಲಿಕ ಮಾತ್ರದ್ದಾದರೂ ಊಟ ಬೇಡವೆನ್ನುವಂತಿಲ್ಲ. ನಿತ್ಯದ ಊಟ ದಿಂದಲೇ ಜೀವ ; ನಿತ್ಯದ ಮನೋರಂಜನೆಯಿಂದಲೇ ಅಂತರಂಗಕ್ಕೆ ಜೀವನ ಸಹನೆ.

ವಿಚಾರಪ್ರೇರಕ ಸಾಹಿತ್ಯದಲ್ಲಿ ಮನೋರಂಜನೆಯ ಜೊತೆಗೆ ಇನ್ನೊಂದು ಗುಣ ಸೇರಿಕೊಂಡಿರುತ್ತದೆ. ಅದು ವಿವೇಚನ ಶಕ್ತಿಯನ್ನು ಎಚ್ಚರಗೊಳಿಸುವ ಗುಣ. ಸಂತಸದಿಂದ ಚಿಂತೆಯ ಕಡೆಗೆ ಅದರ ಪ್ರಯಾಣ. ಕಥೆಯ ಯಾವುದೋ ಘಟನೆ,—ಮಾತಿನ ಯಾವುದೋ ಮರ್ಮ,—ನಮ್ಮ ಮನಸ್ಸಿನಲ್ಲಿ ಚಿಂತೆಯ ಅಲೆಯನ್ನೆಬ್ಬಿಸುತ್ತದೆ. ಬಸವಪ್ಪ ಶಾಸ್ತ್ರಿಗಳ ಶಾಕುಂತಲದಲ್ಲಿ ಬೆಸ್ತರವನು ಹಾಡಿ ಕೊಂಡು ಬರುತ್ತಾನಲ್ಲವೆ ಹೀಗೆ :

ಪೋಗಿ ನಾಂ ಮೀನ್ಗಳನೆಲ್ಲ ಮಾರೆ
ಹಾಗವನಲ್ಲದೆ ಕಾಣಲಾರೆ
ಈಗಲೀ ಮುದ್ರಿಕೆ ಕೈಯ ಸೇರೆ
ಭೋಗ ದೇವೇಂದ್ರನು ನಾನು ಬೇರೆ ॥

ಈ ಸಂತಸದ ಹಾಡಿನ ಹೊಟ್ಟೆಯಲ್ಲಿದೆ ಒಂದು ಚಿಂತೆ. ಕಾಳಿದಾಸನ ಮೇಘ ಸಂದೇಶ ಈ ಜಾತಿಯ ಸಾಹಿತ್ಯ. ಷೇಕ್ಸ್‌ಪಿಯರನ ಸಾನೆಟ್ ಪದ್ಯಗಳು ಇಂಥವು. ಶುಂಠಿಯ ಚೂರು ಬೆರೆತ ಸೂಪಾನ್ನ ಈ ಪಾಕ.

ಇನ್ನೂ ಮೇಲಣ ಜಾತಿಗೆ ಸೇರಿದ ಜೀವನೋದ್ಧಾರಕ ಸಾಹಿತ್ಯದಲ್ಲಿಯೂ ಮನೋರಂಜನೆ ಇದ್ದೇ ಇರುತ್ತದೆ. ಚಿಂತಾ ಪ್ರೇರಣೆಯೂ ಇರುತ್ತದೆ. ಅವೆರಡರ ಜೊತೆಗೆ ಒಂದು ಜೀವೋನ್ನತಿಯ ದರ್ಶನವೂ ಸೇರಿಕೊಂಡಿರುತ್ತದೆ. ರಾಮಾಯಣ ಭಾರತಗಳು ಇಂಥವು ; ಮ್ಯಾಕ್‌ಬೆತ್ ಹ್ಯಾಮ್ಲೆಟ್‌ಗಳು ಇಂಥವು. ಇದು ಔತಣದ ಮೃಷ್ಟಾನ್ನವೇನೋ ಹೌದು ; ಅದರೆ ಅದರೊಳಗೆ ಮೆಣಸು, **ಜೀರಿಗೆ, ಶುಂಠಿ** ಮೊದಲಾದ ಔಷಧ ಸಾಮಗ್ರಿಯೂ ಕಣ್ಣಿಗೆ ಕಾಣಬಾರದಂತೆ **ಬೆರೆತುಕೊಂಡಿರುತ್ತದೆ;** ಮತ್ತು ಕೇಸರಿ, ಪಚ್ಚಕರ್ಪೂರ, ಚಿನ್ನ, ಮುತ್ತು ಮೊದಲಾದ ಪುಷ್ಟಿವರ್ಧಕ ವಸ್ತುಗಳೂ ಇರುತ್ತವೆ.

ಕೇವಲ ಮನೋರಂಜಕ ಸಾಹಿತ್ಯವು ಜೀವವನ್ನು ಬಹಿರ್ಮುಖವನ್ನಾಗಿ ಮಾಡುತ್ತದೆ. ಜೀವನೋದ್ಧಾರಕ ಸಾಹಿತ್ಯವು ಜೀವವನ್ನು ಅಂತರ್ಮುಖ ಮಾಡುತ್ತದೆ. ಅದರಿಂದ ಜೀವೋತ್ಕರ್ಷ,—ಜೀವನ ಪರಿಪೂರ್ಣತೆ. ಇಂಥಾ ಕಾವ್ಯವೇ ಸಾಹಿತ್ಯದ ಶಿಖರಾಗ್ರ.

ರಷ್ಯಾ ದೇಶದ ಬೋಲ್ಷೆವಿಕ್ ರಾಜಕೀಯಸ್ಥರು ದೈವಮತದಲ್ಲಿ ಸಹನೆ ಯಿಲ್ಲದವರು. ಮತವೆಂಬುದು ಜನತೆಗೆ (Dope) ಅಮಲು ಕುಡಿತ : ಅದು ಅವರಿಗೆ ಭಕ್ತಿಯ ಮತ್ತನ್ನೇರಿಸಿ. ಅವರನ್ನು ನಿಷ್ಕ್ರಿಯರನ್ನಾಗಿ ಮಾಡುತ್ತದೆ— ಎಂದು ಅವರು ವಾದಿಸುತ್ತಿದ್ದರಂತೆ. ನಮ್ಮಲ್ಲಿ ಈಚೀಚೆಗೆ ಕಾವ್ಯವೆಂಬುದು ಅಮಲು ಕುಡಿತವೆಂಬಂಥ ಭಾವನೆ ಹರಡುತ್ತಿದೆ. ಬುದ್ಧಿಗೆ ಪ್ರಯಾಸ ಕೊಡುವ ವಿಚಾರಗಳನ್ನು ದೂರಬಿಟ್ಟು. ಪದ ಪದ್ಯ ಹಾಡಿಕೊಂಡು ಹಾ—ಹೋ—ಗುಟ್ಟುವುದೇ ಸಾಹಿತ್ಯ ವ್ಯಾಸಂಗವೆಂದೆಣಿಸುವುದು ಸಾಮಾನ್ಯವಾಗುತ್ತದೆ. ನಾನು ಆ ಪಂಥವನ್ನನು ಸರಿಸಿದವನಲ್ಲ. ನನ್ನ ಪಾಲಿಗೆ ಕಾವ್ಯ ಹೂವಿನ ಹಾರ ಮಾತ್ರವಲ್ಲ, ಅದು ಉರಿಯುವ ಪಂಜೂ ಹೌದು. ಕಾವ್ಯ ತರುವ ಆಪ್ಯಾಯನಕ್ಕೆ ನಿದ್ರೆಯಲ್ಲಲ್ಲ ಪರ್ಯವಸಾನ, ಅದು ಪೌರುಷವಲ್ಲಿ. ಕಾವ್ಯ ಸೌಖ್ಯವು ಸಾತ್ತ್ವಿಕವಾದ ಪಕ್ಷಕ್ಕೆ ಅದು—ಗೀತೆಯಲ್ಲಿ ಹೇಳಿರುವಂತೆ—

"ಆತ್ಮಬುದ್ಧಿಪ್ರಸಾದಜಮ್"

ಆಗಿರಬೇಕು. ಅದರಿಂದ ಆತ್ಮವಿವೇಕವೂ ಕರ್ತವ್ಯಾಕರ್ತವ್ಯ ವಿವೇಕವೂ ಮನಸ್ಸಿನಲ್ಲಿ ಹೊಳೆದು, ಅದರಿಂದ ಜೀವಿತ ಕರ್ಮ ಚೋದನೆ ಬರಬೇಕು. ಶ್ರೇಷ್ಠವರ್ಗದ ಕಾವ್ಯವು ಮಾದನದ್ರವ್ಯವಲ್ಲ, ಅದು ಶೋಧನದ್ರವ್ಯ ಮತ್ತು ಚೋದನದ್ರವ್ಯ.

ನಮ್ಮ ಕಾಲದ ಕಾವ್ಯಸಾಹಿತ್ಯವನ್ನು ಕುರಿತು ಪ್ರಸ್ತಾವಿಸುವುದು ನನ್ನಂಥವನಿಗೆ ಸಾಹಸದ ಕಾರ್ಯವೆಂಬುದು ಸ್ಪಷ್ಟವಾಗಿದೆ. ಮೊದಲು, ಗಾಜಿನ ಮನೆಯಲ್ಲಿರು

ವವನು ಇತರರ ಮೇಲೆ ಕಲ್ಲೆಸೆಯಬಾರದೆಂಬ ಉಪದೇಶವಿದೆ. ಎರಡನೆಯದಾಗಿ, ಕಾವ್ಯ ಕಲಾಕೃತಿಗಳ ಯೋಗ್ಯತಾವಿಚಾರದಲ್ಲಿ ಪ್ರತಿಯೊಬ್ಬನಿಗೂ ಅವನವನ ಅಂತ ಸ್ಸಾಕ್ಷ್ಯವೇ ಮುಖ್ಯ ; ಬಹಿಸ್ಸಾಕ್ಷ್ಯ ಅಷ್ಟು ಮುಖ್ಯವಲ್ಲ. ಮೂರನೆಯದಾಗಿ. ಸಮಾನಕಾಲದ ಮೌಲ್ಯನಿರ್ಣಯಕ್ಕಿಂತ ದೂರಕಾಲದ್ದು ಬಲವತ್ತರವಾದದ್ದು. ಕಾಳಿದಾಸನನ್ನು ಕುರಿತು ಸಮಕಾಲೀನರು ಯಾವ ಅಭಿಪ್ರಾಯವಿಟ್ಟುಕೊಂಡಿದ್ದರೋ ನಮಗೆ ಗೊತ್ತಿಲ್ಲ. ಕ್ರಿಸ್ತ ವರ್ಷ 962 ರವರು ಮೆಚ್ಚಿಕೊಂಡಿದ್ದರೆ ಅದು ಸ್ಥಿರ ಪಡುತ್ತಿರುವುದು 1962 ರವರ ಮೆಚ್ಚಿಕೆಯಿಂದ : ಸಾವಿರ ವರ್ಷದ ಪ್ರಮಾಣಪ ಮುಂದೆ ಹತ್ತಿಪ್ಪತ್ತು ವರ್ಷದ ಮಾತಿಗೆ ಬೆಲೆಯಿರದು ; ವಿಷಯದ ಸ್ವಭಾವವೇ ಹೀಗಿರುವುದರಿಂದ ನನ್ನ ಪ್ರಯತ್ನದಲ್ಲಿ ಯಾರ ಕಾಲ್ಬೆರಳ ಮೇಲಾದರೂ ನನ್ನ ಹೆಜ್ಜೆಯಿಳಿದರೆ, ಅದು ನನ್ನಿಂದ ಉದ್ದೇಶಪೂರ್ವಕವಾಗಿ ಆದದ್ದಲ್ಲವೆಂಬುದನ್ನು ಕೃಪೆ ಮಾಡಿ ಗ್ರಹಿಸಬೇಕು.

## ಪೂರ್ವಸಿದ್ಧತೆ

ಸಾಹಿತ್ಯದ ಗುಣ ಜನದ ಅಂತರಂಗಸಿದ್ಧತೆಗೆ ಅನುಗುಣವಾಗಿರತಕ್ಕದ್ದು. ಮಹಾ ಸಾಹಿತ್ಯ ಬೇಕಾದರೆ ಜನತೆ ಮಹಾ ಸಿದ್ಧತೆಯನ್ನು ಮಾಡಿಕೊಳ್ಳಬೇಕು. ಭಗವಂತನ ಪ್ರಸಾದ ಭಕ್ತನ ನಿಷ್ಠೆಗೆ ಪ್ರತ್ಯುತ್ತರ. ಸಾಹಿತ್ಯದ ಪ್ರಸಾದ ಜನದ ತಪಸ್ಸಿಗೆ ಪ್ರತ್ಯುತ್ತರ. ಹಾಗಾದರೆ ಜನತೆಯಲ್ಲಿರಬೇಕಾದ ತಪೋನಿಷ್ಠೆ ಎಂಥಾದ್ದು ? ಅದರಲ್ಲಿ ಮೂರಂಶ ಬೆರೆತುಕೊಂಡಿರುತ್ತದೆ :

(1) ಲೋಕವಸ್ತು ಪರಿಜ್ಞಾನ ;
(2) ವಿಮರ್ಶನ ಜಾಗರೂಕತೆ ;
(3) ಪರಮಾರ್ಥದೃಷ್ಟಿ (ಐಡಿಯಲಿಸ್ಮ್).

ಲೋಕವಸ್ತು ಪರಿಜ್ಞಾನವೆಂದರೆ ಮನುಷ್ಯನ ಐಹಿಕ ಜೀವನಕ್ಕೆ ಸಂಬಂಧಪಟ್ಟ ನಾನಾ ವಸ್ತುಸಾಮಗ್ರಿಯನ್ನು ಕುರಿತ ತಿಳಿವಳಿಕೆ. ಇದರಲ್ಲಿ ಪ್ರಕೃತಿ ವಿಜ್ಞಾನ ಸಮಾಜ ವಿಜ್ಞಾನ ಮೊದಲಾದ ನಾನಾ ಶಾಸ್ತ್ರಗಳೂ ಕಲೆಗಳೂ ಸೇರಿರುತ್ತವೆ. ಯಾವುದನ್ನು ಇಂಗ್ಲಿಷಿನಲ್ಲಿ Knowledge ಎಂದೂ Information ಎಂದೂ ಕರೆಯುತ್ತಾರೆಯೋ ಆ ಲೋಕಬೋಧೆಯೇ ಎಲ್ಲ ಬುದ್ಧಿವ್ಯಾಪಾರಗಳಿಗೂ ಅವಶ್ಯವಾದ ಮೂಲಸಾಮಗ್ರಿ. ಇದನ್ನು ಜನ ಎಷ್ಟೆಷ್ಟು ಹೆಚ್ಚಾಗಿ ಸಂಪಾದಿಸಿಕೊಂಡಿದ್ದರೆ ಅಷ್ಟಷ್ಟು ಹೆಚ್ಚಾಗುತ್ತದೆ ಅವರ ಜೀವನ ಯೋಗ್ಯತೆ. ಅವರ ಸಾಹಿತ್ಯ ಕುತೂಹಲ ಅಷ್ಟಷ್ಟು ಬಲಿಯುತ್ತದೆ.

ಆದರೆ ಬರಿಯ ವಸ್ತುಬೋಧೆ ಸಾಲದು. ಅದರ ಜೊತೆಗೆ ಯುಕ್ತಾಯುಕ್ತ ವಿವೇಕ ಸೇರಬೇಕು. ಅದು ಲೋಕಸಂಗತಿಗಳ ಕಾರ್ಯಕಾರಣ ಸಂಬಂಧಗಳ ಪರೀಕ್ಷೆ ಯಿಂದ ಉಂಟಾಗುತ್ತದೆ. ಅದು ವಸ್ತುಸ್ವಭಾವ ಶೋಧನೆ ಮತ್ತು ಅನ್ಯೋನ್ಯ

ಪರಿಣಾಮಃ ವಿವೇಚನೆ. ಜನದಲ್ಲಿ ಈ ವಿಮರ್ಶನ ಬುದ್ಧಿ ಬೆಳೆದಷ್ಟೂ ಅವರ ಲೋಕವ್ಯಾಪಾರಗಳಲ್ಲಿ ಔಚಿತ್ಯ ಸಹಜವಾಗುತ್ತದೆ; ಅವರ ಸಾಹಿತ್ಯದೃಷ್ಟಿ ಸೂಕ್ಷ್ಮವಾಗುತ್ತದೆ.

ಇನ್ನು, ಪರಮಾರ್ಥದೃಷ್ಟಿಯೆಂದರೆ ಒಂದು ಗೊತ್ತಾದ ಹೆಗ್ಗುರಿಯ ನೆನಪು,—ಎಡೆಬಿಡದ ಒಂದು ದೊಡ್ಡ ಯೋಚನೆ. ಆ ಗುರಿ ಒಬ್ಬೊಬ್ಬ ಮನುಷ್ಯನಿಗೆ ಒಂದೊಂದು ಬಗೆಯದಾಗಿರುತ್ತದೆ. ವಂಶಗುಣಕ್ಕನುಸಾರವಾಗಿ, ಗೃಹ ಸಮಾಜಗಳ ವಾತಾವರಣಕ್ಕನುಸಾರವಾಗಿ, ವಿದ್ಯಾಸಂಸ್ಕಾರಕ್ಕನುಸಾರವಾಗಿ, ಆರ್ಥಿಕ ಪರಿಸ್ಥಿತಿಗನುಸಾರವಾಗಿ, ಪ್ರತಿಯೊಬ್ಬನೂ ತನಗುಚಿತವಾದ ಗುರಿಯೊಂದನ್ನು ಮನಸ್ಸಿನಲ್ಲಿ ಗೊತ್ತುಮಾಡಿಕೊಂಡಿರುವುದು ಅವಶ್ಯಕ. ಆ ಗುರಿ ಸ್ವಪ್ರಯೋಜನದ ಸಂಬಂಧವಿಲ್ಲದ್ದಾಗಬೇಕು. ನನ್ನ ಅನುಭವದ ಒಂದು ಸಂಗತಿಯನ್ನು ದೃಷ್ಟಾಂತವಾಗಿ ಹೇಳಬಹುದೆಂದು ತೋರುತ್ತದೆ. ನನಗೆ ಪರಿಚಿತನಾದ ಮುತ್ತ ಎಂಬಾತನಿದ್ದ. ಆತ ನಾವು ಈಗ ಹರಿಜನವೆಂದು ಗೌರವಿಸುವ ಜನಾಂಗಕ್ಕೆ ಸೇರಿದವ. ಆತ ಅಕ್ಷರಗಂಧ ಕಾಣದವನು. ಅವನಿಗಿದ್ದ ಹುದ್ದೆ ಒಂದು ಸಣ್ಣಹಳ್ಳಿಯ ತಳವಾರಿಕೆ. ಆದರೆ ಅವನು ಗ್ರಾಮಕ್ಕೆಲ್ಲ ಇಷ್ಟನಾಗಿದ್ದವನು. ಅವನದು ಯಾವಾಗಲೂ ನಗುತ್ತ ನಗಿಸುತ್ತಿರುವ ಸ್ವಭಾವ. ಮಧುಸೇವನೆಯಿಂದ ಅವನ ಮಾತಿನಲ್ಲಿ ಮತ್ತಷ್ಟು ಹಾಸ್ಯ ತೋರುತ್ತಿತ್ತು. ಒಂದು ದಿನ ಆತ ನನ್ನಲ್ಲಿಗೆ ಬಂದು ನಾಲ್ಕು ರೂಪಾಯಿ ಬೇಡಿದ. ನಾನು ಅವನನ್ನು "ಏನು, ನಾಲ್ಕಾಣೆಯಿಂದ ನಾಲ್ಕು ರೂಪಾಯಿಗೆ ಬಡ್ತಿ ಮಾಡಿಕೊಂಡಿದ್ದಿ? ಇನ್ನು ಮೇಲೆ ವಿಲಾಯತಿ ಪಾನಕವೋ?" ಎಂದು ಕೇಳಿದೆ. ಅವನು—"ಇಲ್ಲ ಬುದ್ಧಿ, ಒಂದು ಧರ್ಮ ಮಾಡೋದಕ್ಕೆ ಹಣ ಬೇಕು. ಆ ಪುಣ್ಯ ನಿಮಗೆ ಬರ್ತೈತೆ" ಎಂದು ಹೇಳಿದ. ನಾನು—"ಓಡಿ ಇದನ್ನ: ಆ ಪುಣ್ಯ ನಿನಗೇ ಇರಲಿ" ಎಂದು ಹೇಳಿ ಕಳಿಸಿದೆ. ಒಂದು ವಾರ ಕಳೆದಮೇಲೆ ಮುತ್ತ ತಿರುಗಿ ಬಂದು—"ಜಮೀನ್‌ತಾವಿಗೆ ನೀವು ಬರಬೇಕು ಬುದ್ಧಿ" ಎಂದು ಕರೆದ. ಒಂದು ದಿವಸ ನಾನು ಅಲ್ಲಿಗೆ ಹೋದಾಗ ಕಂಡದ್ದೇನು? ಒಂದು ಆನುಗಲ್ಲು ಕಟ್ಟಡ. ಆಳೆತ್ತರದ ಮೂರು ನಿಲುಗಲ್ಲುಗಳನ್ನು ನೆಲದಲ್ಲಿ ನೆಟ್ಟು ನಿಲ್ಲಿಸಿದ್ದಾನೆ. ಅವುಗಳ ಮೇಲೆ ಒಂದು ಉದ್ದವಾದ ಕಲ್ಲಿನ ಅಡ್ಡ ದೂಲವನ್ನು ಹಾಸಿದ್ದಾನೆ! ಅದೇನೆಂದು ನಾನು ಕೇಳಲು—"ಇದೇ ಬುದ್ಧಿ ನಿಮ್ಮ ಧರ್ಮ. ಈ ಜಾಗ ತಿಟ್ಟು. ಈ ಕಡೆಯಿಂದ ಹಳ್ಳಿಗಳೋರು ಸೌದೆ ಹೊರೆ ಹೊತ್ತುಕೊಂಡು ಹತ್ತಿಬರ್ತಾರೆ. ಇಲ್ಲಿಗೆ ಬರೋವೇಳೆ ತಟ್ಟುಬಿದ್ದು ಹೋಗ್ತಾರೆ. ಇನ್ನು ಮೇಲೆ ಈ ಆನುಗಲ್ಲಿಗೆ ಸೌದೆಹೊರೆ ಒರಗಿಸಿ ದಣಿವಾರಿಸಿಕೊಂಡು, ಒಂದು ಕ್ಷಣ ಇಲ್ಲಿ ಕೂತುಕೊಂಡು ಈ ಬಾವಿಯಿಂದ ಒಂದು ಗುಟುಕು ನೀರು ಕುಡಿದು, ತಿರುಗಿ ಹೊರೆ ಹೊತ್ತುಕೊಂಡು ಪೇಟೆಗೆ ಹೋಗುತಾರೆ." ಅದು ಮುತ್ತನ ಪಾರಮಾರ್ಥಿಕತೆ. ಅವನು ನಿರಕ್ಷರಕುಕ್ಷಿ, ಹೆಂಡಕುಡುಕ, ಹೊಟ್ಟೆಗಿಲ್ಲದ ಬಡವ, ಮುದುಕ. ಆದರೆ ಅವನ ಹೃದಯಸಂಪತ್ತು! ಮೈಮುರಿದುಕೊಂಡು ಹಳ್ಳಗಳನ್ನಗೆದ; ಕಲ್ಲುಗಳನ್ನೆತ್ತಿ ನೆಟ್ಟ; ಆ ಕಲ್ಲು ಸಾಗಿಸುವುದು ತನ್ನ ಕೈಯಿಂದಾಗದ ಕೆಲಸವಾದ ಕಾರಣ ಬಂಡಿ ಬಾಡಿಗೆಗಾಗಿ ಹಣ ಬೇಡಿದ. ಅವನ ಶ್ರದ್ಧೆ ಪರಿಶ್ರಮಗಳ

ಪಕ್ಕದಲ್ಲಿ ಆ ಹಣ ತರಗೆಲೆ. ಅವನಿಗೆ ಬಂದ ಲಾಭವೇನು ? ಹಳ್ಳಿಯ ಜನ ಅಲ್ಲಿ ಹೊರೆಯನ್ನೊರಗಿಸಿ ಕುಳಿತು ಉಸ್ಸಪ್ಪ ! ಎಂದು ಆಯಾಸ ಕಳೆದಾಗ ಮುತ್ತನ ಮುಖ ಆತ್ಮತೃಪ್ತಿಯ ಪ್ರತಿಬಿಂಬವಾಗುತ್ತದೆ. ಮುತ್ತನು ಈ ತೃಪ್ತಿಗಾಗಿ ಬಹು ವರ್ಷಗಳ ಕಾಲ ಚಿಂತಿಸಿ ತಾಳ್ಮೆಯಿಂದ ದುಡಿದ. ಅಂಥ ನಿಸ್ಸ್ವಾರ್ಥ ಧರ್ಮ ಚಿಂತನೆಯೇ ಪಾರಮಾರ್ಥಿಕತೆ. ಅದನ್ನೇ ಇಂಗ್ಲಿಷಿನಲ್ಲಿ "ಐಡಿಯಲಿಸ್ಮ್" Idealism ಎಂದು ಕರೆಯುವುದು. ಇಂಥಾ ನಿಸ್ಸ್ವಾರ್ಥ ಧರ್ಮ ನಮ್ಮ ದೇಶದಲ್ಲಿ ಸಾರ್ವಜನಿಕವಾಗಿದ್ದ ಕಾಲ ಒಂದಿತ್ತು. ಅದರ ಗುರುತುಗಳು ಹಳ್ಳಿ ಹಳ್ಳಿಯಲ್ಲೂ ಈಗಲೂ ಕಾಣಬರುತ್ತಿವೆ—ಅನುಗಲ್ಲುಗಳಲ್ಲಿ, ಅರವಟ್ಟಿಗೆ ತೋಟ್ಟಿಗಳಲ್ಲಿ, ಗುಡಿಗಳಲ್ಲಿ, ಮಂಟಪಗಳಲ್ಲಿ, ಗುಂಡುತೋಪುಗಳಲ್ಲಿ, ಹಸುವಿನ ಮಂದೆಗಳ ಉಜ್ಜುಗಂಬಗಳಲ್ಲಿ, ಅರಳೀ ಕಟ್ಟೆಗಳಲ್ಲಿ. ಇವುಗಳನ್ನು ಕಟ್ಟಿದವರು ಯಾರು ? ಯಾರು ಬಲ್ಲರು ? ಅದಕ್ಕೆ ಹಣ ಕೊಟ್ಟವರು ಯಾರು ? ಕೊಡುವವರಿದ್ದಿದ್ದರೆ ಕೈಚಾಚುತ್ತಿದ್ದವರ್‍ಯಾರು ? ಆಗಿನ ಜನಕ್ಕೆ ಒಂದು ದೊಡ್ಡ ನಂಬಿಕೆ ಇತ್ತು. ಮನುಷ್ಯನ ಜೀವನ ಅವನಿಗೆ ದೇವರಿಂದ ಬಂದ ವರ. ಅದನ್ನು ಸಾರ್ಥಕಪಡಿಸುವುದು ಹೇಗೆ ?—ಎಂಬುದೊಂದೇ ಅವರಿಗಿದ್ದ ಚಿಂತೆ. ಅದೇ ಪಾರಮಾರ್ಥಿಕೆಯ ಪ್ರಥಮ ಚಿಹ್ನೆ. ಯಾವ ಜನದಲ್ಲಿ ಪರಮಾರ್ಥ ಶ್ರದ್ಧೆಯಿಲ್ಲವೋ ಅವರ ಪಾಲಿಗೆ ಕಾವ್ಯವೆಂಬುದು ಒಂದು ಬಗೆಯ ದೊಂಬರಾಟ. ನಸ್ಯಾಭ್ಯಾಸಿಯ ಮೂಗಿಗೆ ನಸ್ಯ ಹೇಗೋ, ಮೈ ನವೆತದವನಿಗೆ ತುರಸಿಕೆ ಹೇಗೋ—ಪಾರಮಾರ್ಥಿಕವಿಲ್ಲದವನಿಗೆ ಕಾವ್ಯ ಹಾಗೆ—ಒಂದು ಕ್ಷಣದ ತೀಟೆ ತೀರಿಕೆ, ಒಂದು ಕಚಗುಳಿ, ಅಷ್ಟೇ.

ಕನ್ನಡದಲ್ಲಿ ಮಹಾ ಸಾಹಿತ್ಯವಾಗಬೇಕೆನ್ನುವವರು ಮೊದಲು ಜನತೆಯಲ್ಲಿ ಅದಕ್ಕಾಗಿ ಸಿದ್ಧತೆಯನ್ನುಂಟುಮಾಡಲು ಶ್ರಮಿಸಲಿ. ಆ ಸಿದ್ಧತೆಯು, (1) ಲೋಕ ವಸ್ತು ಪರಿಜ್ಞಾನ, (2) ವಿಮರ್ಶನ ಪ್ರವೃತ್ತಿ, (3) ಪರಮಾರ್ಥ ದೃಷ್ಟಿ—ಎಂಬ ಮೂರು ಅಂತರಂಗ ಸಾಧನಗಳನ್ನು ಜನಸಾಮಾನ್ಯದಲ್ಲಿ ಪ್ರಚಾರಪಡಿಸುವುದರಿಂದ ಉಂಟಾಗತಕ್ಕದ್ದು. ನಮ್ಮ ದೇಶದಲ್ಲಿ ಈಗ ಭಾಷೋತ್ಸಾಹ ಕೆರಳಿ ತವಕಪಡುತ್ತಿದೆ. ಇಂಥಾ ಸಮಯದಲ್ಲಿ ಉತ್ಸಾಹವನ್ನು ಕಾರ್ಯರೂಪಕ್ಕೆ ತಿರುಗಿಸುವ ಯೋಚನೆ ಸಾಧುವೆಂದು ಭಾವಿಸಿ ನಾನು ಇಷ್ಟು ಹೇಳಿದ್ದೇನೆ.

ಪದ್ಯ ಹೆಣೆಯುವವರೂ ಕಥೆ ಕಟ್ಟುವವರೂ ತಾವು ಮಾಡಿದ್ದೇ ಸಾಹಿತ್ಯ, ತಾವು ಆಡಿದ್ದೇ ಲೋಕವಿಧಾಯಕ, ತಮ್ಮ ಉಸಿರೇ ಜನಕ್ಕೆ ಗಾಳಿ ಬೆಳಕು—ಎಂಬಂತೆ ಸ್ವಪ್ರಶಂಸೆ ಮಾಡಿಕೊಳ್ಳುವುದುಂಟು. ಇಂಥಾ ಸ್ವಾಭಿಮಾನ ಎಲ್ಲ ಕಸಬುಗಳವರಿಗೂ ಸಹಜವೇ. ಆದರೆ ಕವಿಕಥಕರ ಉತ್ಪ್ರೇಕ್ಷೆಯಲ್ಲಿ ಒಂದು ಅಪಾಯ ಹೆಚ್ಚುಂಟು. ಅವರ ಕಂಠಧ್ವನಿಯಲ್ಲಿ ರಾಗವೂ ವಾಕ್ಸರಣಿಯಲ್ಲಿ ಚಮತ್ಕಾರವೂ ಇರುತ ವೆ. ಅವು ನಮ್ಮನ್ನು ಮರುಳುಮಾಡುತ್ತವೆ. ನಾವು ಎಚ್ಚರದಿಂದ ಒಂದಂಶವನ್ನು ಜ್ಞಾಪಕದಲ್ಲಿರಿಸಿಕೊಳ್ಳಬೇಕು : ಮನುಷ್ಯನ ಯೋಗ್ಯ ಜೀವನಕ್ಕೆ ಬೇಕಾದ ವಸ್ತುಗಳು ನೂರುಂಟು. ಕಾವ್ಯ ಕಥೆ ನಾಟಕಗಳು ಆ ನೂರರಲ್ಲೊಂದಂಶ. ಮತ್ತು ಆ ಒಂದು

ಚೆನ್ನಾಗಿರಬೇಕಾದರೆ ಮಿಕ್ಕ ತೊಂಬತ್ತೊಂಬತ್ತೂ ಚೆನ್ನಾಗಿರಬೇಕು. ಕಾವ್ಯ ಕಥೆಗಳಿಗೆ ನಾವು ಮನಸೋತು ಮಿಕ್ಕ ಸಾಹಿತ್ಯವನ್ನೂ ಮಿಕ್ಕ ಜೀವಿತ ವ್ಯಾಪಾರಗಳನ್ನೂ ಮರೆತಲ್ಲಿ, ಅಥವಾ ಕಡೆಗಣಿಸಿದಲ್ಲಿ, ಮಿಕ್ಕೆಲ್ಲವೂ ನಷ್ಟವಾಗುವುದಲ್ಲದೆ ಕಥಾ ಕಾವ್ಯ ಸಾಹಿತ್ಯದ ಪರಮ ಪ್ರಯೋಜನವೂ ನಮಗೆ ದಕ್ಕದೆ ಹೋದೀತು. "ಸರಸಕವಿತಾ ಯದ್ಯಸ್ತಿ ರಾಜ್ಯೇನ ಕಿಮ್"—ಎಂಬುದು ಖಾಲಿ ಉತ್ಪ್ರೇಕ್ಷೆ. ರಾಜ್ಯ ಸರಿಯಾಗಿದ್ದರಲ್ಲವೆ ಪ್ರಾಣ; ಪ್ರಾಣವಿದ್ದರಲ್ಲವೆ ಕವಿತೆ?

ಜನಸತ್ತ್ವದಿಂದ ಜೀವಂತ ಸಾಹಿತ್ಯ–ಎಂದಲ್ಲವೆ ನನ್ನ ಮೂಲ ಸೂತ್ರ? ಜನಸತ್ತ್ವವು ಸಾವಿರ ರೂಪಗಳಲ್ಲಿ ಪ್ರಕಾಶವಾಗತಕ್ಕದ್ದು. ವಿದ್ಯಾಪ್ರಾಚುರ್ಯದಲ್ಲಿ, ರಾಜ್ಯ ದಕ್ಷತೆಯಲ್ಲಿ, ರಾಷ್ಟ್ರಕನಿಷ್ಠೆಯಲ್ಲಿ, ಸಾರ್ವಜನಿಕ ಯೋಜನೆಗಳಲ್ಲಿ, ಸಮಾಜ ಸೌಹಾರ್ದದಲ್ಲಿ, ವಿಜ್ಞಾನ ಸಂಧಾನಗಳಲ್ಲಿ, ವ್ಯವಸಾಯ ವಾಣಿಜ್ಯಗಳಲ್ಲಿ, ಶಿಲ್ಪ ಚಾತುರಿಯಲ್ಲಿ, ಸಂಪದುತ್ಪತ್ತಿಯಲ್ಲಿ, ವಿದೇಶ ವ್ಯವಹಾರಗಳಲ್ಲಿ, ಸಂಸ್ಕೃತಿ ವಿಸ್ತಾರದಲ್ಲಿ, ವಿವಿಧ ಪೌರುಷ ಸಾಹಸಗಳಲ್ಲಿ—ಈ ನೂರಾರು ಕಾಲುವೆಗಳಲ್ಲಿ ಹರಿಯಬೇಕಾದದ್ದು ಜನಪದ ಚೈತನ್ಯ. ಅದು ಅನ್ಯಾನುಕರಣ ಮಾತ್ರವಲ್ಲ; ಅದು ಸ್ವತಂತ್ರ ನಿರ್ಮಾಣ. ಆದು ಎಲ್ಲ ಜೀವನಕ್ಷೇತ್ರಗಳಲ್ಲಿಯೂ ಸ್ವತಂತ್ರವಾಗಿ ಉಕ್ಕಿ ಹೊರಹೊಮ್ಮುತ್ತಿದ್ದರೆ ಆಗ ಸಾಹಿತ್ಯವೂ ಸ್ವತಂತ್ರವಾಗಿ ಉಕ್ಕಿ ಹೊರಹೊಮ್ಮೀತು. ಆದದ್ದರಿಂದ ಸಾಹಿತ್ಯ ಕುಶಲಕ್ಕಾಗಿ ಸಾಹಿತ್ಯೇತರ ಕ್ಷೇತ್ರಗಳಲ್ಲಿ ಕುಶಲವನ್ನು ಸಾಧಿಸೋಣ. ಸಾಮಾನ್ಯಜೀವನ ಬೆಳಗಿದಂತೆ ಸಾಹಿತ್ಯ ಬೆಳಗುತ್ತದೆ.

## ಇಂದಿನ ಬೆಳೆ

ಸಂಖ್ಯಾಧಿಕ್ಯದ ದೃಷ್ಟಿಯಿಂದ ನಮ್ಮಲ್ಲಿ ಗಮನಕ್ಕೆ ಬರತಕ್ಕ ಆಧುನಿಕ ಕಾವ್ಯ ಜಾತಿಗಳು ಮುಖ್ಯವಾಗಿ ನಾಲ್ಕೈದು:

(1) ಸಣ್ಣ ಕಥೆಗಳು,
(2) ಸಾಮಾನ್ಯ ದೊಡ್ಡ ಕಥೆ (ನಾವೆಲೆಟ್),
(3) ದೊಡ್ಡ ದೊಡ್ಡ ಕಥೆ (ನಾವೆಲ್).
(4) ಪದ್ಯ.
(5) ನಾಟಕ.

## ಕಥೆ, ಬೃಹತ್ಕಥೆ

ಸಣ್ಣ ಕಥೆಗಳು ಮಳೆಗಾಲದ ಹಳ್ಳತೊರೆಗಳಂತೆ ಮೇಲೆ ಮೇಲೆ ಬರುತ್ತಿವೆ—ಮಾಸಪತ್ರಿಕೆಗಳಲ್ಲಿ, ವಾರಪತ್ರಿಕೆಗಳಲ್ಲಿ, ದಿನಪತ್ರಿಕೆಗಳಲ್ಲಿ. ಅವುಗಳಲ್ಲಿ ಸ್ವಾರಸ್ಯಾಂಶ ಅಷ್ಟಿಷ್ಟು ಉಂಟು; ಆದರೆ ಒಂದು ಮಟ್ಟವಿಲ್ಲ. ಇಂಥಾ ಕೃತಿಗಳಲ್ಲಿ ಏರುತಗ್ಗುಗಳಿರುವುದು ಅನಿವಾರ್ಯವೇ ಆದರೂ, ಸಂಪಾದಕರು ಒಂದು (ಮಿನಿಮಮ್)

ತಳಮಟ್ಟವನ್ನಾದರೂ ಗೊತ್ತುಮಾಡಿ ಕಾಪಾಡದೆ ಹೋದರೆ ಈ ಜಾತಿಯ ಸಾಹಿತ್ಯದ ಒಟ್ಟು ಹೆಸರಿಗೇ ಇನ್ನು ಕೊಂಚ ಕಾಲದಲ್ಲಿ ಗೌರವ ತಗ್ಗೀತು. ಇಂಗ್ಲಿಷಿನಲ್ಲಿ ಹಾಗಾಗಲು ಮೊದಲಾಗಿದೆಯೆನ್ನುತ್ತಾರೆ.

ಪುಟ 100ಕ್ಕೆ ಮೇಲ್ಪಟ್ಟು 300ರ ವರೆಗಿನ ಗಾತ್ರದ ಕಥೆಯನ್ನು ಸಾಮಾನ್ಯ ದೊಡ್ಡ ಕಥೆ—ನಾವೆಲೆಟ್—ಎಂದಿಟ್ಟುಕೊಳ್ಳಬಹುದು. ಇಂಥಾದ್ದು ಕನ್ನಡದಲ್ಲಿ ವರ್ಷಕ್ಕೆ ಸರಾಸರಿ 4–5 ಬರುತ್ತಿವೆಯೆಂದು ನನ್ನ ಅಂದಾಜು.

ಎರಡು–ಮೂರು ಸಂಪುಟ (ವಾಲ್ಯೂಮ್)ಗಳಷ್ಟು ವಿಸ್ತಾರವಾದ ಕಥೆಯನ್ನು ದೊಡ್ಡ ದೊಡ್ಡ ಕಥೆ ಎನ್ನಬಹುದು. ಇಂಥಾ ಬೃಹತ್ಕಥೆ ಅಥವಾ ನಾವೆಲ್ ವರ್ಷಕ್ಕೆ ಒಂದೋ, ಎರಡು ವರ್ಷಕ್ಕೆ ಒಂದೋ ಬರುತ್ತಿದೆ.

ಈ ಬಗೆಬಗೆಯ ಕಥೆಗಳ ವಸ್ತುವು ನಮ್ಮ ಜೀವನದಲ್ಲಿಯ ನಾನಾ ವಿಕಾರಗಳು. ಒಂದು ಕುಟುಂಬದಲ್ಲಿಯ ಯಾವುದೋ ವಿಶೇಷ ಘಟನೆ, ಒಬ್ಬರಿಬ್ಬರ ಅವಿಚಾರ ಚರ್ಯೆ, ಒಂದಾನೊಂದು ಸಂದರ್ಭದಿಂದ ಬಾಂಧವ್ಯದಲ್ಲಾದ ಅಸ್ತವ್ಯಸ್ತಗಳು—ಹೀಗೆ ಸಹಸ್ರಮುಖ ಸಮಾಜದ ಒಂದಾನೊಂದು ಮುಖದ ಚಿತ್ರಣವೇ ಕಥೆ. ಕಥಾವಸ್ತುವಿನ ಬೀಜವು ಸಾಮಾನ್ಯವಾಗಿ ಯೌವನದ ಪ್ರಣಯಕ್ಕೂ ಪೂರ್ವಾ-ಚಾರಕ್ಕೂ ಆಗುವ ಘರ್ಷಣೆ ; ಸಂಸಾರದೊಳಗಣ ಮತ್ಸರ ನಿಷ್ಠುರಗಳು ; ಸ್ತ್ರೀಯರ ಪುಂ-ಸಮಾನ ಸ್ವಾತಂತ್ರ್ಯವಾದ ; ಬಲಿಷ್ಠರಿಂದ ದುರ್ಬಲರಿಗೆ— ಮುಖ್ಯವಾಗಿ ವಿತಂತುಗಳಿಗೆ. ಕೂಲಿಕಾರರಿಗೆ, ವರ್ಣಬಾಹ್ಯರಿಗೆ—ಆಗುತ್ತಿರುವ. ಅಥವಾ ಆಗುತ್ತಿವೆ ಯೆಂಬಂತೆ ತೋರುವ, ಪೀಡೆ ಸಂಕಟಗಳು. ಇಂಥ ವಿಷಮ ಸಂದರ್ಭ ವಿಸ್ತರಣೆಗಳೇ ಕಥೆ, ದೊಡ್ಡ ಕಥೆ. ದೊಡ್ಡ ದೊಡ್ಡ ಕಥೆ. ಮೊದಮೊದಲಿನ ಹತ್ತಿಪ್ಪತ್ತು ಗ್ರಂಥ ಗಳಲ್ಲಿ ಇಂಥ ಕಲ್ಪನೆಗಳು ನವೀನವೆಂದು ತೋರಿ ರುಚಿಸುತ್ತವೆ. ಆದರೆ ಇಂಥ ಕಲ್ಪನೆಗಳ ವೈವಿಧ್ಯಕ್ಕೂ ಒಂದು ಮಿತಿಯುಂಟು. ಕಥೆಯ ಪಾತ್ರಗಳನ್ನೂ ಸನ್ನಿವೇಶ ಗಳನ್ನೂ ಅಷ್ಟಿಷ್ಟು ತಿರುಗುಮುರುಗು ನೋಡಿ, ಹೊಸ ರಂಗು ಕಟ್ಟುವ ಉಪಾಯಕ್ಕೂ ಮಿತಿಯುಂಟು. ಕೊಂಚ ಕಾಲದ ತರುವಾಯ ಬರುವ ಕಥಾ ಸಂವಿಧಾನಗಳು ಚರ್ವಿತಚರ್ವಣವೆನಿಸುತ್ತವೆ. ಹಳಸಲು ಕಥೆ ಯಾರಿಗೆ ಬೇಕು ? ಹೊಸ ಹೊಸ ಕಥಾವಸ್ತು ಬರುವುದು ಜನಜೀವನದಿಂದ. ಜೀವನ ಹೊಸ ಹೊಸದಾಗುತ್ತಿದ್ದರೆ ಕಥಾಕಲ್ಪನೆಯೂ ಹೊಸ ಹೊಸದಾದೀತು.

ಈ ಸಂದರ್ಭದಲ್ಲಿ ತರುಣ ಉಮೇದುವಾರರಿಗಾಗಿ ಒಂದು ಎಚ್ಚರಿಕೆ ಸರಿಯೆಂದೆನಿಸುತ್ತದೆ. ಕಥಾಲೇಖನ ಸುಲಭವೆಂದು ಕೆಲವರು ತಿಳಿದುಕೊಂಡಿರುವ ಹಾಗೆ ಕಾಣುತ್ತದೆ. ಅದು ಕಷ್ಟದ ಕಾರ್ಯವೆಂದು ನನಗೆ ಬಂದಿರುವ ತಿಳಿವಳಿಕೆ. ಅದಕ್ಕೆ ಮೊದಲು ಬೇಕಾದದ್ದು ಲೋಕ ಜೀವನದ ಮರ್ಮಗ್ರಹಣ. ಜೀವನದೊಳಕ್ಕೆ ಆಳವಾಗಿ ಹೋದ ಹೊರತು ಮರ್ಮ ಕಾಣಬಾರದು. ಕಥೆಗೆ ವಸ್ತುವನ್ನು ಆರಿಸಿ

ಕೊಳ್ಳುವುದರಲ್ಲಿ ಈ ಮರ್ಮದೃಷ್ಟಿಯ ಕೆಲಸ ಮುಖ್ಯವಾದದ್ದು. ಬೀದಿಯಲ್ಲಿ ಕಂಡ ಯಾವುದೋ ಘಟನೆಯನ್ನು, ರೈಲಿನಲ್ಲಿ ಕೇಳಿದ ಯಾವುದೋ ಹರಟೆಯನ್ನು, ನೆರೆಹೊರೆಯಲ್ಲಿ ನಡೆದ ಯಾವುದೋ ವಿಕಾರವನ್ನು ವರದಿಮಾಡಿದರೆ ಅದು ಸಾಹಿತ್ಯದ ಮಟ್ಟಕ್ಕೇರುವ ಕಥೆಯಾಗದು. ಕಥಾವಸ್ತುವನ್ನು ಹುಡುಕಿ ಆರಿಸಿಕೊಳ್ಳುವುದೇ ಮೊದಲನೆಯ ಕಷ್ಟ. ಎರಡನೆಯದು, ಅದನ್ನು ಮಿತಪದಗಳಿಂದ ಚಿತ್ರಿಸುವ ನಿಪುಣತೆ. ಜಳ್ಳು ಪದಗಳೂ ಭರ್ತಿ ವಾಕ್ಯಗಳೂ ಆ ಬರವಣಿಗೆಯಿಂದ ದೂರವಾಗಬೇಕು. ಮತ್ತು ನಾನಾ ಪಾತ್ರಗಳೂ ಸನ್ನಿವೇಶಗಳೂ ಪರಸ್ಪರ ಸಂಬದ್ಧವಾಗಿ, ಒಂದೇ ಮೈಕಟ್ಟೆಂದೆನಿಸಬೇಕು. ಸಣ್ಣಕಥೆ ಒಂದು ಕುಶಲಕಲೆ. ಅದು "ಮಿನಿಯೇಚರ್" ಎಂಬ ಸಂಗ್ರಹ ಚಿತ್ರದಂತೆ—ಸೂಕ್ಷ್ಮದಲ್ಲಿ ಸರ್ವಾಂಗ ಪ್ರತಿಬಿಂಬ. ರಿಸ್ಟ್‌ವಾಚ್ ಎಂಬ ಮುಂಗೈ ಗಡಿಯಾರ ನೋಟಕ್ಕೆ ಸಣ್ಣದು. ಆದರೊಳಗಿನ ಯಂತ್ರಯೋಜನೆ ಸುಲಭವೆ? ಸಣ್ಣ ಕಥೆಯ ಕೆಲಸ ಅಂಥಾದ್ದು.

ಒಟ್ಟಿನಲ್ಲಿ, ಕಥಾ ಸಾಹಿತ್ಯದ ಬೆಳೆ ನಮ್ಮಲ್ಲಿ ಹುಲುಸಾಗಿದೆ. ಆ ರಾಶಿಯಲ್ಲಿ ಬಹುಭಾಗ ಜನ ಮೆಚ್ಚಿಕೊಂಡದ್ದಾಗಿರಬೇಕು. ಓದುವ ಕುತೂಹಲವುಳ್ಳವರು ಇರುವುದನ್ನು ತಾನೆ ಓದಬೇಕು? ಪರೀಕ್ಷೆಯನ್ನು ಅತಿಯಾಗಿ ಮಾಡಿದರೆ ಅವರ ಕೈಗೆ ಯಾವುದೂ ಇಲ್ಲದೆ ಹೋದೀತು. ಆದದ್ದರಿಂದ ನಮ್ಮ ಜನದ ಕೃತಜ್ಞತೆ ಕಥಕರಿಗೆ ಸುಲಭವಾಗಿಯೇ ದೊರೆಯುವಂತಿದೆ. ಈ ಮಾತು ಹೇಳಿದ್ದರಿಂದ ನಾನು ಇರುವ ಗುಣವನ್ನು ಗಣಿಸುತ್ತಿಲ್ಲವೆಂದು ಯಾರೂ ಭಾವಿಸಬಾರದು. ನಿಜವಾಗಿ ರುಚಿವಂತವಾದ ಕಥಾಕೃತಿ ನಮ್ಮಲ್ಲಿ ಹುಟ್ಟುತ್ತಿದೆ. ವಿಚಾರಕಾರಕವಾದ ಕಥಾ ಕಲ್ಪನೆಗಳೂ ಆಗಾಗ ಬರುತ್ತಿವೆ. ಜೀವನೋನ್ನತಿಯ ದರ್ಶನವೂ ಕೆಲವು ಕಾದಂಬರಿಗಳಲ್ಲಿ ದೊರೆಯುತ್ತದೆ. ಇಂಗ್ಲಿಷ್ ಕಾದಂಬರಿಗಳ ಕೆಲವು ವ್ಯಕ್ತಿಗಳು—ಬಾರ್ಕಿಸ್, ಪಿಕ್‌ವಿಕ್, ಪೆಕ್‌ಸ್ನಿಫ್, ಜೂಡ್—ಜನದ ನಿತ್ಯೋದಾಹರಣೆಗಳಾಗಿರುವಂತೆ, ನಮ್ಮಲ್ಲಿಯ ಕಥಾವ್ಯಕ್ತಿಗಳು ನಮ್ಮ ಬಳಕೆಯ ಮಾತಿನಲ್ಲಿ ಇನ್ನೂ ಸ್ಥಾನ ಪಡೆದುಕೊಂಡಿಲ್ಲ. ಜನ ಓದಿದರೆ ತಾನೆ ಕಥಾವ್ಯಕ್ತಿಗೆ ಪ್ರಸಿದ್ಧಿಯೋ ಅಪಪ್ರಸಿದ್ಧಿಯೋ ಬರುವುದು? ಹೀಗೆ ನಮ್ಮ ಕಲಾಕೃತಿಗಳ ಯೋಗ್ಯತೆಯನ್ನು ಜನಾದರಣೆಯ ವೃಷ್ಟಿಯಿಂದ ನಿಶ್ಚಯಮಾಡಲು ಇನ್ನೂ ಕಾಲ ಬಂದಿಲ್ಲ.

ಒಂದು ಮಹೋಪಕಾರವಂತೂ ನಮ್ಮ ಸಾಹಿತ್ಯಕ್ಕೆ ಕಥಾಪ್ರಾಚುರ್ಯದಿಂದ ಆಗುತ್ತಿದೆ. ಅದು ಜನತೆಯಲ್ಲಿ ವಾಚನಾಭಿರುಚಿಯ ಉತ್ಪಾದನೆ. ಹಿಂದೆ ಯಾರು "ನಮಗ್ಯಾಕೆ ಪುಸ್ತಕ?" ಎಂದು ಕೇಳುತ್ತಿದ್ದರೋ ಅಂಥವರು ಈ ಹೊತ್ತು ಕಥಾ ಕುತೂಹಲದಿಂದಲಾದರೂ ಪುಸ್ತಕ ನೋಡೋಣವೆನ್ನುತ್ತಾರೆ; ಸಾಲವಾಗಿ ಯಾದರೂ ಪುಸ್ತಕವನ್ನು ಬಯಸುತ್ತಾರೆ. ಇಂದು ಬೇಸರ ನೀಗುವುದಕ್ಕೆಂದು ಪ್ರಾರಂಭವಾದ ಅವರ ಅಭ್ಯಾಸ ನಾಳೆಯೋ ನಾಳಿದ್ದೋ ಅವರನ್ನು "ಖಿಪ್ ಛಾಪ್" ಜಾತಿಯ ಸಾಹಿತ್ಯದಿಂದ ಗಂಭೀರ ಜಾತಿಯ ಸಾಹಿತ್ಯಕ್ಕೆ ಕರೆತಂದೀತೆಂದು ಭರವಸೆ ತೋರುತ್ತದೆ.





## ಪದ್ಯ—ನಾಟಕ

ಪದ್ಯಸಾಹಿತ್ಯ ನಾಟಕಸಾಹಿತ್ಯಗಳನ್ನು ಕುರಿತು ಟೀಕಿಸುವ ಅಧಿಕಾರ ನನಗಿಲ್ಲ. ನನಗೆ ಹಳೆಯ ಸಂಪ್ರದಾಯದಿಂದ ಬಿಡುಗಡೆಯಾಗಿಲ್ಲ. ಕ್ಲಾಸಿಕಲ್ ಎಂಬ ಪೂರ್ವ ಸಂಪ್ರದಾಯದ ವಿಶೇಷಲಕ್ಷಣಗಳು ಎರಡು: ಮೊದಲನೆಯದು ರೂಪಬಂಧ: ಎರಡನೆಯದು ಭಾವಪ್ರಸನ್ನತೆ. ಮೊದಲಿನಲ್ಲಿ ಮಾತಿನ ಸೊಗಸೂ ಧಾಟಿಯೂ, ಅದರ ನಾದಸುಖವೂ ಗತಿನಿಯತಿಯೂ, ಕಿವಿಯನ್ನು ಹಿಡಿದು ಒಲಿಸಿಕೊಳ್ಳ ಬಲ್ಲದ್ದಾಗಿರಬೇಕು. ಬಾಯಿತುಂಬಿ ಬರುವ ನುಡಿಗಟ್ಟಿನಲ್ಲಿ ಭಾವ ತುಂಬಿಬರುತ್ತ ದೆಂಬ ಭರವಸೆಯೇನೂ ಇಲ್ಲ. ನಮ್ಮ ಹಳೆಯ ಕಾವ್ಯಗಳಲ್ಲಿ ಈ ನ್ಯೂನತೆ ವಿರಳವಲ್ಲ. ಆದರೂ ಪದಬಂಧದಲ್ಲಿ ಗಾಂಭೀರ್ಯ ಸೌಂದರ್ಯಗಳೆಂಬ ಗುಣಗಳುಂಟೆಂಬುದನ್ನು ಸಾಂಪ್ರದಾಯಿಕರು ನಂಬಿರುತ್ತಾರೆ.

ಎರಡನೆಯದಾಗಿ, ಪದ್ಯಾವಳಿಯನ್ನು ಎರಡು ಸಾರಿ ಓದಿದ ಮೇಲಾದರೂ ಅದು ಅಳುವೋ ನಗುವೋ, ಕಿರಿಚೋ, ಗರ್ಜನೆಯೋ, ರಾಗವೋ, ತೇಗೋ ಮನಸ್ಸಿಗೆ ತೋರಬೇಕು. ಕವಿತಾರ್ಥದ ಸ್ಪಷ್ಟತೆ ಅಂಗಡಿಯ ಸರಕಿನ ಪಟ್ಟಿಯಷ್ಟು ಸ್ಪಷ್ಟ ವಾಗಿರಲಾರದು: ಏಕೆಂದರೆ ಕವಿತೆಯ ಸರಕು ಸೂಕ್ಷ್ಮತರವಾದದ್ದು. ಆದರೂ ಕವಿತೆಯಲ್ಲಿ ಕಾಣುವ ಚಿತ್ರದಲ್ಲಿ ಎಮ್ಮೆಯ ಕೊಂಬೂ ಆನೆಯ ಸೊಂಡಿಲೂ ಮೋಡದ ಅಂಚೂ ಬೆಟ್ಟದ ದಟ್ಟವೂ ಸೇರಿಕೊಂಡಿದ್ದರೆ ಭಾವಗ್ರಹಣ ಕಷ್ಟವಾಗು ತ್ತದೆ. ಇದು ಸಾಂಪ್ರದಾಯಿಕರ ಮಾತು. ಆದರೆ ನಮ್ಮ ನವ್ಯಕಾವ್ಯದಲ್ಲಿ ರಸವಿಲ್ಲವೆಂದಾಗಲಿ ಭಾವವಿಲ್ಲವೆಂದಾಗಲಿ ನಾನು ಸೂಚಿಸುತ್ತಿಲ್ಲ. ಎಷ್ಟೋ ನೂತನ ಕವನಗಳೂ ಗೀತೆಗಳೂ ಜನಪ್ರಿಯವಾಗಿರುವುದನ್ನು ನಾನು ನೋಡಿ ಸಂತೋಷ ಪಟ್ಟಿದ್ದೇನೆ. ಅವು ನನಗೂ ಕೂಡ ಕೊಂಚ ಕೊಂಚ ಅರ್ಥವಾದಂತೆ ಭಾಸವಾಗಿದೆ.

ನಾಟಕ ರಚನೆಯ ವಿಚಾರವೂ ಹೀಗೆಯೇ. ಈಚೆಗೆ ಏಕಾಂಕ ನಾಟಕಗಳು ಹೆಚ್ಚುತ್ತಿವೆ. ಸಣ್ಣ ಕಥೆಯಂತೆಯೇ ಏಕಾಂಕ ನಾಟಕ. ಆಕಾರದಲ್ಲಿ ಚಿಕ್ಕದು: ಮೇಲ್ನೋಟಕ್ಕೆ ಸರಳ: ಯಶಸ್ವಿಯಾಗಲು ಮಾತ್ರ ಬಹುಪ್ರಯಾಸವನ್ನು ಅಪೇಕ್ಷಿಸುತ್ತದೆ.

ನಾಟಕವಾಗಲಿ, ಪದ್ಯವಾಗಲಿ, ಕಥೆಯಾಗಲಿ, ಬೃಹತ್ಕಥೆಯಾಗಲಿ—ಅದರ ವಸ್ತು ಏನೇ ಇರಲಿ, ಭಾವವೆಂಥದೇ ಇರಲಿ,—ಒಂದು ಮೂರ್ತಿ ಅಲ್ಲಿ ಎದ್ದು ಕಾಣುತ್ತಿದೆಯೆ? ಅದು ವಾಸ್ತವಿಕವೆನ್ನಿಸುವಂತಿದೆಯೆ? ಇವೆರಡೇ ನಿರ್ಣಾಯಕ ಪ್ರಶ್ನೆಗಳು. ಒಂದು ಗೊತ್ತಾದ ಆಕಾರ ಮುಂದೆ ನಿಲ್ಲಬೇಕು, ಮತ್ತು ಅದರ ಅಂಗಾಂಗಗಳಲ್ಲಿ ಹೊಂದಾಣಿಕೆ ಇರಬೇಕು. ಇವೆರಡು ಗುಣಗಳೂ ಕಲ್ಪನೆಯಲ್ಲಿ ತೋರಿಬರಬೇಕಾದರೆ ಲೇಖಕನು ಪ್ರಯಾಸಪಡಬೇಕು. ತನ್ನ ಕೈಕೆಲಸವನ್ನು ತಾನೇ ನಿರಭಿಮಾನಿಯಾದ ಕಣ್ಣಿಂದ ನೋಡಬೇಕು. ಬೇಸರಪಡದ ತಾಳ್ಮೆಯಿಂದ ತಿದ್ದಬೇಕು: ಮತ್ತೆ ನೋಡಬೇಕು; ಮತ್ತೆ ತಿದ್ದಬೇಕು. ಇದೇ ಕಲಾಕೃತದಲ್ಲಿ ಅಂತಸ್ಸಾಕ್ಷಿ ವಿಧೇಯತೆ (Conscience).

## ರುಚ್ಯ ಸಾಹಿತ್ಯ—ಮಹಾ ಸಾಹಿತ್ಯ

ಸಮಗ್ರದೃಷ್ಟಿಯಿಂದ ನಾನು ಬಿನ್ನಯಿಸುವ ಮಾತು ಇಷ್ಟು : ಯಾವುದನ್ನು ಇಂಗ್ಲಿಷಿನಲ್ಲಿ "ಇಂಟೆರೆಸ್ಟಿಂಗ್" (Interesting) ಎಂದು ಕರೆಯುತ್ತಾರೋ " ಮನೋರಂಜನೆಯ ಮಟ್ಟದ ತಾತ್ಕಾಲಿಕ ಸಾಹಿತ್ಯ ನಮ್ಮಲ್ಲಿ ಅಷ್ಟಿಷ್ಟು ಹುಟ್ಟಿದೆ, ಹುಟ್ಟುವ ಸೂಚನೆ ಇದೆ. ಅದು ಓದಿ ನೋಡೋಣವೆನ್ನಿಸುವಷ್ಟು ಕುತೂಹಲ ಹುಟ್ಟಿಸುವ ಸಾಹಿತ್ಯ, ಸಾಮಾನ್ಯರಿಗೆ ರುಚಿಸುವ ಲಘು ಸಾಹಿತ್ಯ,—ರುಚ್ಯ ಸಾಹಿತ್ಯ. ಒಂದು ಸಾರಿ ಓದಿದ್ದಾದ ಮೇಲೆ ಗ್ರಂಥವನ್ನು ಮತ್ತೆ ಓದೋಣ, ಇನ್ನೊಂದು ಸಾರಿ, ಮತ್ತೊಂದು ಸಾರಿ ಓದೋಣ ಎಂದೆನ್ನಿಸುವಷ್ಟರ ಸ್ವಾರಸ್ಯ ಅದರಲ್ಲಿದ್ದರೆ ಅದನ್ನು ಚಿರಕಾಲಿಕ ಸಾಹಿತ್ಯ, ಘನಸಾಹಿತ್ಯ, ಎನ್ನಬಹುದು. ಅದೇ ಮಹಾ (Great) ಸಾಹಿತ್ಯ. ಪದೇ ಪದೇ ನೋಡಬೇಕೆಂದೆನ್ನಿಸಿಕೊಳ್ಳುವಂಥ ಘನಸಾಹಿತ್ಯ ನಮ್ಮಲ್ಲಿ ಎಲ್ಲಿಯೋ ಕೊಂಚ ಕಾಣುತ್ತದೆ. ಅದು ಇನ್ನುಮೇಲೆ ಬರಬೇಕಾಗಿದೆ.

ಘನಸಾಹಿತ್ಯವೆಂಬುದನ್ನು ಮತ್ತೆ ಎರಡು ಮೆಟ್ಟಲಾಗಿ ನೋಡಬಹುದು : (1) ಮೂಲಭೂತ ಸಾಹಿತ್ಯ, (2) ಪ್ರತಿಬುದ್ಧ ಸಾಹಿತ್ಯ.

ಮೌಲ ಸಾಹಿತ್ಯವು ಮನುಷ್ಯ ಜೀವನದ ಮಹಾ ಮೇರುಗಳನ್ನು ತೋರಿಸಬಲ್ಲದ್ದು : ನಮ್ಮ ವಾಲ್ಮೀಕಿಯ ರಾಮಾಯಣ ವ್ಯಾಸರ ಮಹಾಭಾಗತಗಳಂತೆ. ಹೋಮರನ ಇಲಿಯಡ್ (Homer's Iliad) ಕಾವ್ಯವನ್ನೂ ವರ್ಜಿಲನ ಏಯನ್‌ನೆಯಿಡ್ (Virgil's Aeneid) ಕಾವ್ಯವನ್ನೂ ಈ ಜಾತಿಗೆ ಸೇರಿಸಬಹುದು. ಅವರೆಲ್ಲ ತಮ್ಮ ತಮ್ಮ ಜನತೆಯ ಕವಿಪರಂಪರೆಗೆ ಮೂಲಪುರುಷರು. ಅವರು ತಮ್ಮ ತಮ್ಮ ಕಾಲದ, ತಮ್ಮ ತಮ್ಮ ದೇಶದ, ಜನಹೃದಯವನ್ನರಿತು, ಅಲ್ಲಲ್ಲಿಯ ಪೂರ್ವ ಚರಿತ್ರೆ ಪುರಾಣಕಥೆಗಳನ್ನು ತಮ್ಮ ಅಂತರಂಗದಲ್ಲಿ ಜೀರ್ಣಿಸಿಕೊಂಡು, ಮಾನವ ಜೀವನದ ಪರ್ವತಶಿಖರಗಳನ್ನು ತಮ್ಮ ಜನತೆಗೆ ತೋರಿಸಿದವರು. ಅದು ಮಹದ್ದರ್ಶನ ಸಾಹಿತ್ಯ. ಅವರಿಗಾದ ಮಹತ್ತ್ವದ ದರ್ಶನವೇ ವರಪ್ರಸಾದ. ಅದು ತಪಃಫಲ.

ಪ್ರತಿಬುದ್ಧ ಸಾಹಿತ್ಯವೆಂಬುದು ಮೌಲ ಸಾಹಿತ್ಯದ ಸಂತಾನ : ಕಾಳಿದಾಸ ಭವಭೂತಿಗಳದು ; ಷೇಕ್ಸ್‌ಪಿಯರ್ ಗೆಯ್ಟೆ (Goethe) ಗಳದು. ಮೌಲ ಮಹಾಕಾವ್ಯಗಳ ಸ್ಫೂರ್ತಿಯಿಂದ, ಮೌಲಿಕಾಂಶಗಳನ್ನು ವಿಸ್ತರಿಸಿ, ಮಹತ್ತ್ವಾಂಗೀಕಾರ ಮಾಡಿರುವ ಸಾಹಿತ್ಯ ಇದು. ಎಲ್ಲ ದೇಶಗಳಲ್ಲಿಯೂ ಘನಸಾಹಿತ್ಯವೆಂಬುದರಲ್ಲಿ ಅಧಿಕಾಂಶ ಮಹನ್ನಿರ್ಮಿತಿಯದಲ್ಲ, ಮಹದಂಗೀಕಾರದ್ದು. ಈ ಜಾತಿಯ ಕವಿಗಳೂ ಕಥಕರೂ ಜೀವಿತದ ಮಹಾಧ್ಯೇಯಗಳನ್ನು,—ಮಹಾ ಆದರ್ಶಗಳನ್ನು,—ಮೌಲಿಕರಿಂದ—ಪೂರ್ವದ ಮಹಾಕವಿಗಳಿಂದ, ಮಹರ್ಷಿಗಳಿಂದ, ದಿವ್ಯಜ್ಞಾನಿಗಳಿಂದ, ತತ್ತ್ವದರ್ಶಿಗಳಿಂದ—ಅಂಗೀಕರಿಸಿ, ಆ ಮಹತ್ತನ್ನು ಮನೋಹರಾಕಾರಗಳಲ್ಲಿ ನವನವೀನ

ವಾಗಿ ಚಿತ್ರಿಸಿ, ಆ ಮಹತ್ತ್ವಾಂಶಕ್ಕೆ ಜನಾಂಗೀಕಾರವನ್ನು ಸಂಪಾದಿಸಿ ಕೊಡುತ್ತಾರೆ. ಮಹದ್ದರ್ಶನ ಇವರದಲ್ಲದಿದ್ದರೂ ಮಹತ್ತ್ವದರ್ಶನ ಇವರಿಂದಾಗುವ ಉಪಕಾರ. ಕನ್ನಡದ ಮಹಾಕವಿಗಳು ಈ ಅಂತಸ್ತಿನವರು. ಅವರು ಪ್ರತಿಭಾವಂತರೇ. ಆದರೆ ಆ ಪ್ರತಿಭೆ ಸ್ವತಂತ್ರವಾದದ್ದಕ್ಕಿಂತ ಹೆಚ್ಚಾಗಿ ಮೌಲಾವಲಂಬಿಯಾದದ್ದು.

## ಮೂಲ ಸೃಷ್ಟಿ ಪುನಃಪುನಃ ಆಗದು

ವಾಲ್ಮೀಕಿಯೂ ವ್ಯಾಸರೂ ಇದ್ದು ಬಹು ಸಹಸ್ರ ವರ್ಷಗಳಾಗಿವೆಯಲ್ಲ ! ಇಷ್ಟು ದೀರ್ಘಕಾಲದಲ್ಲಿ ಇನ್ನೊಬ್ಬ ವಾಲ್ಮೀಕಿ, ಇನ್ನೊಬ್ಬ ವ್ಯಾಸ ಯಾಕೆ ಹುಟ್ಟಿಲ್ಲ ? ಇದು ಸೋಜಿಗದ ಪ್ರಶ್ನೆಯೇ ಸರಿ. ಅದಕ್ಕೆ ಸಮಾಧಾನ ಬೇಕಾದರೆ ಇನ್ನೊಂದು ಪ್ರಶ್ನೆಯನ್ನು ಹಾಕಿಕೊಳ್ಳಬೇಕು : ಹಿಮವತ್ಪರ್ವತ ಹುಟ್ಟಿ ಎಷ್ಟೋ ಲಕ್ಷ ವರ್ಷಗಳಾಗಿವೆಯಲ್ಲ, ಇನ್ನೊಂದು ಹಿಮಾಲಯ ಏಕೆ ಇನ್ನೂ ಸೃಷ್ಟಿಯಾಗಿಲ್ಲ ? ಗಂಗಾ ನದಿ ಉದ್ಭವಿಸಿ ಎಷ್ಟೋ ಯುಗಗಳಾಗಿವೆಯಲ್ಲ : ಇನ್ನೊಂದು ಗಂಗೆಯಾಗಲಿ ಇನ್ನೊಂದು ಸಿಂಧುವಾಗಲಿ ಏಕೆ ಇನ್ನೂ ತಲೆದೋರಿಲ್ಲ ? ಉತ್ತರವಿಷ್ಟೆ :— ಜಗತ್ಸೃಷ್ಟಿಯ ಆದಿ ನಿರ್ಮಾಣಗಳು ಪುನಃಪುನಃ ಆಗುವುದಿಲ್ಲ. ಹಾಗೆಯೆ ವಾಙ್ಮಯ ಸೃಷ್ಟಿಯಲ್ಲಿ ಕೆಲವು ಮೌಲಿಕ ರಚನೆಗಳು ಪುನಃಪುನಃ ಆಗುವುದಿಲ್ಲ. ಮನುಷ್ಯ ಭಾಷೆಯ ವಿಷಯವನ್ನೇ ನೋಡೋಣ : ನೂರು ನೂರು ವರ್ಷಕ್ಕೋ ಸಾವಿರ ಸಾವಿರ ವರ್ಷಕ್ಕೋ ಒಂದೊಂದು ಹೊಸ ಭಾಷೆ ಹುಟ್ಟಿಕೊಂಡು ಬಂದಿದೆಯೆ ? ಮನುಷ್ಯ ಸೃಷ್ಟಿಯಾದಾಗ ಹುಟ್ಟಿದ ಭಾಷೆಗಳೇ ಬೆಳೆದು ಅಂಗಾಂಗ ಪುಷ್ಟಿಮಾಡಿ ಕೊಂಡು ನಮ್ಮ ಕಾಲಕ್ಕೂ ಬಂದಿವೆ. ಹಳೆಯ ಭಾಷಾ ಸಾಮಗ್ರಿಯೇ ಹೊಸ ಹೊಸ ಪ್ರಯೋಗರೂಪಗಳನ್ನು ತಾಳುತ್ತಿದೆ. ಕಾವ್ಯ ಕಥಾ ವಿಷಯವೂ ಅಷ್ಟೇ. ಮೌಲಿಕ ರಚನೆ ಸಾರ್ವಕಾಲಿಕವಾದದ್ದು. ಅದರ ಪುನರವತರಣ ಹೇಗೆ ಅಸಾಧ್ಯವೋ ಹಾಗೆ ಅನಾವಶ್ಯಕ.

ಎಂದೋ ಹುಟ್ಟಿದ ಮೌಲಿಕ ಕಾವ್ಯವೇ ನಮಗಿರುವ ಮೂಲದ್ರವ್ಯ. ಅದರಲ್ಲಿರುವ ಮಹದ್ದರ್ಶನವೇ ನಮಗಿರುವ ಮೂಲ ಸ್ಫೂರ್ತಿ. ನಾವು ಆ ಮೂಲ ಸಾಮಗ್ರಿಯನ್ನು ಹೇಗೆ ಉಪಯೋಗಿಸಿಕೊಳ್ಳುತ್ತಿದ್ದೇವೆ ? ಹೇಗೆ ಬೆಳೆಸುತ್ತಿದ್ದೇವೆ ? ಅದೇ ನಮ್ಮನ್ನೆದುರಿಸುವ ಪ್ರಶ್ನೆ. ಈ ಪ್ರಶ್ನೆಗೆ ಜನದ ಪ್ರತಿಯೊಂದು ತಲೆಮಾರಿನವರೂ ಉತ್ತರ ಒದಗಿಸಬೇಕಾಗುತ್ತದೆ. 1962ನೆಯ ಇಸ್ವಿಯವರ ಉತ್ತರವೇನು ?

## ಭಾಷಾ ಪರಿಶ್ರಮ

ನನ್ನಲ್ಲಿಗೆ ವರ್ಷಕ್ಕೊಬ್ಬರೋ ಇಬ್ಬರೋ ತರುಣ ಲೇಖಕರು ಬಂದು, ತಮ್ಮ ಕವನಗಳನ್ನು ತೋರಿಸಿ ಅಭಿಪ್ರಾಯ ಕೇಳುವುದುಂಟು. ನಾನು ಅವರನ್ನು "ಈ ಪದ್ಯ ಓದುವ ಧಾಟಿ ಹೇಗೆ ?" ಎಂದು ಕೇಳಿದರೆ ಅವರು "ನಾನು ಛಂದಸ್ಸು ಕಲಿತಿಲ್ಲ" ಎನ್ನುತ್ತಾರೆ. "ಈ ಪದಪ್ರಯೋಗ ಎಲ್ಲಿದೆ ?" ಎಂದರೆ "ನಾನ

ಹಳಗನ್ನಡ ಓದಿಲ್ಲ" ಎನ್ನುತ್ತಾರೆ. ನಾನು "ಈ ವಾಕ್ಯದ ಅನ್ವಯ ಹೇಗೆ" ಎಂದರೆ "ನಾನು ವ್ಯಾಕರಣಕ್ಕೆ ಗಮನ ಕೊಟ್ಟಿಲ್ಲ" ಎನ್ನುತ್ತಾರೆ. ಹಾಗಾದರೆ ಅವರ ಕವನದ ಸೊಗಸು ಎಂಥಾದ್ದು? ಅದು ಯಾವುದೋ ಒಂದು ಮನೋಭಾವದ್ದಂತೆ! ಇರಲಿ. ಆ ಭಾವ ಅತಿ ಸೂಕ್ಷ್ಮವಾದದ್ದಾದ ಕಾರಣ ನನ್ನ ಗ್ರಹಿಕೆಗೆ ದೊರೆಯಲಾರದ್ದಾಗಿರಬಹುದು. ಆದರೆ ಆ ಒಳ್ಳೆಯ ಭಾವರಸವನ್ನು ನಮ್ಮ ಹಿಡಿತಕ್ಕೆ ತಕ್ಕ ಒಳ್ಳೆಯ ವಾಕ್ಯಪಾತ್ರೆಯಲ್ಲಿ ನಮಗೆ ಕೊಡಬಾರದೆ? ಕಾವ್ಯರಚನೆ ಒಂದು ಯೋಗ್ಯಕಾರ್ಯವಾದ ಪಕ್ಷಕ್ಕೆ ಅದಕ್ಕಾಗಿ ವ್ಯಾಕರಣ ಛಂದಸ್ಸುಗಳನ್ನು ಕೃಷಿಮಾಡುವುದೂ ಯೋಗ್ಯಕಾರ್ಯವಾಗದೆ? ಕನ್ನಡ ಕವಿಗಳ ಗುರು ಗದುಗಿನ ನಾರಣಪ್ಪ—

ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ
ಪದವಿಟ್ಟಳುಪದೊಂದಗ್ಗಳಿಕೆ

ಎಂದು ಸಾಲುಸಾಲಾಗಿ ಜಂಬ ಕೊಚ್ಚಿದ್ದಾನಷ್ಟೆ? ಆ ಅಗ್ಗಳಿಕೆಗಳ ಸಾಲನ್ನು ನಮ್ಮ ತರುಣರು ಮೇಲ್ಪಂಕ್ತಿ ಮಾಡಿಕೊಂಡಂತೆ ತೋರುತ್ತದೆ. ನಾರಣಪ್ಪನ ಪ್ರತಿಭಾಸಂಪತ್ತಿನಲ್ಲಿ ನೂರರಲ್ಲೊಂದಂಶ ಇವರಿಗಿರುವುದು ಖಂಡಿತವಾದರೆ ನಾವು ಅವರ ಪದ್ಯದ ಕೊಂಕು ಕುಂಟುಗಳನ್ನು ಎಣಿಸಬೇಕಾದದ್ದಿಲ್ಲ. ವಾಸ್ತವವಾಗಿ ನಾರಣಪ್ಪನ ಭಾಷಾ ಪ್ರಭುತ್ವ ಪ್ರಚಂಡವಾದದ್ದು. ಛಂದಸ್ಸು ವ್ಯಾಕರಣಗಳನ್ನು ಆತ ಅರಿಯದವನಲ್ಲ. ಅಗೌರವಿಸಿದವನೂ ಅಲ್ಲ. "ಪದವಿಟ್ಟಳುಪೆ"ನೆಂಬ ಹಟವನ್ನು ಬದಿಗಿಟ್ಟು ಅಲ್ಲಲ್ಲಿ ಒಂದು ಸಲ (ರಿವೈಸ್) ಪುನಃ ಪರಿಷ್ಕಾರ ಮಾಡಿದ್ದಿದ್ದರೆ ಗದುಗಿನ ಭಾರತ ಇನ್ನೂ ಸೊಗಸಾಗುತ್ತಿತ್ತೆನಿಸುತ್ತದೆ.

ಕನ್ನಡದ ಅಭ್ಯುದಯಕ್ಕಾಗಿ ಸಂಘಗಳೂ ಸೌಕರ್ಯಗಳೂ ಹೆಚ್ಚುತ್ತಿವೆ. ಆದರೆ ಕನ್ನಡದಲ್ಲಿ ಪಾಂಡಿತ್ಯ ಕುಗ್ಗುತ್ತಿದೆ. ಹಿಂದಿನ ಕಾಲದ ಪಂಡಿತರಿಗೆ ಪೂರ್ವಕವಿ ಪ್ರಯೋಗಗಳೂ ವ್ಯಾಕರಣ ಛಂದಸ್ಸೂತ್ರಗಳೂ ಹೃದ್ಗತವಾಗಿದ್ದವು. ಅವರೊಡನೆ ಮಾಡಿದ ಒಂದು ಕಾಲುಘಂಟೆಯ ಸಂಭಾಷಣೆಯಿಂದ ಒಂದು ಗ್ರಂಥವನ್ನೋದಿದಷ್ಟು ಪ್ರಯೋಜನ ದೊರೆಯುತ್ತಿತ್ತು. ಅಂಥಾ ಸಾಂಪ್ರದಾಯಿಕ ಪಾಂಡಿತ್ಯವನ್ನು ಅಧಿಕಾರಪ್ರತಿಷ್ಠಿತರು ಉದ್ದೇಶಪೂರ್ವಕವಾಗಿ ಕೊಂದರು. ಈಗ ಹಳಗನ್ನಡ ಸಂಸ್ಕೃತಗಳೆರಡರಲ್ಲೂ ಪ್ರೌಢರಾದ ಅಂಥಾ ಪಂಡಿತರು—ಒಬ್ಬರಿಬ್ಬರು ವೃದ್ಧರನ್ನು ಬಿಟ್ಟರೆ—ಇಲ್ಲವೆಂದೇ ಹೇಳಬಹುದು. ನಮ್ಮ ಸ್ಕೂಲು ಕಾಲೇಜುಗಳ ಪಠ್ಯ ಪುಸ್ತಕದ ವಿಚಕ್ಷಣೆಯೂ ಇದೇ ರೀತಿಯದೇ. ಅಲ್ಲಿ ಪೂರ್ವಕಾವ್ಯಗಳಿಗೆ ಕೊಟ್ಟಿರುವ ಸ್ಥಾನ ತೀರಾ ಸ್ವಲ್ಪದ್ದು. ಗಿಡಕ್ಕೆ ಬೇರು ಹೇಗೋ ಭಾಷೆಗೆ ಪೂರ್ವಕಾವ್ಯ ಹಾಗೆ. ವಿದ್ಯಾಧಿಕಾರಿಗಳಾದವರಿಗೆ ಕನ್ನಡ ಸಾಹಿತ್ಯ ಸೊನ್ನೆಯಾಗಿರುವುದು ಹಾಗಿರಲಿ, ಇಂಗ್ಲಿಷ್ ಭಾಷೆಯ ಗಂಧವಿರುವುದೂ ಕಛೇರಿಯ ಮಾತ್ರದ್ದೇ. ಯಾವ ಒಂದು ಭಾಷೆಯ ಸಾಹಿತ್ಯವನ್ನಾಗಲಿ ಆಳವಾಗಿ ಕಂಡಿರುವವನಿಗೆ ಪ್ರಾಚೀನ ಕಾವ್ಯಗಳ ಬೆಲೆಯೆಷ್ಟರದೆಂಬುದು ಗೊತ್ತಾದೀತು.

ಇದು ಪ್ರಜಾಯುಗ. ಈಗಣ ಮಂತ್ರಿ ಮಹಾಶಯರ ಅಧಿಕಾರ ಯೋಗ್ಯತಾ ಸಂಪತ್ತನ್ನು ಕುರಿತು ಚರ್ಚಿಸುವುದಕ್ಕಿಂತ ಅದನ್ನು ದೇಶದ ಹಣೆಯುಬರಹವೆಂದು ಭಾವಿಸುವುದು ಕ್ಷೇಮ. ಈಗ ಭಾಷಾ ಸಾಹಿತ್ಯಗಳಿಗಾಗಿ ಆಗಬೇಕಾಗಿರುವ ಶುಶ್ರೂಷೆಯನ್ನು ಜನ ಸ್ವಪ್ರಯತ್ನದಿಂದ ಮಾಡಿಕೊಳ್ಳುವುದು ಕರ್ತವ್ಯವಾಗಿದೆ. ನಮ್ಮಲ್ಲಿ ನೃಪತುಂಗ ಪಂಪ ರನ್ನರ, ಹರಿಹರ ಷಡಕ್ಷರಿ ಲಕ್ಷ್ಮೀಶ ಕುಮಾರವ್ಯಾಸರ, ವಿಶೇಷ ವ್ಯಾಸಂಗಕ್ಕಾಗಿ ಹೆಚ್ಚಿನ ಪ್ರಯತ್ನ ಅವಶ್ಯವಾಗಿದೆ. ನಮ್ಮ ಸಾಹಿತ್ಯದ ಪುನರುಜ್ಜೀವನಕ್ಕಾಗಿ ಬೇಕಾದ ಇನ್ನೊಂದು ಉಪಕರಣ ಒಂದು ಪ್ರಕೃತೋಚಿತ ವ್ಯಾಕರಣ,—ಇಂದಿನ ಮಹಾಜನ ಪ್ರಯೋಗಗಳನ್ನು ಪರೀಕ್ಷಿಸಿ ಆರಿಸಿಕೊಂಡ ಸುಲಭ ವ್ಯಾಕರಣ. ಪ್ರಾಚೀನ ಕಾವ್ಯ ವ್ಯಾಸಂಗ, ಅದ್ಯತನೀಯ ವ್ಯಾಕರಣ—ಇವೆರಡೂ ಇಂದಿನ ನಮ್ಮ ಲೇಖಕರಿಗೆ ಅನಿವಾರ್ಯವಾದ ಪ್ರಥಮ ಸಾಧನಗಳು.

## ಯೂರೋಪಿನಲ್ಲಿ ಹೇಗಿದೆ ?

ನಮ್ಮ ದೇಶದಲ್ಲಿ ಪ್ರಗತಿಯನ್ನಳೆಯುವ ಅಡಿಗೋಲು ಯೂರೋಪಿನಲ್ಲಿ ತಯಾರಾದದ್ದಲ್ಲವೆ ? ಹಾಗಾದಮೇಲೆ, ಅಲ್ಲಿಯ ಸಾಹಿತ್ಯ ಪ್ರಗತಿ ಹೇಗಿದೆ ? ಕಳೆದ ಅರುವತ್ತು ವರ್ಷಗಳಲ್ಲಿ ಅಲ್ಲಿಯೂ ಕಾವ್ಯಕ್ಷೇತ್ರದಲ್ಲಿ ಮಹಾಸಾಹಿತ್ಯೋತ್ಪತ್ತಿ ಅತಿ ಪುಷ್ಟವಾಗೇನೂ ಇಲ್ಲ. ಗ್ರಂಥ ಸಂಖ್ಯೆಯೇನೋ ಹೆದರಿಸುವಷ್ಟಿದೆ. ಜಾತಿ ವಿವಿಧತೆಯೂ ಇದೆ. ಆದರೆ ಗುಣ ಇಳಿಮುಖವಾಗಿದೆ. ಕಥೆ ನಾವೆಲ್ಲುಗಳು ಅಷ್ಟಿಷ್ಟು ರುಚಿವತ್ತಾಗಿದ್ದರೂ—ಹಿಂದಿನ ಡಿಕೆನ್ಸ್, ಥ್ಯಾಕರೇ, ಹಾರ್ಡಿಗಳ— ಅಗಾಧ ಪರಾಮರ್ಶೆಯಿಲ್ಲ. ಮೇಲುಮೇಲಿನ ನೋಟ, ಒಂದೆರಡು ಕ್ಷಣದ ಉದ್ರೇಕ, ಅಂದಂದಿನ ವಿರಾಮಕ್ಕೆ ಬೇಕಾದಷ್ಟು ವಿನೋದ ಹವ್ಯಾಸ—ಇವು ಈ ಹೊತ್ತಿನ ಇಂಗ್ಲಿಷ್ ಕಥಾಲೇಖಕರ ಮುಖ್ಯಾಶಯ. ಯೂರೋಪಿನ ಈಗಿನ ಬಾಳು ಹಾಗಿದೆ. ಜೀವನ ಕಾರ್ಯದ ಬಹುಭಾಗವನ್ನು ಯಂತ್ರಗಳು ಸಾಗಿಸುತ್ತವೆ. ದಿನದ ಮುಖ್ಯ ಭಾಗವನ್ನು ಕಛೇರಿ ಕಾರ್ಖಾನೆಗಳು ತೆಗೆದುಕೊಳ್ಳುತ್ತವೆ. ಜನ ಯಾವಾಗಲೂ ದಣಿದು ಬೇಸತ್ತಿರುತ್ತಾರೆ. ಅವರಿಗೆ ಬಿಡುವು ದೊರೆತಾಗ ಬೇಕೆನಿಸುವುದು ವಿನೋದ ; ಬೋಧೆಯಲ್ಲ, ಬುದ್ಧಿಕ್ಲೇಶವಲ್ಲ ; ಮನಸ್ಸಿನ ತೀಟೆಯನ್ನು ಕಳೆಯುವಂಥಾದ್ದು ಬೇಕು. ಅವರ ಸಾಹಿತ್ಯ ಬಿಡುವುಭರ್ತಿಯ ಸಾಹಿತ್ಯ. ಅವರ ಬಾಯಿಗೆ ಬೀರ್ ಹೇಗೋ ಅವರ ಮನಸ್ಸಿಗೆ ಸಾಹಿತ್ಯ ಹಾಗೆ—ಅದು ಒಂದು ಕ್ಷಣ ಮೈಮರೆಯಿಸುವ ಅಫೀಮು ಗುಳಿಗೆ. ಇಂಗ್ಲಿಷ್ ಪದ್ಯರಚನೆಯ ಮಾತೂ ಅಷ್ಟೇ. ಅದು ಬಡಬಡಕಲಾಗಿ ಮೂಕನ ಕೈಬಾಯಿ ಸನ್ನೆಗಳಂತೆ ಇದೆ. ಅಮೆರಿಕದ ಕವಿತ್ವವೆಂಬುದಂತೂ ಅಕಾಂಡತಾಂಡವಕ್ಕೆ ನಿದರ್ಶನ. ನಮ್ಮ ಈಚೀಚಿನ ಕನ್ನಡ ಕವಿತ್ವ ಬಹುಮಟ್ಟಿಗೆ ಈ ಇಂಗ್ಲಿಷ್–ಅಮೆರಿಕನ್ ಕವಿತ್ವಗಳ ಅನುಕರಣವೆಂದು ತೋರುತ್ತದೆ. ನಮ್ಮ ತರುಣರ ಮುಂದೆ ಯಾವ ಅಪಸವ್ಯವನ್ನೆತ್ತಿ ತೋರಿಸಿದರೂ ಅವರು “ ಇಂಗ್ಲಿಷಿನಲ್ಲಿ ಹಾಗೆಯೇ ಇಲ್ಲವೇ ? ನೋಡಿ ” ಎನ್ನುತ್ತಾರೆ. ಸಾಂಪ್ರದಾಯಿಕರು ಹಾಗೆ ಸ್ವಾನುಭವ ಪ್ರಮಾಣವನ್ನು ಮರೆತು, ಪರಾನುಕರಣಪ್ರಮಾಣವನ್ನು ಅಂಗೀಕರಿಸಲಾರರು.

ಪ್ರಕೃತ, ಕ್ರಿಸ್ತಶಕ ಇಪ್ಪತ್ತನೆಯ ಶತಮಾನದ ಪಾಶ್ಚಾತ್ಯ ಸಾಹಿತ್ಯವು ಮಗೇನೂ ಮಾರ್ಗದರ್ಶಕವಾಗುವಂತಿಲ್ಲ. ಅವರಲ್ಲೇ ಅದು ಹೆಚ್ಚು ಪ್ರಭಾವ ಏರಿಯಾಗಿಲ್ಲ. ಮಹದ್ದರ್ಶನದ ಪ್ರಭೆಯುನ್ನು ಸಾಹಿತ್ಯ ಬೀರಿದ್ದಿದ್ದರೆ ಯೂರೋಪಿನ ಮನಸ್ಸು ಈಗಿನಷ್ಟು ಯುದ್ಧ ಸ್ಪರ್ಧೆಗಳಿಂದ ಹದಗೆಡುತ್ತಿರಲಿಲ್ಲ. ಮೊದಲನೆಯ ಮಹಾಯುದ್ಧದ ಪ್ರಾರಂಭದಿಂದ ಇಂದಿನವರೆಗೂ ಪಾಶ್ಚಾತ್ಯ ಪ್ರಪಂಚದ ಬಾಳು ಬಿಡೆಬಿಡದ ತಲ್ಲಣ,—ಸಂತತವಾದ ಸಂಕ್ಷೋಭೆ. ಅದು ಇದ್ದ ಗುರಿ ತಪ್ಪಿ, ಬೇರೆ ಗುರಿ ಕಾಣದ ಪರದಾಟದ ಬಾಳು. ಯೂರೋಪಿಗೂ ಕೂಡ ಈಗ ಜೀವಹಿತ ಕಾರಿಯಾದ ಮಹಾ ಸಾಹಿತ್ಯ ಬೇಕಾಗಿದೆ. ಅದು ಬರುವುದಾವಾಗ? ವರ್ಷೇ ವರ್ಷೇ ನೋಬಲ್ ಬಹುಮಾನವೇನೋ ಹಂಚಿಕೆಯಾಗುತ್ತಿದೆ. ಇನ್ನೂ ಎಷ್ಟೆಷ್ಟೋ ಇನಾಮುಗಳು ಕವಿಕಥಕರಿಗೆ ದೊರೆಯುತ್ತಿವೆ. ಅವರ ಗ್ರಂಥಗಳಲ್ಲಿ ಸ್ವಾರಸ್ಯವಿಲ್ಲ ವೆಂದು ಯಾರೂ ಹೇಳರು. ಆದರೆ ಸ್ವಾರಸ್ಯಕ್ಕಿಂತ ಮೇಲಿನದು ದರ್ಶನ ಮಹತ್ತ್ವ. ಹಣದ ಗಂಟನ್ನು ಲೇಖಕನ ಕಣ್ಣ ಮುಂದೆ ಕುಣಿಸಿದರೆ ಮಹಾಸಾಹಿತ್ಯೋದಯ ವಾದೀತೆಂದು ನಿರೀಕ್ಷಿಸುವವರು ನಮ್ಮಲ್ಲೂ ಇದ್ದಾರೆ. ಅವರು ಭ್ರಾಂತರೆನ್ನಲು ನನಗೆ ಸಂದೇಹವಿಲ್ಲ.

ಮಹಾ ಸಾಹಿತ್ಯಕ್ಕೆ ಅವಶ್ಯವಾದ ಪೂರ್ವಸಿದ್ಧತೆ ಎಂಥಾದ್ದೆಂಬುದನ್ನು ಆಗಲೇ ಸೂಚನೆ ಮಾಡಿದೆ.

ಜನತೆಯಲ್ಲಿ (1) ಲೋಕ ಪರಿಜ್ಞಾನ, (2) ವಿಮರ್ಶನ ಜಾಗರೂಕತೆ, (3) ಪರಮಾರ್ಥ ದೃಷ್ಟಿ ಇವು ಎಷ್ಟೆಷ್ಟು ಚೆನ್ನಾಗಿ ಹರಡಿದ್ದರೆ ಅವರಲ್ಲಿ ಉತ್ತಮ ಸಾಹಿತ್ಯೋದಯ ಅಷ್ಟು ನಿಶ್ಚಯವೆಂದು ಹೇಳಿದೆ. ಯೂರೋಪಿನಲ್ಲಿ ಸಾಮಾನ್ಯ ಜನದ ಲೋಕವಸ್ತು ಪರಿಜ್ಞಾನ ನಮ್ಮಲ್ಲಿರುವುದರ ಹತ್ತಿಪ್ಪತ್ತರಷ್ಟಿದೆ. ಅವರಲ್ಲಿ ಕಾರ್ಯಕಾರಣ ವಿಚಾರ ಪ್ರವೃತ್ತಿಯೂ ನಮ್ಮಲ್ಲಿರುವುದಕ್ಕಿಂತ ಎಷ್ಟೋ ಹೆಚ್ಚಾಗಿದೆ. ಆದರೂ ಅಲ್ಲಿ ಮಹಾಕಾವ್ಯ ಏಕೆ ಹುಟ್ಟಿಲ್ಲ? ಅವರಲ್ಲಿ ಪಾರಮಾರ್ಥಿಕತೆ ನಮ್ಮಲ್ಲಿ ಇರುವಷ್ಟು ಮಟ್ಟಿಗೂ ಇಲ್ಲ. ಪಾರಮಾರ್ಥಿಕತೆ ಎಂದರೆ ಜನ್ಮಸಾಫಲ್ಯದ ಚಿಂತೆ,— ಜೀವನ ಸಾರ್ಥಕ್ಯದ ಚಿಂತೆ.—ಬಾಳಿಗೆ ಗುರಿಯೇನು? ಎಂಬ ಚಿಂತೆ.

ನಮ್ಮಲ್ಲಿ ಪಾರಮಾರ್ಥಿಕತೆ ಇದೆ, ಅಥವಾ ಪಾರಮಾರ್ಥಿಕದ ಚಪಲತೆ ಯಂತೂ ಇದೆ; ಆದರೆ ಅದು ಪೌರುಷವಿಹೀನ ಪಾರಮಾರ್ಥಿಕ. ಅವರಲ್ಲಿ ಪೌರುಷವಿದೆ, ಆದರೆ ಅದು ಪರಮಾರ್ಥವಿಹೀನ ಪೌರುಷ.

## ಪೌರುಷ—ಪರಮಾರ್ಥಗಳ ಸಮನ್ವಯ

ಭರತಖಂಡದ ನಾವು ಅಮೆರಿಕ ರಷ್ಯಗಳಂತೆ ಆಗಬೇಕೆಂದು ಹೊರಟಿದ್ದೇವೆ. ಯೂರೋಪು ಅಮೆರಿಕಗಳವರು—ತಮ್ಮ ಬಾಳ್ವೆಯಲ್ಲಿ ಹುರುಳಿಲ್ಲ, ಬೇರೆಲ್ಲಿಯಾದರೂ ಹುರುಳು ಉಂಟೆ? ಇಂಡಿಯದಲ್ಲಿ ಉಂಟೆ? ಎಂದು ಕೇಳುತ್ತಿದ್ದಾರೆ. ಮಾಘ

ಕವಿಯು ಶಿಶುಪಾಲವಧೆಯ ಕಥೆಯಲ್ಲಿ ರೈವತಕ ಪರ್ವತದ ವರ್ಣನೆಯಿರುವುದು ತಮಗೆ ಜ್ಞಾಪಕದಲ್ಲಿರಬಹುದು ಆ ಪರ್ವತವು ರಮ್ಯವಾದ ವಿಹಾರಸ್ಥಾನ—ದೇವತೆಗಳಿಗೆ ಕೂಡ. ಅಲ್ಲಿ ಹೀಗೆ ನಡೆಯಿತಂತೆ :—

ಬಿಂಬೋಷ್ಠಂ ಬಹುಮನುತೇ ತುರಂಗ ವಕ್ತ್ರ-
ಶ್ಚುಂಬಂತಂ ಮುಖಮಿಹ ಕಿನ್ನರಂ ಪ್ರಿಯಾಯಾಃ ।
ಶ್ಲಿಷ್ಯಂತಂ ಮುಹುರಿತರೋಽಪಿ ತಂ ನಿಜಸ್ತ್ರೀ-
ಮುತ್ತುಂಗಸ್ತನಭರಭಂಗ ಭೀರುಮಧ್ಯಾಂ ॥ 4–39

ಬಿಂಬಾಧರ ಕಿನ್ನರ ಯುಗ ।
ಚುಂಬನ ಸಂಭ್ರಮಕೆ ಕರುಬುವರ್ ಕಿಂಪುರುಷರ್ ॥
ಕಿಂಪುರುಷ ದಂಪತಿ ಪರೀ ।
ರಂಭವೆ ಪಿರಿದೆಂದು ಕಿನ್ನರರ್ ಮತ್ಸರಿಪರ್ ॥

ದೇವತೆಗಳ ಪರಿವಾರದಲ್ಲಿ ಕಿನ್ನರರು ಕಿಂಪುರುಷರು ಎಂದೆರಡು ಜಾತಿ ಕಿನ್ನರರು ಮನುಷ್ಯ ಮುಖವೂ ಕುದುರೆಯ ಮೈಯೂ ಉಳ್ಳವರು. ಮನುಷ್ಯ ಮುಖಿಗಳಾದ ಕಿನ್ನರ ದಂಪತಿಗಳ ಚುಂಬನೋತ್ಸವವನ್ನು ನೋಡಿ ಅಶ್ವಮುಖಿಗಳಾದ ಕಿಂಪುರುಷರು ಕರುಬುತ್ತಿದ್ದಾರೆ; ಮನುಷ್ಯದೇಹಿಗಳಾದ ಕಿಂಪುರುಷ ದಂಪತಿಗಳ ಗಾಢಾಲಿಂಗನವನ್ನು ನೋಡಿ ಅಶ್ವದೇಹಿಗಳಾದ ಕಿನ್ನರರು ಕೊರಗುತ್ತಿದ್ದಾರೆ.

ಅವರಂತೆ ಇದೆ ಈ ಹೊತ್ತು ಪ್ರಪಂಚದ ಪೂರ್ವ ಪಶ್ಚಿಮ ದಿಗ್ದೇಶಗಳವರ ಪಾಡು. ಇಲ್ಲಿಯವರ ದೃಷ್ಟಿಯಲ್ಲೊಂದು ಲೋಪ, ಅಲ್ಲಿಯವರ ದೃಷ್ಟಿಯಲ್ಲಿನ್ನೊಂದು ಲೋಪ. ಒಂದು ಸಮಗ್ರ ಜೀವನದ ಮಹದ್ದರ್ಶನ ಈ ಹೊತ್ತು ಇಬ್ಬರಿಗೂ ಬೇಕಾಗಿದೆ. ಪೌರುಷ ಪಾರಮಾರ್ಥಿಕೋಭಯಾತ್ಮಕವಾದ ಆ ಮಹತ್ತ್ವದ ದಿವ್ಯದರ್ಶನ ಮನುಷ್ಯ ಲೋಕಕ್ಕೆ ಎಂದು ಬಂದೀತೋ.—ಯಾವ ಭಾಷೆಯಲ್ಲಿ ಬಂದೀತೋ—ಒಂದು ಮುಖದಿಂದ ಬಂದೀತೋ ನಾಲ್ಕು ಮುಖಗಳಿಂದ ಬಂದೀತೊ.—ಯಾವ ಆಕಾರದಲ್ಲಿ ಬಂದೀತೋ—ಪದ್ಯದಲ್ಲಿಯೋ. ಕಥೆಯಲ್ಲಿಯೋ, ನಾಟಕದಲ್ಲಿಯೋ. ಅಥವಾ ಸಂವಾದಸರಣಿಯಲ್ಲಿಯೋ. ತರ್ಕಪ್ರಬಂಧದಲ್ಲಿಯೋ, ಉಪನ್ಯಾಸ ವಚನದಲ್ಲಿಯೋ. ಗೀತೆಯಲ್ಲಿಯೋ. ಸೂತ್ರದಲ್ಲಿಯೋ—ತಿಳಿದು ಹೇಳ ಬಲ್ಲ ಕಾಲಜ್ಞಾನಿ ಎಲ್ಲಿಯೂ ಕಾಣಬಂದಿಲ್ಲ. ಅಥವಾ ಇಂದಿಗೆ ಬೇಕಾದ ಸಂದೇಶ ಹಿಂದಿನ ಸಾಹಿತ್ಯದಲ್ಲಿಯೇ ಇದ್ದು, ನಮ್ಮ ಮರೆವಿನ ಮುಸುಕಿನೊಳಗಡೆ ಸಿಕ್ಕಿ ಕೊಂಡಿದೆಯೋ ! ತೆರೆದ ಕಣ್ಣಿನಿಂದ ನೋಡುವವರಿಗೆ ರಾಮಾಯಣ ಮಹಾಭಾರತಗಳಲ್ಲಿಯೇ ಪ್ರಕೃತ ಪ್ರಪಂಚಕ್ಕೆ ಬೇಕಾದ ಉಪದೇಶ ದೊರೆತೀತೋ ? ಹಾಗಿದ್ದರೂ ಇದ್ದೀತಲ್ಲವೆ ? ಎಂತಾದರಾಗಲಿ. ದೇವರ ಅವತಾರಕ್ಕಾಗಿ ಮಹರ್ಷಿಗಳೂ ತಪಸ್ವಿಗಳೂ ಸಾಧುಸಜ್ಜನರೂ ಭಕ್ತಿಶ್ರದ್ಧೆಗಳಿಂದ ಕಾದುಕೊಂಡಿದ್ದಂತೆ. ನಾವು

ತಪೋನಿಷ್ಠೆಯಿಂದ ಮಹದ್ದರ್ಶನ ಸಾಹಿತ್ಯಕ್ಕಾಗಿ ತಾಳ್ಮೆ ತಾಳಿ ಎದುರುನೋಡಿ ಕೊಂಡಿರುವುದು ಕರ್ತವ್ಯವಾಗಿದೆ.

## ತ್ರಿವಿಧ ಸಿದ್ಧತೆ

ನಾವು ಈಗ ಮಾಡಬೇಕಾದ ತಪಸ್ಸೆಂಥಾದ್ದು ? ಮೊದಲು, ಜನತೆಯಲ್ಲಿ ಲೋಕಪರಿಜ್ಞಾನವನ್ನು ಹರಡಬೇಕಾದದ್ದು. ಸಾಹಿತ್ಯ ಸೇವೆಯೆಂದರೆ ಪದ್ಯ ಕಟ್ಟಿ, ಕಟ್ಟಿದ ಪದ್ಯವನ್ನು ಹಾಡಿ, ಅಥವಾ ಹಾಡಿಸಿ ಕೇಳಿ, ಲೋಕವನ್ನು ಮರೆಯುವುದು ಎಂದು ಬಹುಮಂದಿ ಅರ್ಥಮಾಡಿಕೊಂಡಂತಿದೆ. ಅದು ಕೇವಲ ಭ್ರಮೆಯೆಂದು ನನ್ನ ತಿಳಿವಳಿಕೆ. ದೇಶ ವಿದೇಶ ಚರಿತ್ರೆಯೂ ನಾನಾ ಪ್ರಕೃತಿವಿಜ್ಞಾನ ಸಮಾಜ ವಿಜ್ಞಾನಗಳೂ ಕಾವ್ಯ ಕಥಾ ಸಾಹಿತ್ಯಕ್ಕೆ ಪೋಷಣಸ್ಥಾನಗಳು. ನಮ್ಮ ಜನಕ್ಕೆ ಈಗ ಮೊದಲು ಅವಶ್ಯವಾದದ್ದು ಲೋಕಪರಿಸ್ಥಿತಿಯ ಅಂತರಂಗ ಬಹಿರಂಗಗಳ ವಿವರಣೆ.

ಎರಡನೆಯದು, ಜನತೆಯಲ್ಲಿ ವಿಮರ್ಶನಾಭ್ಯಾಸವನ್ನು ಹರಡಬೇಕಾದದ್ದು. ಅವರು ಒಂದು ಹೊಸ ಭಾವನೆಯನ್ನೋ ಹೊಸ ಸಂಪ್ರದಾಯವನ್ನೋ ಸ್ವೀಕರಿಸುವುದಕ್ಕೆ ಮುಂಚಿತವಾಗಿಯೂ, ಹಾಗೆಯೇ ಒಂದು ಹಳೆಯ ಭಾವನೆಯನ್ನೋ ಹಳೆಯ ಸಂಪ್ರದಾಯವನ್ನೋ ವರ್ಜಿಸುವುದಕ್ಕೆ ಮುಂಚಿತವಾಗಿಯೂ ಅವರು ಆ ಸಂಗತಿಯ ಕಾರ್ಯಕಾರಣ ಭಾವಗಳನ್ನು ಪರೀಕ್ಷಿಸಿ ನಿರ್ಣಯಮಾಡುವ ಬುದ್ಧಿವೃತ್ತಿಯನ್ನು—ಪ್ರೋತ್ಸಾಹ ಪಡಿಸುವುದು ಸಾಹಿತ್ಯಕ್ಕೆ ದೊಡ್ಡ ಉಪಕಾರವಾಗುತ್ತದೆ. ಅಂಥಾ ಸ್ವತಂತ್ರ ಬುದ್ಧಿವೃತ್ತಿ ಈಗ ನಮಗೆ ಅನೇಕದೃಷ್ಟಿಗಳಿಂದ ಅವಶ್ಯವಾಗಿದೆ.

ಮೂರನೆಯದಾಗಿ, ಜನತೆಯಲ್ಲಿ ಧರ್ಮಕುತೂಹಲವನ್ನೂ ಸೌಜನ್ಯವನ್ನೂ ಹರಡುವುದು. ಇವಕ್ಕೆ ಉಪದೇಶ ಭಾಷಣವೂ ಪುರಾಣಶ್ರವಣವೂ ಸಾಧನಗಳೆಂದು ಸಾಮಾನ್ಯವಾದ ನಂಬಿಕೆ. ಆದರೆ ಇನ್ನೂ ದೊಡ್ಡಸಾಧನೆ ಕಾರ್ಯಾನುಷ್ಠಾನ. ಪ್ರತಿಯೊಬ್ಬನೂ ತನ್ನ ವ್ಯಷ್ಟಿಜೀವನದಲ್ಲಿ ಆದಷ್ಟು ಹೆಚ್ಚು ಭಾಗವನ್ನು ಸಮಷ್ಟಿ ಜೀವನದಲ್ಲಿ ಬೆರೆಸುವುದನ್ನು ಕಲಿಯಬೇಕು. ಒಟ್ಟುಗೂಡಿ ಬಾಳುವ ನೀತಿಯೇ ರಾಷ್ಟ್ರಕಧರ್ಮ ಅಥವಾ "ಸಿಟಿಸನ್‌ಷಿಪ್". ನೆರೆಹೊರೆಯಲ್ಲಿ ಬೆರೆತು ಬಾಳುವ ಅಭ್ಯಾಸ ಜನಕ್ಕಿಲ್ಲದಿದ್ದಲ್ಲಿ ಪ್ರಜಾರಾಷ್ಟ್ರವೆಂಬುದು ಬುಡವಿಲ್ಲದ ಕೊಡವಾಗುತ್ತದೆ. ಸಾಹಿತ್ಯವಾಗಲಿ, ತತ್ತ್ವಸಿದ್ಧಾಂತವಾಗಲಿ, ರಾಜಕೀಯವಾಗಲಿ, ವಿಜ್ಞಾನವಾಗಲಿ, ಯಾವುದೇ ಶಾಸ್ತ್ರವಾಗಲಿ, ಯಾವುದೇ ಕಲೆಯಾಗಲಿ, ಅದು ಜನಜೀವನರಂಗದಲ್ಲಿ ಕೆಲಸ ಮಾಡಲಾರದ್ದಾದರೆ ಆ ವಿದ್ಯೆಗೆ ಜಾಗ "ಮ್ಯೂಸಿಯಮ್" ಎಂಬ ವಿಚಿತ್ರ ವಿಲಕ್ಷಣ ವಸ್ತುಗಳ ಪ್ರದರ್ಶನ ಶಾಲೆಯೇ ಹೊರತು ಜನದ ನಡುವೆ ಅಲ್ಲ. ಅದು ಒಂದು ಜೀವಂತ ವಿದ್ಯೆಯಲ್ಲ. ಹೀಗೆ ಲೋಕಜೀವನಕ್ಷೇತ್ರವೇ ಎಲ್ಲರಿಗೂ ಗೊತ್ತಾಗಿರುವ ಕುರುಕ್ಷೇತ್ರ.

ಹೀಗೆ ಲೋಕಬೋಧೆ, ವಿವೇಚನಾಭ್ಯಾಸ, ಸಮಾಜ ಜೀವನಾಸಕ್ತಿ—ಇವು ಮೂರೂ ಸಾಹಿತ್ಯಕ್ಕೆ ಬೀದಿಯ ಪರದೇಶಿಗಳಲ್ಲ, ಆಪ್ತ ಬಂಧುಗಳು. ಆ ಮೂರು

ಕರ್ತವ್ಯಗಳೂ ಎಲ್ಲ ಕರ್ಣಾಟಕ ಸಂಘಗಳಿಗೂ ಉದ್ದೇಶದಲ್ಲಿರಬೇಕಾದವು. ರಾಯಚೂರು ಕರ್ಣಾಟಕ ಸಂಘ ಆ ಮೂರು ಕರ್ತವ್ಯಗಳನ್ನೂ ಅಂಗೀಕರಿಸಿಕೊಂಡು ನೆರವೇರಿಸಿಕೊಂಡು ಬಂದಿರುವುದು ಅದರ ಬಹುವರ್ಷಗಳ ಚರಿತ್ರೆಯಿಂದ ಕಂಡುಬರುತ್ತದೆ. ಈ ಸಂಘದ ಕಾರ್ಯಕರ್ತರಲ್ಲಿ ಉತ್ಸಾಹದ ಜೊತೆಗೆ ಸಾಮರ್ಥ್ಯ ಸೇರಿದೆ. ಇದರ ಅಧ್ಯಕ್ಷ ಮಹನೀಯರಾದ ಡಾಕ್ಟರ್ ಶ್ರೀ ಬಿ. ಜಿ. ದೇಶಪಾಂಡೆಯವರಲ್ಲಿ ಔದಾರ್ಯವೂ ಪ್ರಾಜ್ಞತೆಯೂ ವಿನಯವೂ ಧ್ಯೇಯನಿಷ್ಠೆಯೂ ಒಂದುಗೂಡಿವೆ. ಇದರ ಪ್ರಮುಖ ಸದಸ್ಯರು ಧನಸಹಾಯದ ಕೂಡ ಗೌರವವನ್ನೂ ತಂದುಕೊಟ್ಟಿದ್ದಾರೆ. ಈ ಸಂಸ್ಥೆ ಇನ್ನೂ ಬೆಳೆದು, ಮತ್ತೂ ಬೆಳೆದು, ನಾನಾಮುಖವಾದ ಜನಬೋಧನೆಗಾಗಿ ದುಡಿದು. ಯಶೋವಂತವಾಗುವುದೆನ್ನಲು ಬೇಕಾದಷ್ಟು ಶುಭಸೂಚನೆಗಳು ಕಾಣ ಬರುತ್ತಿವೆ.

ನನಗೆ ಸಂಘ ಸಂಸ್ಥೆಗಳ ಅನುಭವ ಕೊಂಚ ಉಂಟು. ಒಬ್ಬ ವ್ಯಕ್ತಿಮನುಷ್ಯನ ಜೀವನಮಾರ್ಗದಲ್ಲಿ ಹೇಗೋ ಒಂದು ಸಂಘದ ಜೀವನಮಾರ್ಗದಲ್ಲಿಯೂ ಹಾಗೆಯೇ ಏರಿಳಿತಗಳುಂಟು. ಕಾಲಗತಿ ಒಂದೇ ಸಮನೆ ಇರಲಾರದು. ಸಂದರ್ಭ ಪ್ರತಿಕೂಲ ವಾದಾಗ ನಾವು ಅಧೈರ್ಯಪಡಬಾರದು. ನಿಮ್ಮ ಪ್ರಯತ್ನಕ್ಕೆ ಕೊಂಚ ಜಯದ ಚಿಹ್ನೆ ತೋರಿದರೆ ಊರಲ್ಲಿ ಯಾರೋ "ಅವರದೇನು ಮಹಾ!" ಎಂದಾರು. ಅಂಥ ಮಾತು ಕಿವಿಗೆ ಬಿದ್ದಾಗ ರೇಗಬಾರದು, ಕುಗ್ಗಲೂಬಾರದು. ನೀವು ಚಂದಾ ಕೇಳಹೋದ ಕಡೆ ಹಣಕ್ಕಿಂತ ಉಪದೇಶ ಹೆಚ್ಚಾಗಿ ಬಂದೀತು. ಅದರಿಂದ ಬೇಸರ ಪಡಬಾರದು. ಮೀಟಿಂಗ್ ಕರೆದರೆ ಐವತ್ತು ಮಂದಿಯನ್ನು ನಿರೀಕ್ಷಿಸಿದ್ದಾಗ ಐವರು ಬಂದಿರಬಹುದು; ಐವರಿಗೆ ನೀವು ಸಿದ್ಧರಾಗಿದ್ದಾಗ ಐವತ್ತು ಮಂದಿ ಬಂದು ಪುರಸ್ಕಾರಕ್ಕಾಗಿ ನಿಮ್ಮನ್ನು ಕಾಡಿಸಬಹುದು. ನಮ್ಮ ಜನರು ಸಂಘ ಸಂಸ್ಥೆಗಳ ಮರ್ಯಾದೆಯನ್ನು ಇನ್ನೂ ಕಲಿಯಬೇಕಾಗಿದೆ. ಇಷ್ಟು ವರ್ಷ ಈ ರಾಯಚೂರಿನ ಕರ್ಣಾಟಕ ಸಂಘವನ್ನು ಕಾಪಾಡಿ ಬೆಳೆಸಿದ ದೈವ ಇನ್ನು ಮುಂದೆಯೂ ಅದರ ವಿಷಯದಲ್ಲಿ ಕೃಪೆತೋರೀತೆಂದು ನನಗೆ ನಂಬಿಕೆ ಸಂಪೂರ್ಣವಾಗಿದೆ. ನಿಮಗೆ ಜಯವಾಗಲಿ.

**ವಂದೇ ಮಾತರಂ**

# ಡಿ.ವಿ.ಜಿ. ಜನ್ಮ ಶತಮಾನೋತ್ಸವ ಸ್ಮೃತಿಮಾಲೆ

| | | |
|---|---|---|
| | | ರೂ.ಪೈ. |
| 1. ಮಂಕುತಿಮ್ಮನ ಕಗ್ಗ | | 6.00 |
| 2. ಬಾಳಿಗೊಂದು ನಂಬಿಕೆ | | 5.00 |
| 3. ಸಾರ್ವಜನಿಕದಲ್ಲಿ ಸಾತ್ತ್ವಿಕ | | 2.00 |
| 4. ಸಂಸ್ಕೃತಿ | | 6.00 |
| 5. ಕೆಲವು ಮಹನೀಯರು | | 5.00 |
| 6. ಕಾವ್ಯ ಕುಸುಮಾಂಜಲಿ | | 4.00 |
| 7. ಜೀವಸಾರ್ಥಕ್ಯ ದೀಪಿಕೆ | | 15.00 |
| 8. ವನಸುಮ | | 10.00 |
| 9. ಜೀವನ ಸೌಂದರ್ಯ ಮತ್ತು ಸಾಹಿತ್ಯ | | 10.00 |
| 10. ಡಿ.ವಿ.ಜಿ. ಅವರ ಜೀವನ ಚರಿತ್ರೆ | ಅಚ್ಚಿನಲ್ಲಿ | |
| 11. ಸಾಹಿತ್ಯಶಕ್ತಿ | ಅಚ್ಚಿನಲ್ಲಿ | |
| 12. ಧೀಮಂತ | ಅಚ್ಚಿನಲ್ಲಿ | |
| 13. ಮುನ್ನುಡಿಗಳು 1, 2 | ಅಚ್ಚಿನಲ್ಲಿ | |

THE BANGALORE PRESS